# ಗೊಂಡಾರಣ್ಯ

ಶಿವರಾಮ ಕಾರಂತ

ವಾಹಿನಿ ಪ್ರಕಾಶನ
ಜಯಚಾಮರಾಜ ರಸ್ತೆ, ಬೆಂಗಳೂರು-೨

ಮೊದಲನೆಯ ಮುದ್ರಣ ೧೯೫೪



ಮುಖಚಿತ್ರ

**ಕೆ. ಕೆ. ಹೆಬ್ಬಾರ್**

ಮುದ್ರಕರು:

ಎಂ. ಎಸ್. ಚಿಂತಾಮಣಿ, ಬಿ. ಎಸ್‌ಸಿ,

“ಈಸ್ಟರ್ನ್ ಪ್ರೆಸ್”, ಜಯಚಾಮರಾಜ ರಸ್ತೆ

# ಮೊದಲ ಮಾತುಗಳು

ಇಂದಿನ ಕಾಲಕ್ಕೆ ಅನ್ವಯಿಸುವ ಒಂದು ರಾಜಕೀಯ ಕಾದಂಬರಿ ಸ್ವಾತಂತ್ರ್ಯೋದಯದಿಂದ ತೊಡಗಿ ಸುಮಾರು ವರ್ಷಗಳ ವ್ಯಾಪ್ತಿಯುಳ್ಳದ್ದು. ವ್ಯಕ್ತಿಗಳು—ನನ್ನ ಗುರಿ ರಾಜಕೀಯದಲ್ಲಿ ನಲಿದಾಡುವ ಜನಗಳ ಅಯೋಗ್ಯತೆ, ]ರತೆ, ಅಪ್ರಾಮಾಣಿಕತೆ ಮೊದಲಾದ ಗುಣಗಳೇ ಇಲ್ಲಿ ಟೀಕೆಗೆ ]ವುದರಿಂದ—ಗೊಂಡಾರಣ್ಯವೆಂಬ ಕಾಲ್ಪನಿಕ ಸಂಸ್ಥಾನವನ್ನು ]ಂಡು, ಅದರ ರಾಜಕೀಯ ಚಿತ್ರಿಸಲು ತೊಡಗಿದ್ದೇನೆ. ಇಲ್ಲಿ ]ನರು, ಮುಖಂಡರು, ನಡವಳಿಕೆ, ಪರಿಸ್ಥಿತಿಯೆಲ್ಲವೂ ]ತದಲ್ಲಿ ಎಲ್ಲೆಂದರಲ್ಲಿ ಕಾಣಬಹುದಾದುವೇ

]ಂತ್ರ್ಯವೇನೋ ನಮಗೆ ಬಂದಿದೆ, ಆದರೆ ಪ್ರಜಾಪ್ರಭುತ್ವದ ದೇಶವನ್ನು ನಡೆಯಿಸಿಕೊಂಡು ಹೋಗಬಲ್ಲ ನೀತಿವಂತರಿಗೆ, ]ತೀರ ಅಭಾವ ಬಂದಿದೆ ಅಂಥವರಿದ್ದರೂ ಗುರುತಿಸ ], ತಾತ್ಕಾಲಿಕ ಲಾಭ, ರಾಗ ದ್ವೇಷಗಳಿಗೆ ಮನಕೊಡುವ ಸಮುದಾಯವು ಅದಕ್ಕೆ ತೆರುತ್ತಿರುವ ದಂಡವನ್ನೇ ಇಲ್ಲಿ ]ಿದೆ

ರಾಜಕೀಯ ಪಕ್ಷಗಳು ಕಾಲ್ಪನಿಕವಾದುವೇ ಆದರೂ—]ಿಗಳೂ ಸ್ಪಷ್ಟವಾಗಿ ಕಾಣುತ್ತಿರುವಂಥವೇ ಅವುಗಳು ]ು ಕೊಡುವ ಮುಖ್ಯ ಸಮಸ್ಯೆ—ಪ್ರಜಾಪ್ರಭುತ್ವದಲ್ಲಿ—]ಗಾಗಿ ಜನರೋ, ಪಂಗಡಗಳೋ ಹಿಡಿಯುವ ವಾಮ ಸತ್ಯಮಾರ್ಗ, ಹಿಂಸಾ ಮಾರ್ಗಗಳು ಜನರನ್ನು ದಾರಿಯಿಂದ ಒಲಿಸಲಾರದವರಿಗೆ ಈ ದಾರಿಗಳು ಸುಲಭ, ಯೆನ್ನಿಸುತ್ತವೆ ಅವುಗಳ ಪರಿಣಾಮವೇನು? ಹಿಂಸೆ, ]ಯಗಳೆಲ್ಲ ತಮ್ಮ ಚಲಾಕಿಯಿಂದ ಇತರರಿಗೆ ಕಾಣಿಸ ]ಮ ಆ ದಾರಿಯಲ್ಲಿ ಹೋಗುವವರು, ತಮ್ಮ ವೈರಿಗಳೂ ]ದರೆ ಫಲವೇನಾದೀತೆಂದು ಎಣಿಸಲಾರರು ಇಲ್ಲಿನ ಕಾಂಚನಮಾಲೆ ಅದನ್ನೂ ತೋರಿಸಿ ಬಿಡುತ್ತಾಳೆ

ಅಂಥ ನೀಚಮಾರ್ಗಗಳ ಪರಿಣಾಮವನ್ನು ಒಟ್ಟು ಸಮ. ಅನುಭವಿಸಬೇಕಾಗುತ್ತದೆ

ಇಂದು ಸ್ವಾತಂತ್ರ್ಯ ದೊರಕಿರುವಾಗ—ನಮಗೆ ಬೆಳೆಯಲು, ಜನರ ಒಳಿತಿಗಾಗಿ ದುಡಿಯಲು ಪರಮಾವಧಿಯ ಅವಕಾಶವಿದೆ ಅವಕಾಶವಿದ್ದರೇನು—ಸಾರ್ವಜನಿಕ ಜೀವನಕ್ಕೆ ಧುಮುಕುವ ಜನರ —ಆಕಾಂಕ್ಷೆ, ಬುದ್ಧಿ, ಪ್ರಾಮಾಣಿಕತೆಗಳೆಲ್ಲ ಬೇಕು ಇವ ಜನಸೇವೆ ಮಾಡುತ್ತೇನೆ ಅನ್ನುವವರ ಮನಸ್ಸಿನಲ್ಲಿ—ಜನತೆ ಸೇವೆಗಾಗಿಯೇ ಇದೆ ಎಂಬ ಪ್ರತ್ಯಕ್ಷ ಹೆಮ್ಮೆಯೆ ತುಂಬಿಕೊಂ ನಮ್ಮಲ್ಲಿ ಅತಿ ಉತ್ತಮರೆನ್ನುವವರಿಗೂ ಸಾಮ್ರಾಟರ ಪಿತ್ಥ ಕೊಂಡಿದೆ

ನಮ್ಮ ದೇಶದ ಸಮಸ್ಯೆಯನ್ನು ನಾವು ಇನ್ನೂ ಚಿ ಅರಿತಂತಿಲ್ಲ, ಆದರೂ ನಾವು ಲೋಕವನ್ನು ಅಶಾಂತಿಯಿಂದ ಉಳಿ ಹೊರಟಿದ್ದೇವೆ. ಲೋಕ ಇಬ್ಬಣವಾಗಿ ಕಾದಾಡಲು ನಿಂತಂತಿದೆ. ನಾವು ನಡುವೆ ನಿಂತು—'ಹಾಗಲ್ಲ, ಹೀಗೆ' ಎಂದು ಉಪದೇಶವನ ಮಾಡುತ್ತಿದ್ದೇವೆ ತುಂಬ ದೊಡ್ಡ ಕೆಲಸ ಆ ಕೆಲಸ ಯಾ ದೇಶದಿಂದ ಸಾಧ್ಯ. ..? ತನ್ನ ನಡತೆಯಲ್ಲಿ, ಆಳ ವಾಗಿ ನಡೆಯ ಬಲ್ಲ ಜನಗಳಿಂದ ಸಾಧ್ಯ ಇಂದು ಅನುಮಾನಿಸಿ, ಬೆದರಿ, ತತ್ತರಿಸಿ ನಿಂತ ರಾಶಿಯ ಮೇಲೆ ನಿಂತ ನಾವು—ಏಸ್ಯಕ್ಕೆ ನಾಯಕರಾಗಿ, ಶಾಂತಿಯನ್ನು ಉಳಿಸುವ ಮಾತೆಂದರೆ ಆತ್ಮವಂಚನೆಯಲ್ಲವೆ?

ಇದಕ್ಕೆ ಕಾರಣ—ನಮ್ಮ ಸಂಸಾರದಲ್ಲೇ ಸ್ವಾರ್ಥ ತ. ಮನೆಯಲ್ಲೇ ವಂಚನೆ ನಿತ್ಯ ಜೀವನದ ಉಸಿರಾಗಿದೆ ಜಗತ್ತನ್ನು ಮಾತಿಂದ ಮುಗ್ಧಗೊಳಿಸುವ ಚಮತ್ಕಾರ ತಿಳಿಯುತ್ತೇವೆ ನಾವು

ಶಾಂತಿ–ಅಹಿಂಸೆ–ಸತ್ಯಗಳು–ನಮ್ಮಲ್ಲಿ ಮೊದಲು ನಮ್ಮ ನಾಡಿನ ಸರಕಾರ ಆ ದಾರಿಯಲ್ಲಿ ನಡೆಯಲಿ ಆಗ ಲೋಕಕ್ಕೆ ಸಲಿಸುವ ಕಾಣಿಕೆ ಸಲ್ಲಿಸಲು ಶಕ್ತರಾದೇವು

**ಶಿವರಾಮ ಕಾ**

# ಮುಖಚಿತ್ರದ ಬಗ್ಗೆ

ಈ ನಗೆಗಿನ ನಮ್ಮೆಲ್ಲ ಕೈ ಹೊತ್ತಿಗೆಗಳ ಮುಖಚಿತ್ರ ತ್ರಿವರ್ಣ ರಂಜಿತವಾದವು ಈ ಹೊತ್ತಿಗೆಗೆ, ತಾವು ಕಾದಂಬರಿಯಲ್ಲಿ ಚಿತ್ರಿಸಿರುವ ಷಯಕ್ಕೆ ತಕ್ಕ ಅರ್ಥಪೂರ್ಣ ಮುಖಚಿತ್ರವಿರಬೇಕೆಂದು ಶ್ರೀ. ರಂತರರು ಬಯಸಿ, ತಾವೇ ಹೆಸರಾಂತ ಕಲೆಗಾರ ಶ್ರೀ ಕೆ. ಕೆ. ೆಬ್ಬಾರ್ ಅವರಿಂದ ಚಿತ್ರ ಬರೆಯಿಸಿ ಕಳುಹಿಸಿದರು ಕಾದಂಬರಿಯ ಸ್ತುವಿಗೆ ಸರಿಹೊಂದುವ ಚಿತ್ರ ಬರೆದು ಕೊಟ್ಟುದಕ್ಕಾಗಿ ಶ್ರೀ ಕೆ ಹೆಬ್ಬಾರ್ ಅವರಿಗೆ ನಾವು ಕೃತಜ್ಞರು ಹೆಬ್ಬಾರ್ ಅವರ ಕಲೆ ತಕರು ಮೆಚ್ಚುವರೆಂಬ ಸಂಪೂರ್ಣ ನಂಬಿಕೆ ನಮಗಿದೆ

**ವಾಹಿನಿ ಪ್ರಕಾಶನ**

# ಅಧ್ಯಾಯ ೧

ಗೊಂಡಾರಣ್ಯವೆಂಬುದು ಹೆಸರು ಹೇಳಬಹುದಾದಷ್ಟು ದೊಡ್ಡ ರಾಜ್ಯವಲ್ಲ ಭಾರತದ ಅನೇಕ ಸಣ್ಣ ಪುಟ್ಟ ಸಂಸ್ಥಾನಗಳಲ್ಲಿ ಅದೂ ಒಂದು. ಆಶ್ರಿತರಾಜರ ಮನೆತನವೊಂದು, ನೂರಿನ್ನೂರು ವರ್ಷಗಳಲ್ಲಿ, ಪರಂಪರೆಯಿಂದ ಅದನ್ನು ಆಳಿಕೊಂಡು ಬಂದಿತ್ತು. ಭಾರತಕ್ಕೆ ಬ್ರಿಟಿಷರೂ, ಫ್ರೆಂಚರೂ ಹೊಕ್ಕಾಗಿನಿಂದಲೂ, ಇಲ್ಲಿನ ಅರಸರನ್ನು ಪಗಡೆಯ ದಾಳದಂತೆ ಬಳಸಿ, ತಂತಮ್ಮ ಒಳಸಂಚುಗಳಲ್ಲಿ ಉಪಯೋಗಿಸಿಕೊಂಡು ಈ ರಾಜ್ಯಕ್ಕೆ ಅನೇಕ ಭನಣೆಗಳನ್ನು ತಂದೊಡ್ಡಿದ ಕಾಲವೂ ಹಿಂದೆ ಇದ್ದಿತ್ತು. ಕಟ್ಟಕೊನೆಗೆ, ಅಲ್ಲಿನ ಅರಸನೊಬ್ಬನ ಪುಣ್ಯ ವಿಶೇಷದಿಂದೆಂಬಂತೆ, ಅವನ ನೆರವು, ಅಂತ್ಯದಲ್ಲಿ ಗೆದ್ದ ಬ್ರಿಟಿಷರಿಗೆ ಅನುಕೂಲವಾಯಿತು. ಅಲ್ಲಿಂದ ಮುಂದೆ ಈ ಅರಸನೂ, ಅವನ ಸಂತತಿಯವರೂ ಗೊಂಡಾರಣ್ಯದ ಅರಸುಗಳೆನಿಸಿ ಬಂದರು. ಪ್ರಬಲರಾದ ಬ್ರಿಟಿಷರು, ಅವರನ್ನು ಮೋಸಗೊಳಿಸಿಯೋ, ಸೋಲಿಸಿಯೋ ಮಟ್ಟಡಗಿಸುವುದು ಸುಲಭದ ಕೆಲಸವಾಗಿತ್ತು. ಯಾವ ಕಾರಣದಿಂದಲೋ ಏನೋ, ಹಾಗೆ ಮಾಡಲಿಲ್ಲ. ಅಂದಿನ ದೊರೆ ರಾಜಾ ವಿಕ್ರಮ ಚಿದಂಬರ ರಾಜನನ್ನು ಅವರು ಪದಚ್ಯುತಿಗೊಳಿಸಲಿಲ್ಲ. ಬದಲು ಅವನಿಗೆ ಮನ್ನಣೆ, ಸನ್ನದು, ಬಿರುದು, ಬಾವಲಿಗಳನ್ನು ಸಲಿಸಿ ಗೌರವಿಸುತ್ತ ಬಂದರು. ಅನಂತರ ಬ್ರಿಟಿಷರ ಕೃಪೆಯಿಂದಲೇ ಅವರ ಅರಸೊತ್ತಿಗೆಯ ಬೆಳಕು ಉಳಿಯಿತು. ಬ್ರಿಟಿಷ್ ಸಲಹೆಗಾರನೊಬ್ಬ ಈ ಮನೆತನದ-ರಾಜಗುರುವೋ ರೆಸಿಡೆಂಟನೋ ಆಗಿ ಉಳಿದುಕೊಂಡ.

ಅಂದಿನ ಚಿದಂಬರ ರಾಜನಿಂದ ತೊಡಗಿ ಇಂದಿನ ರಾಜಾ ವಿಕ್ರಮ ಪ್ರತಾಪಚಂದ್ರನ ತನಕವೂ–ಬ್ರಿಟಿಷರಿಗೂ, ಇವರಿಗೂ ಯಾವೊಂದು ಘರ್ಷಣೆ ಬಾರದೆ, ಸ್ನೇಹ ಸಂಬಂಧಗಳು ಉಳಿದು ಬಂದುವು

'ಗೊಂಡಾರಣ್ಯ' ಎಂಬ ಹೆಸರೇ ಹೇಳುವಂತೆ, ರಾಜ್ಯದ ಬಹು ಭಾಗ ಅರಣ್ಯ ಪ್ರದೇಶ ಇಲ್ಲಿನ ಅರಸುಗಳಿಗೂ ಶಿಕಾರಿಯ ಮರುಳು, ರೆಸಿಡೆಂಟನಿಗೂ ಅದೇ ಮರುಳು ಇಬ್ಬರಿಗೂ ಈ ಬೇಟೆಯ ಹುಚ್ಚು ಆಪ್ತ ವ್ಯಸನಾಯು. ಇನ್ನು ದೇಶದ ಒಳ ಆಡಳಿತೆಯ ವಿಚಾರದಲ್ಲಿ ರೆಸಿಡೆಂಟ್ ಕೈ ಹಾಕುತ್ತಿರಲಿಲ್ಲ ಅಂಥ ಪರಿಸ್ಥಿತಿಯೂ ಬಂದೊದಗಲಿಲ್ಲ

ಇಲ್ಲಿನ ರಾಜ್ಯ ಸಂಪತ್ತು–ಎಂದರೆ ತಲಾಂತರಗಳಿಂದ ಬಂದ ಅರಮನೆ, ಸಿಂಹಾಸನ, ಅಲಂಕಾರ, ಆಭರಣ, ಆಸ್ತಿ, ಪಾಸ್ತಿ, ಕೂಡಿಟ್ಟ ಹಣ, ಸಣ್ಣ ಅಲಂಕಾರಿಕ ಸೇನೆ–ಇದ್ದವು ಈ ಅರಸು ಮನೆತನದವರು ಅಷ್ಟೊಂದು ದುಂದುಗಾರರಾಗಿರಲಿಲ್ಲ ಇದ್ದುದರಲ್ಲಿ ಈಗಿನ ದೊರೆ ಪ್ರತಾಪಚಂದ್ರನೇ ತುಸು ಧಾರಾಳಿಯೋ ವಿಲಾಸಿಯೋ ಅನ್ನಬೇಕು ಅಂದರೆ ಹಿಂದಿನ ಅರಸುಗಳಿಗಿಂತಲೂ ಈತ ಹೆಚ್ಚು ದುಂದುಗಾರ ಆದರೂ ಭಾರತದ ಇನ್ನೂ ಅನೇಕ ಅರಸರನ್ನು ಮೀರಿಸದಂತಹ ವಿಲಾಸ ಅವನದಲ್ಲ. ಬೇಟೆಯ ಮರುಳು, ಹೆಣ್ಣಿನ ಮರುಳು ಅವನಿಗೂ ಇತ್ತು ಇವೆರಡರಲ್ಲೂ ಅವನನ್ನು ಮೀರಿಸಬಲ್ಲ ಶ್ರೀಮಂತರು ಗೊಂಡಾರಣ್ಯದಲ್ಲೇ ಇದ್ದಾರೆ ಈತನ ನಡತೆಯೆಂಬುದು-ಸಹಿಸಲಾರದ್ದು, ಜಿಗುಪ್ಸೆಯನ್ನು ತರುವಂಥದು ಎಂದವರಿಲ್ಲ ವೊನ್ನೆ ಮೊನ್ನೆಯತನಕ ಪ್ರಜೆಗಳ ಪಾಲಿಗೆ ಅವನೆಂದೂ ದುಷ್ಟನೆನಿಸಿರಲಿಲ್ಲ ಪ್ರಜೆಗಳನೇಕರ ಪಾಲಿಗೆ ಆತ 'ಪ್ರತ್ಯಕ್ಷ ದೇವತೆ'ಯಾಗಿಯೇ ಉಳಿದ್ದಾನೆ. ಹಾಗೆ ಉಳಿದಿರುವುದಕ್ಕೆ ಸಂಸ್ಥಾನದ ಹಿಂದುಳಿದ ಸ್ಥಿತಿಯೇ ಕಾರಣವಾಗಿರಬಹುದು ರಾಜ್ಯದಲ್ಲಿ ನೆಮ್ಮದಿ ನೆಲಸಿತ್ತು, ಕ್ಷಾಮ ಡಾಮರಗಳಿರಲಿಲ್ಲ. ಓದು ಬರಹಗಳ ಪ್ರಚಾರ ತೀರ ಕಡಿಮೆ ವಿಕ್ರಮ ನಗರದಂತಹ ಮುಖ್ಯ ನಗರಗಳಲ್ಲಷ್ಟೆ ಶಾಲಾ ಕಾಲೇಜುಗಳಿವೆ. ವಿದ್ಯುತ್ ಮೊದಲಾದ ನಾಗರಿಕ ಸೌಕರ್ಯಗಳು ಕೆಲವು ನಗರಗಳಲ್ಲಿ ಈಚೀಚೆಗೆ ತಲೆ ಹಾಕಿವೆ ಹೊರಗಿನ ಪ್ರಾಂತಗಳೊಡನೆ ರಾಜಧಾನಿಯಾದ ವಿಕ್ರಮನಗರಕ್ಕೆ ರೈಲು ಸಂಪರ್ಕವಿತ್ತಾದರೂ,

ನಾಡಿನ ಒಳ ಸಂಪರ್ಕವೆಲ್ಲ—ಗಾಡಿದಾರಿ, ಮೋಟರು ದಾರಿಗಳಿಂದ ಅವೆಲ್ಲ ಸಾಮಾನ್ಯವಾದುವು. ನಿಸರ್ಗದ ಕೃಪೆಯಿಂದ ಮಳೆಯು ಧಾರಾಳವಾಗಿ ಒದಗುತ್ತಿದ್ದ ದೇಶವಾದುದರಿಂದ ಬೆಳೆಗಳು ಚೆನ್ನಾಗಿ ಬರುತ್ತಿದ್ದುವು. ಜನರ ಕಣ್ಣು ಹೊರಗಿನ ಜಗತ್ತಿಗೆ ತೆರೆಯದಿದ್ದುದರಿಂದ ನಾಡಿನಲ್ಲಿ ಅತೃಪ್ತಿ ಕಡಿಮೆಯಾಗಿತ್ತು. ಅದನ್ನು 'ಸುಭಿಕ್ಷ'ವೆನ್ನುವ ಬದಲು, ವಿಶೇಷ ಅಸಂತುಷ್ಟಿ ಇಲ್ಲದ ನಾಡು—ಎಂದರೂ ಅನ್ನಬಹುದು. ಇಲ್ಲಿನ ಪ್ರಜಾಗಣಗಳಲ್ಲಿ ಆದಿವಾಸಿಗಳ ಸಂಖ್ಯೆಯು ಸಾಕಷ್ಟು ದೊಡ್ಡದಾಗಿದೆ. ಅವರಂತು ನಾಗರಿಕತೆಯನ್ನು ಕಂಡವರಲ್ಲ. ಅದು ಏಕೆಂದು ತಿಳಿದವರೂ ಇಲ್ಲ.

ಗೊಂಡಾರಣ್ಯವು ಬಾಗಿದ ಬಿಲ್ಲಿನಂತಿರುವ ಒಂದು ಭೂಭಾಗ. ಬಿಲ್ಲಿನ ಬಾಗೆಂಬುದು—ಉನ್ನತಾಕಾರದಲ್ಲಿ ಹಾಸಿ ಹರಡಿದ ಪರ್ವತಾವಳಿಯ ಸರಗು. ಅದು ನಾಡಿನ ಪಡು, ತೆಂಕು, ಮೂಡಣಗಳನ್ನು ವಿಂಗಡಿಸುವ ಮೇರೆ. ಇದರಿಂದ ಆವೃತವಾಗಿರುವ ಸಪಾಟಣ ಪ್ರದೇಶ-ಪಡುವಣದಲ್ಲಿ ಮಲೆನಾಡಾಗಿದ್ದು ಮುಂದೆ ಸರಿದಂತೆ ಬಯಲು ಸೀಮೆಯಾಗುತ್ತ ಹೋಗುತ್ತದೆ. ಈ ಭೂಭಾಗದಲ್ಲಿ ನೂರೈವತ್ತು ಲಕ್ಷ ಮಂದಿ ವಾಸಿಸುತ್ತಿರಬಹುದು. ಈ ಪ್ರಾಂತವನ್ನು ಹತ್ತೆಂಟು ಜಿಲ್ಲೆಗಳಾಗಿ ಒಡೆದು—ಆಡಳಿತೆಯ ಸೌಕರ್ಯಕ್ಕಾಗಿ ವಿಭಾಗಿಸಿದ್ದಾರೆ. ವಿಕ್ರಮನಗರ (ರಾಜಧಾನಿ), ಭೀಮನೂರು, ಮಾನನಗರ, ಶ್ಯಾಮನಗರಗಳು ಇದ್ದುವರಲ್ಲಿ ದೊಡ್ಡ ಪಟ್ಟಣಗಳು, ತುಂಬಿದ ಜನವಸತಿಯುಳ್ಳವು. ಅಲ್ಲಿ ನಾಗರಿಕತೆಯು ಸ್ವಲ್ಪ ಹೆಚ್ಚಾಗಿದೆ. ಉಳಿದ ಭಾಗವೆಲ್ಲ ಹೇಳ ಹೆಸರಿಲ್ಲದ ಹಳ್ಳಿಗಾಡುಗಳು.

ಇಲ್ಲಿಯ ತನಕ ಭಾರತವನ್ನು ಕದಲಿಸಿದ, ಕೆರಳಿಸಿದ ವಿವಿಧ ರಾಜಕೀಯ ಆಂದೋಲನಗಳು, ಮೇಲೆ ಹೇಳಿದ ಮುಖ್ಯ ಪಟ್ಟಣಗಳನ್ನು ಬಿಟ್ಟರೆ, ಗ್ರಾಮಾಂತರಗಳಲ್ಲಿ ಹೆಚ್ಚಿನ ಪರಿಣಾಮವನ್ನುಂಟು ಮಾಡಿರಲಿಲ್ಲ. ಅಂತಹ ಅಶಾಂತಿ ಮೊದಲಿಗೆ ಕಾಣಿಸಿದುದು ಉಪ್ಪಿನ ಸತ್ಯಾಗ್ರಹದ ವೇಳೆಯಲ್ಲಿ. ಅದೂ ಕ್ಷೀಣವಾಗಿ. ತುಸು ಪ್ರಬಲಿಸಿ ಕೊಂಡುದು ೧೯೪೨ರಲ್ಲಿ. ಆಗ ಹಳ್ಳಿಯ ಜನರು ಹೆಚ್ಚಾಗಿ ಇವರಲ್ಲಿ ಭಾಗ ವಹಿಸದೆ ಹೋದರೂ—ಪೇಟೆ, ಪಟ್ಟಣಗಳಲ್ಲಿ ಮೆರವಣಿಗೆ,

ಪ್ರಭಾತಫೇರಿ, ವಿಧ್ವಂಸಕ ಕೃತಿಗಳೂ ನಡೆದು–ಅನೇಕ ಪುರವಣಿಗ ರನ್ನು ಧುರೀಣತ್ವಕ್ಕೆ ಏರಿಸಿಬಿಟ್ಟವು ರಾಜನ ಅಸಡ್ಡೆಯಿಂದಾಗಿ ಈ ಚಳವಳ ಪ್ರಕೋಪಕ್ಕೆ ಮುಟ್ಟದೆ, ಪ್ರೋತ್ಸಾಹವು ಸಾಲದೆ ತನ್ನಂತೆ ಶಾಂತವಾಯಿತು. ಆದರೆ ಭಾರತದ ಸ್ವಾತಂತ್ರ್ಯೋದಯದ ಬೆನ್ನಿಗೆ ಬೀಸಿದ ಬಿರುಗಾಳಿ ಮಾತ್ರ ಇಲ್ಲಿನ ಜನರ ಮನಸ್ಸನ್ನು ಹೆಚ್ಚಾಗಿ ಕದಲಿಸಿತು. ಬರಿಯ ಒಂದು ವರ್ಷದ ಹಿಂದೆ–ವಿಜಯದಶಮಿಯ ದಿನ, ಆನೆಯೇರಿ ಮೆರವಣಿಗೆಯಲ್ಲಿ ಹೋಗುತ್ತಿದ್ದ ಪ್ರತಾಪರಾಯ ನನ್ನು ಕಾಣುವುದೊಂದು ಕಣ್ಣಿನ ಹಬ್ಬವೆಂದು ತಿಳಿದ ಜನರೇ, ಒಂದೇ ವರ್ಷದಲ್ಲಿ ಆ ನೆನಪು ಮರೆತವರಂತೆ ವರ್ತಿಸಿದರು ಅರಸನ ವಿರುದ್ಧ ವಾಗಿ ಕೂಗಿದರು ನಿತ್ಯಜೀವನದಲ್ಲಿ ಹೇಳ ಹೆಸರಿಲ್ಲದಂಥ ಹತ್ತಾರು ಮಂದಿ–ವೀರ, ಧೀರ ನೇತಾರರೆನಿಸಿದರು. ಅಂಥವರು ರಾಜನ ಹೆಸರನ್ನು ಬಹಿರಂಗದಲ್ಲಿ ಅವಮಾನಿಸಿದರು ಪ್ರತಾಪರಾಜ ನಾಲ್ಕೆಂಟು ವಿಲಾಸಿನಿಯರ ವಿಟನೆನಿಸುವ ಬದಲು, ಮೃಗಗಳ ಶಿಕಾರಿಯಾಡುವ ಬದಲು, ಸಾವಿರಾರು ಸ್ತ್ರೀಯರ ಮಾನಭಂಗಕ್ಕೆ ನಿಂತ, ರಾಜ್ಯ ಸಂಪತ್ತನ್ನು ಕೇವಲ ಸ್ವಾರ್ಥಕ್ಕಾಗಿಯೆ ಸುಲಿಯಲು ಹೊರಟ– ಅಧಮನೆನಿಸಿದ. ಅಂಥ ದೊರೆಗಳು ಭಾರತದಲ್ಲಿ ಹಲವರಿದ್ದುದೂ ನಿಜ ಆದರೆ ಪ್ರತಾಪ ರಾಜ ಇಂಥ ಹೊಯ್ಕಾಲೆಗಳಿಗೆ ತಕ್ಕವನಲ್ಲ ವೆಂದು ಅವನನ್ನು ಬಲ್ಲ ಜನರು ನುಡಿಯುತ್ತಾರೆ. ಅವನದು–ಬಡವರ ರಕ್ತ ಹೀರಿ ದಬ್ಬಾಳಿಕೆ ನಡೆಯಿಸುವ ಪ್ರವೃತ್ತಿಯಾಗಿರಲಿಲ್ಲ ಆದರೆ ಪ್ರಜಾ ಪ್ರಭುತ್ವದ ಯುಗವು ಉದಯಿಸಿದಾಗ, ಹತ್ತು ಜನ ಸಾರಿದ ಸುಳ್ಳೂ ಸತ್ಯವಾಗಬಲ್ಲುದಷ್ಟೆ.

ಬ್ರಿಟಿಷರು ಭಾರತವನ್ನು ಬಿಟ್ಟು ಹೋದ ಮರುದಿನ, ಅವರು ಗೊಂಡಾರಣ್ಯದಲ್ಲಿ ನಟ್ಟ ರೆಸಿಡೆಂಟನೂ ಇಲ್ಲದಾದ ರಾಜ ಸ್ವತಂತ್ರ ನಾದ. ಪರಂಪರೆಯಿಂದ ಅಧಿಕಾರ ನಡೆಸಿ, ಗೌರವ ಪಡೆದು ಬಂದ ಅರಸು–ತಾನಾಗಿಯೇ ಅವನ್ನೆಲ್ಲ ಒಂದು ಹರಿವಾಣದಲ್ಲಿರಿಸಿ–ಖಾದಿ ಟೋಪಿ ಧರಿಸಿದ ಸ್ವಪ್ರತಿಷ್ಠಿತನಾದ ವಿಕ್ರಮನಗರದ ಒಬ್ಬ ಧುರೀಣನ ಕೈಗೆ 'ಜೀ' ಎಂದು ಅರ್ಪಿಸಲು ಹಿಂದು ಮುಂದೆ ನೋಡಿದ. 'ಉಳಿ ದವರು ಏನು ಮಾಡುತಾ್ತರೆ; ಕಾದು ನೋಡುತ್ತೇನೆ' ಎಂದು ದಿನ

ಕಳೆದ. ದೇಶದ ಹೊರಗಣ ಸುದ್ದಿಗಳು ಬರುತ್ತಲೇ ಇದ್ದವು. 'ಜೀ' ಎಂದ ದೊರೆಗಳನ್ನು ಕಂಡು ಕುಗ್ಗಿದ, ಎನ್ನದವರನ್ನು ಕಂಡು ಹಿಗ್ಗಿದ. ಆ ನಡುವೆ ದೇಹಲಿಯ ಮುತ್ಸದ್ದಿಗಳು ವಿಕ್ರಮನಗರಕ್ಕೂ ಬಂದು ಹೋದರು. ಅವರು ಅವನನ್ನು ಭೇಟಿಯಾದರು ಏನು ಹೇಳಿದರೋ-ತಿಳಿಯದು. ದೊರೆಯನ್ನು ಕಂಡುದಕ್ಕಿಂತ ತುಸು ಹೆಚ್ಚಾಗಿಯೇ, ಪ್ರಜೆಗಳ ಧುರೀಣರೆನಿಸಿದವರನ್ನು ಕಂಡರು ಆ ಮರುದಿನ ಪ್ರತಾಪ ಚಂದ್ರ ಬ್ರಿಟಿಷರ 'ಪಂಚಮ ದಳ'ಕ್ಕೆ ಸೇರಿದವನೆಂಬ ಆರೋಪವೂ ಹುಟ್ಟಿಕೊಂಡಿತು. ಅದರ ಪರಿಣಾಮವೆಂದರೆ-ನಾಡಿನ ಹಿರಿ, ಕಿರಿಯ ನಾಗರಿಕರೆಲ್ಲ ಕಲೆತು ಬಹಿರಂಗವಾಗಿ 'ಅಧಮ ಪ್ರತಾಪಚಂದ್ರನ ದಬ್ಬಾಳಿಕೆಯು ಕೊನೆಗಾಣಲಿ' ಎಂದು ಕೂಗತೊಡಗಿದ್ದು. ಕೂಗಿ, ಕೂಗಿ ತಮ್ಮ ಗಂಟಲ ಬಲದಿಂದಲೇ ಸ್ವಾತಂತ್ರ್ಯವನ್ನು ಗಳಿಸಿದ್ದು.

ಈ ಎಲ್ಲ ಗಲಭೆ ನಡೆಯುವಾಗ ದೊರೆ ಮುಂಬಯಿಗೆ ಆಪ್ತಾ ಲೋಚನೆಗೆ ಧಾವಿಸಿದ್ದ. ರಾಜಧಾನಿಯಲ್ಲಿ ದೀಪದ ಸ್ತಂಭಗಳ ರುಂಡಗಳು ಚಂಡಾಡುತ್ತಿವೆಯೆಂದು ಕೇಳಿದವನೇ ಊರಿಗೆ ಧಾವಿಸಿ ಬಂದ ವಿಕ್ರಮನಗರದ ನಾಲ್ಕು ಮಂದಿ ಪ್ರಮುಖರಿಗೆ ಹೇಳಿ ಕಳುಹಿಸಿದ, 'ನಿಮಗೇನಾಗಬೇಕು?' ಎಂದೂ ವಿಚಾರಿಸಿದ. ಸಂಧಿ ಸಾಧಕರಾದ ಹಲವರು ಅವನ ಕರೆಗೆ ಕಿವುಡಾದರು ಅವನ ಆಪ್ತರು ಅನೇಕರು ಧೈರ್ಯಗುಂದಿ ಮೂಕರೂ ಆದರು ರಾಜಾಶ್ರಯದಲ್ಲಿಯೇ ಬೆಳೆದವರೂ, ಸಾಂಪ್ರದಾಯ ಪ್ರಿಯರೂ ಅವನನ್ನು ಎತ್ತಿಕಟ್ಟಿದರು. 'ರಕ್ತದ ಕೋಡಿ ಹರಿಸಲು' ಪ್ರೇರಿಸಿದರು ಪ್ರತಾಪಚಂದ್ರನಿಗೆ ಸೇನೆಯಿತ್ತಾದರೂ-ಶತಮಾನಗಳಿಂದ ಕಾದಾಡಿದವರಲ್ಲ ಅವರನ್ನು ನಂಬಿ ತಾನು ದಿಟ್ಟತನ ತೋರಿಸಬಾರದೆಂದೂ ಅವನಿಗೆ ಅನಿಸಿತು. ಅಷ್ಟರಲ್ಲಿ ಹಲವಾರು ಸಾಮಂತ ಅರಸುಗಳ ಎದೆಯೂ, ಅರಮನೆಗಳ ಗೋಡೆಗಳೂ ಕುಸಿದು ಬೀಳುತ್ತಿರುವ ಸುದ್ದಿ ಅವನಿಗೂ ಸಿಗುತ್ತಿತ್ತು. ಆತನ ಧೈರ್ಯ ಕುಂದಿತು. ತನ್ನ ಪ್ರಜೆಗಳು ಕುರಿಗಳಾಗಿದ್ದರೂ, ಅವರ ಮೇಲೆ ಕೈಮಾಡಿದರೆ ಹೆಚ್ಚಿನ ವಿಪತ್ತೇ ಸರಿ-ಎಂದು ತೋರಿ ಬಂದಿತು. ಆ ಗಳಿಗೆಯಲ್ಲಿ-ಆತ ತನ್ನವರನ್ನು ಮರೆತು, ತನಗೆ ಪ್ರತಿ ಕಕ್ಷಿಯಾಗಿ ನಿಂತ, ಜನ ಮುಖಂಡನೆನಿಸಿದ ಹಿಂಜಿ ವಾಮನರಾಯ

ನನ್ನು ಕರೆಯಿಸಿಕೊಳ್ಳಬೇಕಾಯಿತು–ಸಂಧಾನಕ್ಕೆ. ಡಿಲ್ಲಿಗೆ ಒಂದು ಕಾಗದ ಬರೆದು ಮುಗಿಸಿಕೊಳ್ಳಬಹುದಾದ ಪರಿಸ್ಥಿತಿಯನ್ನು ಈ ಸ್ವಾಭಿಮಾನಶೂನ್ಯ ಸಂಧಾನದಲ್ಲಿ ಮುಗಿಸುವಂತಾಯಿತು

ಊರಿನ ಕೆಲವೊಬ್ಬರು 'ತಡಮಾಡ ಬೇಡಿ, ವಾಮನರಾಯನನ್ನು ಕರೆಯಿಸಿ ಮಾತುಕತೆ ನಡೆಯಿಸಿ' ಎಂದು ಬೋಧಿಸಿದ್ದರು ಆಗ 'ಯಾರವನು?' ಎಂದು ದೊರೆಯು ತನ್ನ ನಿಜವಾದ ಅಜ್ಞಾನವನ್ನು ಪ್ರಕಟಿಸಿದ ಆ ಹೆಸರನ್ನು–ದಸರೆಯ, ದರ್ಬಾರಿನ ಆಮಂತ್ರಣ ಕೊಡುವ ಪಟ್ಟಿಯಲ್ಲಿ ಕಾಣುವಂತಿರಲಿಲ್ಲ ಊರಿನ ಸಂಭಾವಿತರ ಸಾಲಿನಲ್ಲಾಗಲಿ, ಶ್ರೀಮಂತರ ಸಾಲಿನಲ್ಲಾಗಲಿ ಕೇಳಿ ತಿಳಿದವನಲ್ಲ. ಈಗ ಹೆಸರನ್ನಾದರೂ ತಿಳಿಯಲು ಕುತೂಹಲಪಟ್ಟು ವಿಚಾರಿಸಿದಾಗ–ಸಚಿವ ಕೃಷ್ಣಮೂರ್ತಿ, ಆತ ಆ ಪ್ರಾಂತದವನಲ್ಲವೆಂದೂ, ೧೯೪೭ರ ವೇಳೆಗೆ ಅಲ್ಲಿಗೆ ಬಂದು, ಕ್ರಾಂತಿಯ ಬೀಜವನ್ನು ಬಿತ್ತಿ, ಅದರ ಬೆಳೆ ಕೊಯ್ಯಲು ಕಾಯುತಿದ್ದ ಒಬ್ಬ ಮಹಾನುಭಾವನೆಂದೂ ತಿಳಿದಿತ್ತು. ಊರವರಿಗಿಂತಲೂ ಪರಕೀಯರಿಗೆ ಕೀರ್ತಿಗಳಿಸುವುದು ಸುಲಭ ಕೆಲಸ. ಆದರೇನು–ಅರಸನಿಗೆ ಬೇರೆ ಉಪಾಯವಿರಲಿಲ್ಲ ಜನ ಮೆಚ್ಚಿದ ಮುಖಂಡ–ಅವನಲ್ಲವೆ ತನ್ನ ನೌಕರರೇ ಈತನಕ ಅವನ ಹೆಸರನ್ನು, ಮಹಿಮೆಯನ್ನು ತನ್ನಿಂದ ಅಡಗಿಸಿ ಇರಿಸಿರಬಹುದು. ಈಗ? ಅವನೇ ಜನಮುಖಂಡನಾದ ಮೇಲೆ ಅವನನ್ನು ಕರೆಯಿಸಿಕೊಳ್ಳಬೇಕಾದುದು ಅನಿವಾರ್ಯ ತಡವಾದಷ್ಟು ಹಾಸಿಯಿದೆ–'ಚಲೋ, ವಿಕ್ರಮನಗರ' ಯಾತ್ರೆಯ ಬೆದರಿಕೆ ಹುಟ್ಟಿದೆ ವಿಕ್ರಮನಗರಕ್ಕೆ ಬಂದ ಮೇಲೆ ಅದು–'ಚಲೋ ರಾಜಭವನ್' ಚಳವಳವಾಗದಿದ್ದೀತೇ? ಈಗಾಗಲೇ ಒಂದೆರಡು ಕಡೆ ಪೋಲೀಸು ಠಾಣೆಗಳಿಂದ–ಕೋವಿ, ಬಾರೂದುಗಳು ಕಾಣೆಯಾಗಿವೆ ಪರಿಸ್ಥಿತಿ ತೀರ ಹದಗೆಟ್ಟರೆ ತಾನು ಉಳಿಯಲಾರೆ–ಎಂಬ ವಿವೇಕ ಉದಯಿಸಿ–ಅದೇ ಹಿಂಜಿ ವಾಮನರಾಯನ ಬಳಿಗೆ ಸಂಧಾನಕ್ಕೆ ಜನರನ್ನು ಅಟ್ಟಬೇಕಾಯಿತು

ಯಾವ ಮಹಾದ್ವಾರದಿಂದ, ಪ್ರತಾಪರಾಜನ ವಿಜಯದಶಮಿ ಮೆರವಣಿಗೆ ವೈಭವಯುತವಾಗಿ ಹೋಗಿ ಬರುತ್ತಿತ್ತೋ, ಅದೇ ಬಾಗಿಲಿನಿಂದ, ಸಮಾನ ವೈಭವದಿಂದ (ಶಿಸ್ತು ಇಲ್ಲದಿದ್ದರೂ), ಹಿಂಜಿ

ವಾಮನರಾಯನ ಮೆರವಣಿಗೆ ಅರಮನೆಗೆ ಬರುವಂತಾಯಿತು. ಅವನ ಹಿಂದು ಮುಂದೆಲ್ಲ ಜನ ಸಮುದ್ರ ಅವರ ಕೈಗಳಲ್ಲಿ ಹಳದಿ ಬಣ್ಣದ ಬಾವುಟಗಳು! ಅವರ ತಲೆಯ ಮೇಲೆ ಹಳದಿ ಬಣ್ಣದ ಟೋಪಿಗಳು. ಅವರ ಗಂಟಲಲ್ಲಿ 'ಜೈ–ವಾಮನರಾಯ!' ಜಯಧ್ವನಿಗಳು ಈ ಅನಭಿಷಿಕ್ತ ದೊರೆ, ನೇತಾರ, ರಾಜಕಾರಣಿ, ಸರ್ವಾಧಿಕಾರಿ–ಎಲ್ಲವೂ ಒಬ್ಬನೇ ಆಗಿದ್ದವನನ್ನು, ದೊರೆಯು ಅರಮನೆಯಿಂದ ಇಳಿದು ಬಂದು ಸ್ವಾಗತಿಸಿ ಅರಮನೆಯೊಳಕ್ಕೆ ಕರೆದೊಯ್ಯಬೇಕಾಯಿತು ನಾಗರಿಕರು ಆ ವೇಳೆಗೆ–ಅರಮನೆಯ ಮುಂದಿನ ಅಂಗಣದಲ್ಲಿ ನಿಂತು, ಕುಳಿತು, ತಾಳ್ಮೆಗೆಟ್ಟು ಬೊಬ್ಬಿಡುತ್ತಿದ್ದರು–ಅಲ್ಲಿ ಜಯಘೋಷವೆಸಗುತ್ತಿದ್ದರು. ಕೂಗಿ ಕೂಗಿ ಯಾರೊಬ್ಬರಿಗೂ ಗಂಟಲ ದನಿ ಉಳಿದಿರಲಿಲ್ಲ ಅಂಥ ತಾಳ್ಮೆಗೆಟ್ಟ ಜನತೆಯ ಪಾಲಿಗೆ–'ಸಂಧಾನ'ವೆಂದರೆ ದೊರೆಯ 'ಶರಣಾಗತಿ' ಎಂದೇ ಅರ್ಥವಾಗಿತ್ತು ದೊರೆ ಹಾಗೆ ಮಾಡನಾದರೆ, ಅವನ ಕಿರೀಟವನ್ನು ಇವರೇ ಕಿತ್ತುತಂದು, ತಮ್ಮ ನಾಯಕನ ತಲೆಗೆ ತೊಡಿಸುವದಕ್ಕೂ ಹಿಂದು ಮುಂದೆ ನೋಡುವವರಲ್ಲ! ಅಂಥ ಆವೇಶ, ಉದ್ವೇಗ ತುಂಬಿತ್ತು ಅವರಲ್ಲಿ

ಅರಮನೆಯ ಒಳಗೋ-! ದೊರೆ, ಸೇನಾನಿ, ಸಚಿವ ಕೃಷ್ಣಮೂರ್ತಿ, ಸರ್ವಾಧಿಕಾರಿ ವಾಮನರಾಯ–ಇಷ್ಟು ಮಂದಿ ದಿವಾನಖಾನೆಯಲ್ಲಿ ಕುಳಿತುಕೊಂಡು ಮಾತನಾಡುತ್ತಿದ್ದಾರೆ ಅರಸ ಕುಳಿತ ಸೋಫಾದ ಎದುರಿಗೆ, ಅವನಿಗೆ ಸಮಾನವಾದ ಠೀವಿ, ಹೆಮ್ಮೆಗಳಿಂದ ವಾಮನರಾಯ ಕುಳಿತಿದ್ದಾನೆ ಪ್ರತಾಪಚಂದ್ರ–ಎಂಥ ಶುಂಠನಾಗಿದ್ದರೂ, ಒಬ್ಬಿಬ್ಬರು ಒಳ್ಳೆಯ ಗುರುಗಳಿಂದ ಶಿಷ್ಟಾಚಾರದ ಮಾತು ಕಲಿತವನು ಆತನಿಗೆ, ತನ್ನ ಜತೆಯಲ್ಲಿ ಸಮಾನಸ್ಕಂಧತೆಯಿಂದ ಮಾತನಾಡುತ್ತಿರುವ ವಾಮನರಾಯನ 'ನಾವು, ನೀವು' ವಾಕ್ಸರಣಿಯನ್ನು ಕೇಳಿಯೇ ಮನನೊಂದಿತ್ತು ಅವನು ಮುಂಡಿಸಿದ ಕೇಳಿಕೆಗಳನ್ನು ಕೇಳಿ ಭಯವೂ ಆಗಿತ್ತು. 'ಯುವರ್ ಹೈನೆಸ್' ಎಂದು ವಾಮನರಾಯ ಅಪ್ಪಿತಪ್ಪಿಯೂ ನುಡಿಯುವವನಲ್ಲ ಅವನ ಪಾಲಿಗೆ ಸೌಜನ್ಯದ ಶಿಕ್ಷಣವಾಗಲಿ, ಶಿಷ್ಟಾಚಾರದ ಗಾಳಿಯಾಗಲಿ, ಸಂಸ್ಕೃತಿಯ ನಯವಾಗಲಿ ಬಂದುದೇ ಇಲ್ಲ ತೀರ ಬಿಗುವಿನಿಂದ ಕುಳಿತು ಮಾತ

ನಾಡುತ್ತಿದ್ದ ದೊರೆಯೇ ತಾನಾಗಿ, ವಾಮನಾಕೃತಿಯ ಈ ನೆಪೋ
ಲಿಯನನ್ನು ಕಂಡು 'ಏನಾಗಬೇಕು ನಿಮಗೆ? ಯಾಕೆ ಇಷ್ಟೆಲ್ಲ ಗಲಭೆ
ಮಾಡಬೇಕು? ನಾನು ಪರಕೀಯನೆ? ಬ್ರಿಟಿಷರವನೇ? ಇದೇ
ಗೊಂಡಾರಣ್ಯದ ಅನ್ನ, ಗಾಳಿ, ನೀರು ಸೇವಿಸಿದವನಲ್ಲವೇ?' ಎಂದು
ಕೇಳಿದಾಗ, ವಾಮನರಾಯನ ಉದ್ದಟ ಉಪನ್ಯಾಸವೇ ತೊಡಗಿತು
ಅದನ್ನು ಮುಗಿಸಿ ಆತ 'ಇದು ನಮ್ಮ ಡಿಮಾಂಡ್' ಎಂದು ಆಂಗ್ಲೋ
ಕನ್ನಡ ಬರವಣಿಗೆಯೊಂದನ್ನು ದೊರೆಯ ಕೈಗೆ ಚುಚ್ಚಿದ

ಅದನ್ನು ತೆಗೆದುಕೊಂಡು, ಬಿಡಿಸಿ, ಓದಿ ನೋಡಿ, ಯೋಚಿಸಿ
ಅರಸು ಬಿಳಿಚಾದ, ಬೆರಗಾದ ಆದರೂ ತಾನು ಪ್ರತಿಭಟಿಸುವುದು
ವಿವೇಕವಲ್ಲವೆಂದು ಗೊತ್ತು ಅದಕ್ಕೆ ಪ್ರತ್ಯುತ್ತರ ಕೊಡುವ ಮುಂಚೆ,
ಸಚಿವನೊಡನೆ ಆಪ್ತಾಲೋಚನೆ ಮಾಡುವೆನೆಂದು ಕೋರಿದರೆ.
ವಾಮನರಾಯ 'ನನಗೆ ವೇಳೆ ಇಲ್ಲ ಇದಕ್ಕೆ ಸಹಿ ಹಾಕಿದರಾಯಿತು.
ಇಲ್ಲವಾದರೆ ಮುಂದಾಗುವ ಅನರ್ಥಕ್ಕೆ ನಾನು ಹೊಣೆಯಲ್ಲ' ಎಂದು
ಬಿಟ್ಟ

ದೊರೆಯ ಮಗ್ಗುಲಲ್ಲಿ ಕುಳಿತ ಸಚಿವ ಕೃಷ್ಣಮೂರ್ತಿ, ಅನುಭವ
ಶಾಲಿ. ಜನರ ಮುಖ ನೋಡಿಯೇ ಮನ ತಿಳಿಯಬಲ್ಲವ ಅವನು
ವಾಮನರಾಯನ ಮುಖ ನೋಡುತ್ತ ನಕ್ಕ ಅದರಿಂದ ವಾಮನ
ರಾಯನಲ್ಲಿ, ಆತ ತನ್ನ ಬೆಂಬಲಿಗನೆಂಬ ಭಾವನೆಯೂ ಆಯಿತು
ಬಳಿಯಲ್ಲಿ ಕುಳಿತ ಸೇನಾನಿಯ ಪಾಡು ಹಾಗಿರಲಿಲ್ಲ ಆತನ ಎದೆಯಲ್ಲಿ
ರಕ್ತ ತುಂಬಿಬಂದಿತ್ತು; ಕತ್ತು ಬೀಗಿತ್ತು, ತುಟಿ ಕಚ್ಚಿತ್ತು ದರ್ಪ
ಭಂಗಗೊಂಡಂತಿತ್ತು ಅವನ ಯೌವನತ್ತು ಮುಖಚರ್ಯೆ ಅದನ್ನು
ಕಂಡ ವಾಮನರಾಯನ ನರಿಗಣ್ಣುಗಳು ಹಿಗ್ಗಿ ನಗುತ್ತಿದ್ದುವು. ಪರಿ
ಸ್ಥಿತಿಯನ್ನರಿತ ಕೃಷ್ಣಮೂರ್ತಿ "ಮಹಾಪ್ರಭುಗಳೇ, ಜನರು ಬಯಸಿ
ದರೆ ನೀವು ದೊರೆಗಳು, ನಾನು ಸಚಿವ. ಅವರು ಬಯಸದೆ ಇರುವಲ್ಲಿ
ನಮಗೆ ಯಾವ ಸ್ಥಾನವೂ ಇಲ್ಲವಷ್ಟೆ. ಈಗ ಇದನ್ನು ಕೇಳುತ್ತಿರು
ವವರು ನಮ್ಮವರೇ. ಪರರಲ್ಲ. ತಾವು ಒಪ್ಪಿಕೊಂಡು ಸಹಿ ಹಾಕಿಬಿಡಿ.
ಅವರೂ ಧರ್ಮವನ್ನರಿತವರು. ಸಹಿಮಾಡಿ, ಭುವನೇಶ್ವರಿಯ ಇಚ್ಛೆ
ಯಿದ್ದಂತಾಗಲಿ" ಎಂದು ನುಡಿದಾಗ ವಾಮನರಾಯನ ಹಿಗ್ಗು,

ಹೆಮ್ಮೆ ಎಷ್ಟೆಂದು ಬಣ್ಣಿಸುವುದಕ್ಕಿಲ್ಲ. ಅಷ್ಟೇ ತಗ್ಗಿ, ಕುಗ್ಗಿ, ಕುಸಿದ ಹೃದಯ ಸೇನಾನಿ ಸ್ವರೂಪಸಿಂಗನದು 'ಇಂಥ ವೇಳೆಯಲ್ಲಿ ನಾನಿಷ್ಟು ನಿರುಪಾಯನಾಗಬೇಕೇ?' ಎಂದು ಅವನಿಗೆ ತೋರುತ್ತಿರಬೇಕು.

'ಒಂದು', 'ಎರಡು', 'ಮೂರು' ಎಂದು ಕ್ಷಣವೆಣಿಸುತ್ತಿದ್ದಾನೆ ವಾಮನರಾಯ ತಾನು ಸಲಿಸಿದ ಕೇಳಿಕೆಗೆ, ಜನತೆಯ ಪರವಾಗಿ, ಸರ್ವಾಧಿಕಾರಿಯಾಗಿ ಮುಂಡಿಸಿದಂಥ ಕೇಳಿಕೆಗೆ–ಮರು ಮಾತಿಲ್ಲದೆ ಸಹಿಮಾಡುತ್ತಲೆ ಆತ ಹೊರಡಲು ಎದ್ದು ನಿಂತ. ಅವನೆಂಥ ಮೂರ್ಖ ದೊರೆಯೇ ಇರಲಿ, ಮಣಿದ ವೈರಿ ಚಕಾರವೆತ್ತದೆ ಸಹಿ ಮಾಡಿದ್ದಾನೆ. ಅವನಿಗೆ ತಾನು ವಂದನೆಯನ್ನಾದರೂ ಸಲಿಸಬೇಕೆಂಬ ದಯಾಬುದ್ಧಿಯೂ ಅವನಿಗೆ ಹೊಳೆಯಲಿಲ್ಲ ಬದಲು ಪ್ರತಾಪರಾಯ ತಾನಾಗಿ ಕರಲಾಘವ ಮಾಡಲು ಕೈನೀಡಿದ ನಿಜಕ್ಕೂ ಅವನ ಹೃದಯದಲ್ಲೂ, ಮಿದುಳಿನಲ್ಲೂ ಕತ್ತಲು ತುಂಬಿತ್ತು. ವಾಮನರಾಯ ಅವಸರದಿಂದ, ಔದಾಸೀನ್ಯದಿಂದ ಅವನ ಕೈಯನ್ನು ನೀಡಿ ಹಿಡಿದ. ಕೃಷ್ಣಮೂರ್ತಿ ಅವನೊಡನೆ ಕರಲಾಘವ ಮಾಡುವ ನೆಪದಲ್ಲಿ ತಬ್ಬಿಕೊಂಡು, 'ಎಲ್ಲವೂ ಶುಭದಲ್ಲಿ ಕೊನೆಗೊಳ್ಳಲಿ' ಎಂದು ನುಡಿದ. ಅವನನ್ನು ಬಾಯಿತುಂಬ ಹೊಗಳಿದ. ಅವನು ಹೊರಡುವ ಅವಸರವನ್ನು ತಡೆದು, ಅರಮನೆಯ ಆತಿಥ್ಯ ಸ್ವೀಕರಿಸಿ ಹೋಗಬೇಕೆಂದು ಪ್ರಾರ್ಥಿಸಿದ ಹೀಗೆ ಅವನ ಹೆಮ್ಮೆಯನ್ನು ಕೆರಳಿಸಿ, ಮಗ್ಗುಲು ಕೊಟಡಿಗೆ ಕರೆದೊಯ್ದ ಇನ್ನೊಮ್ಮೆ ದೊರೆ, ಸೇನಾನಿಗಳು ಅಲ್ಲಿಗೆ ಬಂದರು. ಅಲ್ಲಿ ಉಪಾಹಾರ ಸತ್ಕಾರಗಳಾದುವು. ವಾಮನರಾಯನ ಹಿರಿಯರೂ ಕಾಣದಂತಹ–ರತ್ನಹಾರ, ಜರತಾರಿಗಳ ಉಡುಗೊರೆ, ಹರಿವಾಣದಲ್ಲಿ ಅರ್ಪಿಸಲ್ಪಟ್ಟಿತು ಅವನ್ನು ಬೇರೆಯಾಗಿ ಕಳುಹಿಸಿ, ದೊರೆ ಸಚಿವರಿಬ್ಬರೂ ಅವನೊಡನೆ ಮಾತನಾಡುತ್ತಾ, ಅರಮನೆಯ ಹೊರಗೆ ಕಾದಿರುವ ಜನಸಂದಣಿಯತನಕವೂ ಅವನನ್ನು ಮುಟ್ಟಿಸಿ ಬಂದರು.

ಅಲ್ಲಿಂದ ಸ್ಲೋಗನ್ ಸುರಿಮಳೆ ಮೊಳಗಿತು. ಜನರು ತಾವಾಗಿ ತಂದ ಕುದುರೆಯೊಂದರ ಮೇಲೆ, ತಮ್ಮ ನಾಯಕನನ್ನು ಕುಳ್ಳಿರಿಸಿ, ಮೆರವಣಿಗೆ ಹೊರಟರು. ಆ ದಿನವಂತು ಜನಸಮುದ್ರವು ವಿಜಯೋ

ನ್ಮಾದದಿಂದ ಮತ್ತವಾಗಿತ್ತು. ತಮ್ಮ ರಾಜ್ಯವು ನಿರಂಕುಶ ಪ್ರಭುತ್ವ ದಿಂದ ಎಂದೆಂದಿಗೂ ಮುಕ್ತವಾಯಿತೆಂದು ನಂಬಿ ಸಂತಸದಿಂದ ತೇಲಿ ಬಿಟ್ಟಿತು

ಇಷ್ಟೆಲ್ಲ ನಡೆದು ಹೋದ ಬಳಿಕ ಅರಮನೆಯ ತುಂಬ ಕತ್ತಲೆಯೇ ಮೊದಲಿನಂತೆ, ರಾತ್ರಿಕಾಲದಲ್ಲಿ ವಿದ್ಯುದ್ದೀಪಮಾಲಿಕೆ ಗಳು ಉರಿಯುವಾದವು ಯಾವ ಸಂತೋಷವೆಂದು ಉರಿಸಬೇಕು? ಅರಸು ಪ್ರತಾಪಚಂದ್ರ, ವಿಧಿಯೇ ತನ್ನ ವಂಶದ ಕೀರ್ತಿಗೆ ಕೊಡಲಿ ಯಿಕ್ಕಿತೆಂದು ತಿಳಿದು, ಸಮಾಧಾನ ತಂದುಕೊಳ್ಳಲು ಪ್ರಯತ್ನಿಸಿದ. ಸೇನಾನಿ ಸ್ವರೂಪಸಿಂಗ ಮಾತ್ರ ಅಂಥವನಲ್ಲ ತನ್ನದು ಮೂಕ, ಷಂಡ ಜೀವನವಾಯಿತಲ್ಲ-ಎಂಬ ದಾರುಣ ವ್ಯಥೆ ಅವನಿಗೆ. ಈದಿನ ಗಳಲ್ಲಿ ಚೆನ್ನಾಗಿ ಕಣ್ತೆರೆದು, ಕಾಲಕ್ಕೆ ತಕ್ಕಂತೆ ಕೊಡೆ ಹಿಡಿದ ದಕ್ಷ ನೆಂದರೆ ಸಚಿವ ಕೃಷ್ಣಮೂರ್ತಿಯೊಬ್ಬನೇ ಅವನಿಗೆ ಆಳಿಯೂ ಗೊತ್ತು, ಆಳಿಸಿಕೊಂಡೂ ಗೊತ್ತು ಆಡಿಯೂ ಗೊತ್ತು, ಆಡಿ ಸಿಯೂ ಗೊತ್ತು ಆತ-ಮೂರು ದಿನಗಳೊಳಗಾಗಿ, ಒಮ್ಮೆ ದೊರೆ ಯಿಂದ ಸಹಿ ಮಾಡಿಸಿಕೊಟ್ಟ ಪತ್ರವನ್ನು, ತಿರುಗಿ ಬದಲು ಪಡಿಸಿ, ಅರಸುತನದ ಅಧಿಕಾರಕ್ಕೆ ಚ್ಯುತಿಬಂದರೂ, ಅರಮನೆಯ ಪ್ರತಿಷ್ಠೆಗೆ ಕುಂದು ಬರದಂತೆ ಮಾಡಿದ ಹಾಗೆ ಬರಹದ ಒಕ್ಕಣೆ ತಿದ್ದಿಸಿ, ಅರಸ ನಿಂದ ಸಹಿ ಮಾಡಿಸಿ. ವಾಮನರಾಯನಿಂದ ಸಹಿ ಪಡೆದುಕೊಂಡ ಇದು ಅವನ ಪಾಲಿನ ಕೈವಾಡವೆನ್ನಬೇಕು ಅಂಥ ತಿದ್ದುಪಡಿಯ ಸೂಕ್ಷ್ಮ ಬದಲಾವಣೆ ಸರ್ವಾಧಿಕಾರಿ ವಾಮನರಾಯನ ಬುದ್ಧಿಗೆ ಆ ಗಳಿಗೆಯಲ್ಲಿ ಗೋಚರಿಸಲೂ ಇಲ್ಲ ಆತಿಥ್ಯದ ಹಿಗ್ಗು, ವಿಜಯದ ಅಮಲು ಅವನ ತಲೆಯಲ್ಲಿ ತುಂಬಿದಾಗ, ಆತ-ಮೊದಲ ಕೈ ಬರಹದ ಪತ್ರವನ್ನು ಅಲ್ಲೇ ಮರೆತುಬಿಟ್ಟ. ಅದನ್ನು ವಿಧಿಯುಕ್ತವಾಗಿ ಬರೆಯಿ ಸುವ ಆವಶ್ಯಕತೆಯೂ ಇದ್ದಿತ್ತು. ಆತನಿಗೆ ಅದರ ನೆನಪು ಹುಟ್ಟಿ, ಅದಕ್ಕಾಗಿ ಹೇಳಿ ಕಳುಹಿಸಿದಾಗ, ಕೃಷ್ಣಮೂರ್ತಿ ಬೇಕಾದ ಮಾರ್ಪಾ ಟನ್ನು ಸೂಕ್ಷ್ಮವಾಗಿ ಮಾಡಿ, ನಗುತ್ತ ಅವನನ್ನು ಕಂಡು, ಸವಿಮಾತು ಗಳಿಂದ ಮರುಳುಗೊಳಿಸಿ-ಜನತೆಯ ಪರವಾಗಿ ಅವನಿಂದಲೂ ಸಹಿ ಮಾಡಿಸಿಕೊಂಡ.

ಕೃಷ್ಣಮೂರ್ತಿಯು ಬುದ್ಧಿ ಚುರುಕಿನದು. ಆತ ರಾಜಕೀಯ ವೇನೆಂದು ಬಲ್ಲ. ನಾಲ್ಕು ದೇಶೀಯ ಸಂಸ್ಥಾನಗಳಲ್ಲಿ ನೀರು ಕುಡಿದು ಬಂದ ಅನುಭವವೂ ಅವನಿಗಿತ್ತು ಜನಗಳ ಸ್ವಭಾವವನ್ನು ಅರಿಯ ಬಲ್ಲವ. ತನ್ನ ಶಕ್ತಿಗಿಂತ ಹೆಚ್ಚಾಗಿ ಹಗೆಯ ದೌರ್ಬಲ್ಯ ತಿಳಿಯುವುದ ರಲ್ಲಿ ನಿಪುಣ ಎಂದು ವಾಮನರಾಯ ವಿಕ್ರಮ ನಗರಕ್ಕೆ ಬಂದು, ಮೊದಲಬಾರಿಗೆ, ಅಲ್ಲಿನ ಜನತೆಯನ್ನು ಮಾತಿನಿಂದ ಮರುಳುಗೊಳಿಸಿ, ಉಪನ್ಯಾಸ ಮಾಡತೊಡಗಿದನೋ ಅಂದೇ ಅವನ ಕುಲಗೋತ್ರಗಳನ್ನು ತಿಳಿಯುವ ಪ್ರಯತ್ನಮಾಡಿದ್ದ ಅವನ ಯೋಗ್ಯತೆ ತೀರ ಸಾಮಾನ್ಯ ವೆಂದು ತಿಳಿದುಕೊಂಡ ಕಾಲವೊಂದಿತ್ತು ಆಗ ಅವನನ್ನು ನಾಲ್ಕು ದಿನ ಸೆರೆಮನೆಯಲ್ಲಿ ಕುಳ್ಳಿರಿಸುವುದಕ್ಕೂ ಹಿಂಜರಿಯಲಿಲ್ಲ ಆದರೆ ಅದರಿಂದ ಊರಿನ ಜನರಲ್ಲಿ ಕೋಪ ಹೆಚ್ಚುವ ಲಕ್ಷಣಗಳನ್ನು ಕಂಡಾಗ, ಯಾವ ಸುದ್ದಿಯೂ ಇಲ್ಲದೆ ಅವನನ್ನು ಬಿಟ್ಟು ಬಿಟ್ಟ. ಅದರಿಂದ ಬರ ಬಹುದಾದ ವಿಪತ್ತು ತಪ್ಪಿತು ಆಂದೋಲನದ ಕಾಲದಲ್ಲಿ—ಪ್ರತಿಭಟನೆ ಗಿಂತ ಅನಾದರ ಹೆಚ್ಚಿನ ಅಸ್ತ್ರವೆಂಬುದನ್ನೂ ಆತ ಕಲಿತುಕೊಂಡ.

ಇಂಥ ವಾಮನರಾಯನು ಗೊಂಡಾರಣ್ಯದ ರಾಜಕೀಯದಲ್ಲಿ ಸರ್ವಾಧಿಕಾರಿಯಾದುದು ಅವನ ಅದೃಷ್ಟವೆನ್ನಬೇಕು ಅವನ ಮೂಲ ವನ್ನು ಜನ ಬಹುಸುಟ್ಟಿಗೆ ತಿಳಿಯದವರಾದುದರಿಂದಲೇ, ಒಂದು ಬಗೆಯ ಮಿರುಗು, ಅಖಿಲಭಾರತದ ಕೀರ್ತಿಯೂ ಅವನ ಹೆಸರಿಗೆ ಅಂಟಿಕೊಂಡಿತು ಈಚೆಗಿನ ಎಂಟು ದಿನಗಳ ಪ್ರಳಯದಲ್ಲಂತು— ಅವನ ಧೈರ್ಯ, ರೀವಿ, ಆತ್ಮವಿಶ್ವಾಸಗಳು ರಾಜಕೀಯವನ್ನರಿ ಯದ ವಿಕ್ರಮನಗರದ ಜನತೆಗೆ ಒಂದು ವಿಚಿತ್ರವಾದ ಹುರುಪನ್ನು ಕೊಟ್ಟವು ಅವನ ರಾಜಕೀಯ ಜೀವನ ಮೊಳೆತು, ಚಿಗುರಿ, ಮರ ವಾಗುವ ಗಳಿಗೆಯಿಂದ, ಮುಖಂಡತ್ವ ಬರುವ ಗಳಿಗೆಯ ತನಕವೂ— ಅವನಲ್ಲಿನ ಕುಂದುಕೊರತೆಗಳನ್ನು, ಹೊಂಚುಹಾಕಿ ನೋಡಿದವನು ಸಚಿವ ಕೃಷ್ಣಮೂರ್ತಿ ಗೊಂಡಾರಣ್ಯದ ಶಾಂತ ಕೊಳವನ್ನು ಕಲಕಿ, ಕೋಲಾಹಲವೆಬ್ಬಿಸಿ, ನೊರೆಗುಳ್ಳೆಯಂತೆ ಮೇಲೆದ್ದು ನಿಂತ ವಾಮನರಾಯನನ್ನು ಎಲ್ಲಿ ಚುಚ್ಚಿದರಾದಿತು ಎಂದು ಕಾದು ಕುಳಿತ ವನು. ಆದಿನ ಅರಸನಿಂದ ಕೊಡಿಸಿದ ಹಾರ, ಉಡುಗೊರೆಗಳನ್ನು

ನೋಡುತ್ತಲೇ ಅವನ ಕಣ್ಣುಗಳಿಂದ ಮೂಡಿದ ಆಶೆಯ ಮಿಂಚನ್ನು ನೋಡಿದ್ದ. ಇದು ರಾಜಕೀಯದ ಬೆಲೆವೆಣ್ಣು ಎಂದು ಆಗಲೇ ತಿಳಿದುಕೊಂಡ ಇನ್ನು ತನ್ನ ಗುಪ್ತಚಾರರು ತಂದೊಪ್ಪಿಸುತ್ತಿದ್ದ ಸುದ್ದಿಯಿಂದ-ಆ ಮನಸ್ಸು ಹೆಣ್ಣಿನ ಗಾಳಕ್ಕೆ ಸಿಗುವ ಸುಲಭ ಮೀನು ಎಂಬುದೂ ತಿಳಿದಿತ್ತು ಅವನಾಗಿಯೇ ಹಳದಿ ಪಡೆಯ ದೇಶಸೇವಿಕೆಯರ ಎಡೆಯಲ್ಲಿ ತನ್ನ ಕಡೆಯವರನ್ನು ತುಂಬಿಸಿದುದೂ ಉಂಟು ಅಂಥವರಲ್ಲೊಬ್ಬಳು ತನ್ನ ವ್ಯಕ್ತಿಪ್ರಭಾವದಿಂದ ಇವನಂತೆಯೇ ಜನಪ್ರಿಯ ಧುರೀಣೆಯೂ ಆದಳು ಅವಳ ಮೂಲಕ ವಾಮನರಾಯನನ್ನು ಹಾದಿಗೆ ತರುವುದು ಸುಲಭವಾಯಿತು ಈತ ಸಂಧಾನವನ್ನು ಮುಗಿಸಿ, ಮೆರವಣಿಗೆಯೊಡನೆ ಮರಳಿದಾಗ, ಅವನ ಆಪ್ತರು 'ಎಲ್ಲಿದೆ, ದೊರೆ ಸಹಿ ಮಾಡಿದ ಪತ್ರ!' ಎಂದು ಕೇಳಿದಾಗ, ಅದನ್ನು ಅಲ್ಲೇ ಮರೆತು ಬಂದುದರ ನೆನಪಾಯಿತು ಆದರೆ ಹಾಗೆನ್ನುವುದಕ್ಕಿರಲಿಲ್ಲ 'ಇದೆ ನನ್ನಲ್ಲಿ, ಎಂದರೂ ಮನದಲ್ಲಿ ಕಳವಳ ಕಾಡತೊಡಗಿತು ಈ ತಪ್ಪನ್ನು ಸರಿಪಡಿಸಿಕೊಳ್ಳಲು, ಅರಮನೆಗೆ ಸಮೀಪಳೂ ತನ್ನ ನಿಕಟವರ್ತಿಯೂ ಆದ ಕಾಂಚನಮಾಲೆಗೆ ನಿಜವನ್ನು ಹೇಳಿ, ಅವಳನ್ನು ಸಚಿವನ ಮನೆಗೆ ಕಳುಹಿಸಿದ ಅಲ್ಲಿ ಅದನ್ನು ಹುಡುಕುವ ನಾಟಕವಾಯಿತು ಆತನೇ ಸಚಿವನ ಬಳಿಗೆ ಬಂದು ಆತ ಸ್ನೇಹ ಬೆಳೆಯಿಸುವಂತಾಯಿತು ಆತ ನೊಡ್ಡಿದ ಮೋಹನಾಸ್ತ್ರಕ್ಕೂ ಬಲಿಬಿದ್ದುದಾಯಿತು "ಪತ್ರದ, ಭಯಬೇಡ, ನಮ್ಮೆಲ್ಲರೆದುರಿಗೆ ಸಹಿಮಾಡಿದ ಅದನ್ನು ಅರಸು ನಿರಾಕರಿಸಲಾರ" ಎಂದು ತಿರುಗಿ ಬರೆಯಿಸಿಕೊಡಲೊಪ್ಪಿದ ಆ ನಡುವೆ "ಅವರ ಮರ್ಯಾದೆಯನ್ನು ಪೂರ್ಣವಾಗಿ ತೆಗೆಮದರಿಂದ ನಿಮಗೇನು ಲಾಭ? ಸೋತವರನ್ನು ಅವಮಾನಿಸುವುದು ರಾಜಕೀಯಕ್ಕೆ ಭೂಷಣವಲ್ಲ. ಹೆಸರಿಗೆ ಅವರು ಅರಸರಾಗಿಯೆ ಉಳಿಯಲಿ. ಆಳುವ ಹಕ್ಕು ಜನಗಳದ್ದೆಂಬುದು ತಿಳಿದ ಮಾತೇ. ಜನರು ಮುನಿದರೆ ಅವರನ್ನು ಆ ಸ್ಥಾನದಿಂದಲೂ ತಳ್ಳಬಹುದಲ್ಲ ಇತರ ಕಡೆಗಳಲ್ಲಿ ನಡೆದಂತೆಯೇ ನಡೆಯಲಿ" ಎಂದು ಮನವೊಲಿಸಿ, ಬದಲು ಒಕ್ಕಣೆಯನ್ನು ಬರೆಯಿಸಿ, ಸಹಿ ಹಾಕಿಸಿ, ಅವನಿಂದಲೂ ಸಮ್ಮತಿಪತ್ರವನ್ನು ಗಳಿಸಿಕೊಂಡ. ಡಿಲ್ಲಿಯಿಂದಲೂ ಅದಕ್ಕೆ ಆಕ್ಷೇಪ ಬರಲಿಲ್ಲ. ಅಷ್ಟೇ ಕ್ಷೇಮವೆನಿಸಿತು.

ಈ ಮಹಾಕ್ರಾಂತಿಯ ಮೊದಲನೆಯ ಹೆಜ್ಜೆ ಮುಗಿಯುವಾಗ-ರಾಜಾವಿಕ್ರಮ ಪ್ರತಾಪಚಂದ್ರ ರಾಜನ ಮನೆತನದ ಹೆಸರು ಉಳಿಯಿತು ಅರಮನೆ, ಅರಸನ ಖಾಸಾ ಭೂಮಿಕಾಣಿಕೆ, ಸಂಪತ್ತುಗಳೂ ಉಳಿದುಕೊಂಡವು ಸಚಿವನ ಬೋಧನೆಯಂತೆ ದೊರೆ ತಾನಾಗಿಯೇ ಅದರಲ್ಲಿ ಅರ್ಧದಷ್ಟನ್ನು ಬಿಟ್ಟುಕೊಟ್ಟ ಅವನ ಸಂತತಿಯವರಿಗೂ ದೊರೆತನದ ಗೌರವ, ಬಿರುದುಗಳು ಉಳಿದುವು ರಾಜಾದಾಯದ ಒಂದಂಶ ಅವನ ವೆಚ್ಚಕ್ಕಾಗಿಯೂ ನಿಷ್ಕರ್ಷೆಯಾಯಿತು. ಆತ ರಾಜಪ್ರಮುಖನೆನಿಸಿದ

ಅಂದಿನಿಂದ ವಾಮನರಾಯನಿಗೆ, ಕೃಷ್ಣಮೂರ್ತಿ ಬಹಿರಂಗದಲ್ಲಲ್ಲವಾದರೂ, ಖಾಸಗಿಯಿಂದ ಬೇಕಾದವನನಿಸಿದ ಆಪ್ತ ಸಲಹೆಗಾರನೇ ಆದ ವಾಮನರಾಯ ದೇಶವಾದಿ ಪಂಗಡದ ಅಧ್ಯಕ್ಷ. ಹಾಗಿದ್ದುದರಿಂದ, ಪ್ರಧಾನಿತನದ ಅಧಿಕಾರವು ಅವನಿಗೇ ದೊರೆಯಿತು. ಅಧಿಕಾರ ಕಸಿದುಕೊಂಡವನು ಅವನಲ್ಲವೇ ? ಅವನು ತನ್ನ ಗೆಳೆಯರಲ್ಲಿ ಕೆಲವರನ್ನು ಆರಿಸಿ ಮಂತ್ರಿ ಸಂಪುಟ ರಚಿಸಿದ ಇದು ಜನಗಳ ಬಾಯಲ್ಲಿ 'ಹಳದಿ ಟೋಪಿ ಸರಕಾರ'ವೆನಿಸಿತು ಈ ದೇಶವಾಗಿ ಪಂಗಡಕ್ಕೆ ಮೊದಲಿನಿಂದಲೂ, ಹೊರಗಿನ ರಾಜಕೀಯ ಪಂಗಡಗಳ ಸಂಪರ್ಕ ಕಡಿಮೆಯಿತ್ತು ಅವರದೇ ಆದ ನಿಶಾನಿ, ಸಂಕೇತಗಳು ರೂಢಿಯಾಗಿ ಬಂದಿದ್ದವು. ಅದೇ ಪರಂಪರೆಯು ಮುಂದುವರಿಯಿತಷ್ಟೆ ವಾಮನರಾಯನಂತೆಯೆ, ದೇಶಸೇವಿಕೆಯಾಗಿ ಜೀವನವನ್ನು ತೊಡಗಿ ನಾಯಿಕೆಯಾಗಿ ಏರಿದವಳೆಂದರೆ-ಕಾಂಚನಮಾಲೆ

ವಾಮನರಾಯನ ಈ ಹೊಸ ಸರಕಾರ-ಎಷ್ಟರಮಟ್ಟಿಗೆ ಜನರ ಮನಸ್ಸನ್ನು ಬಿಂಬಿಸುತ್ತಿತ್ತು-ಎಂಬ ಮಾತು ಬೇರೆ ರಾಜ್ಯದ ಪ್ರಮುಖ ರಾಜಕೀಯ ಪಂಗಡ ಅದು ಈತ ಅದರ ಪ್ರಮುಖ ನಾಯಕ. ಅವನಲ್ಲದೆ ಇನ್ನಾರು ಪ್ರಧಾನಿಯಾಗಲು ತಕ್ಕವರು ? ಇನ್ನು ಕ್ರಮೇಣ ಗೊಂಡಾರಣ್ಯದ ರಾಜ್ಯಘಟನೆ ರೂಪುಗೊಂಡು, ಜನಗಳು ತಂತಮ್ಮ ಪ್ರತಿನಿಧಿಗಳನ್ನು ಆರಿಸಿ, ತಮ್ಮ ಸರಕಾರ ಕಟ್ಟುವರೆಂಬುದು ಎಲ್ಲರೂ ತಿಳಿದ ಮಾತು ಅಂತಹ ಕಾಲವು ಬರುವತನಕ-ಹಿಂಜಿ ವಾಮನರಾಯನೇ ದೊರೆಯೆನ್ನಬೇಕು. ಅವನಿಗಿಂತ ಏನೂ ಕಡಿಮೆಯಿಲ್ಲದಂಥ

ಹೆಸರು ಕಾಂಚನಮಾಲೆಯೆಂದು. ಜನರ ಮನಸ್ಸು ಅವಳನ್ನು ಒಲಿದಷ್ಟು ಇವನ ಪರವಾಗಿಲ್ಲ 'ಆದರೆ ಆವಳು ಅರಸನಿಗೆ ಸಂಬಂಧಿ' ಎಂಬ ಕುತ್ಸಿತ ಸೂಚನೆಯನ್ನು ಈತನೇ ಉಪಾಯವಾಗಿ ಗೆಳೆಯರ ಕಿವಿಗೆ ಬೀಳಿಸಿ, ತನ್ನ ಸ್ಥಾನ ಭದ್ರಪಡಿಸಿಕೊಂಡ. ಆಕೆ–ಅಂಥ ಪದವಿಯನ್ನು ಹಂಬಲಿಸಿದವಳೂ ಅಲ್ಲ

ಇಂದು ಪ್ರಜಾಪ್ರಭುತ್ವ ಗಳಿಸಿದ ಗೊಂಡಾರಣ್ಯದ ಜನಗಳು ಎಂಥವರು, ಏನು ಎಂದು ತಿಳಿಯುವುದು ಅತ್ಯವಶ್ಯ ನಾಡಿನ ಮೂರು ದಿಕ್ಕಿಗೂ ಚಾಚಿರುವ ಪರ್ವತಾವಳಿಯಲ್ಲಿ ವಾಸಿಸುತ್ತಿರುವ ಜನಗಳು–ಆದಿವಾಸಿಗಳು, ರಾಜಕೀಯದ ಗಂಧ, ಗಾಳಿಯಿಲ್ಲದವರು ಅದಕ್ಕಿಂತ ಮಿಕ್ಕಿದ ಜನಸಂಖ್ಯೆಯಿರುವುದು ನಡುವಣ ಮಲೆನಾಡು, ಬಯಲು ಸೀಮೆಗಳಲ್ಲಿ ನಡುವಣದ ಮಲೆನಾಡಿನಿಂದ ಮುಂದೆ ಸರಿದಂತೆ–ಬೇಸಾಯ, ಜನವಸತಿ ಹೆಚ್ಚುತ್ತ ಬರುತ್ತದೆ ಆದರೆ ಭಾರತದ ಇತರ ಪ್ರಾಂತಗಳಂತೆಯೇ ಬಹುಸಂಖ್ಯಾತ ಜನಗಳು ಬಡವರು, ಕೃಷಿಯೇ ಜೀವನಾಧಾರವಾದವರು ವಿದ್ಯೆಯು ಸಾರ್ವತ್ರಿಕವಾಗಿ ಹಬ್ಬುವ ಕಾಲ ಬರುವತನಕ–ದೇಶದ ರಾಜಕೀಯ, ಕೆಲವೇ ಪ್ರಮುಖ ನಗರವಾಸಿಗಳಾದ ವಿದ್ಯಾವಂತರೂ, ಶ್ರೀಮಂತರೂ ಆದವರ ಸೊತ್ತೇನ್ನು ಬೇಕು ಆದರೂ ಸ್ವಾತಂತ್ರ್ಯೋದಯದಿಂದಾಗಿ ಈಗಾಗಲೇ ಜನ ಸ್ವತಂತ್ರರಾದರೂ, ಕತ್ತಲು ತುಂಬಿದ ನಾಡಿನಲ್ಲಿ ಬೆಳಕಿನ ಉದಯವಾಯಿತು–ಎನ್ನುವವರು ದೇಶವಾದಿಗಳು ಜನಸಂಖ್ಯೆಯ ಮಾನದಿಂದ ಅವರ ಸಂಖ್ಯೆ ನೂರಕ್ಕೆ ಒಂದರಷ್ಟು ಇಲ್ಲವಾದರೂ, ಅವರೇ ಜನರ ಪ್ರತಿನಿಧಿಗಳು

ಅಂತು ಅಧಿಕಾರಚ್ಯುತಿಗೊಂಡ ರಾಜನ ಸ್ಥಾನದಲ್ಲಿ–ಜನರಿಗೆ ಇನ್ನೊಂದು ಪೂಜಾಮೂರ್ತಿ ಬೇಕು ಆ ಸ್ಥಾನವು ಅಧಿಕಾರದಿಂದಾಗಿ ವಾಮನರಾಯನಿಗೆ ದೊರೆತಿದೆ ಅಷ್ಟೇ ಮನ್ನಣೆ ಕಾಂಚನಮಾಲೆಗೂ ಇದೆ ವೈದಿಕ ಯುಗದ ದೇವತೆಗಳು ಉರುಳಿ, ಪುರಾಣ ಯುಗದ ದೇವತೆಗಾಗಿ ಹಣ್ಣು ಕಾಯಿ ಸಲಿಸುವಂತೆ–ಜನನಾದಿ ಪ್ರಮುಖರನ್ನು ಗೊಂಡಾರಣ್ಯದ ಜನ ಪೂಜಿಸತೊಡಗಿದ್ದಾರೆ ರಾಜತ್ವವನ್ನು ಮೀರಿದ ಗುಣಗಳನ್ನು ಅವರೇ ಆರೋಪಿಸಿ ಪೂಜಿಸುತ್ತಿದ್ದಾರೆ.

ಇದನ್ನು ಒಪ್ಪದೆಂಥ ಪ್ರಜೆಗಳೋ ಸಾರ್ವಜನಿಕ ಹಿರಿಯರೋ ದೇಶದಲ್ಲಿ ಇಲ್ಲವೆಂದಲ್ಲ ತರುಣರು, ಯೌವನಸ್ಥರು ಅರಸು ಹೋದುದರಿಂದ ಹೊಂಗನಸುಗಳನ್ನು ಕಟ್ಟುತ್ತಿದ್ದಾರೆ ಆದರೆ ಸಾಂಪ್ರದಾಯವಾದಿಗರಿಗೆ, ಅರಸನ ಪದಚ್ಯುತಿ ನುಂಗಲು ಕಷ್ಟವಾದ ಕಹಿ ಗುಟುಕಾಗಿದೆ! ಅಂಥವರ ಮನಸ್ಸು ಏನೇನೂ ಸಮಾಧಾನಗೊಂಡಿಲ್ಲ. 'ಇದೆಲ್ಲಿನ ಕಲಿಕಾಲ' ಎನ್ನುತ್ತಾರೆ ಅವರು ಅಂಥವರಲ್ಲಿ ಹಳ್ಳಿಗಾಡಿನ ನಮ್ಮ ಮುಕ್ಕಣ್ಣ ಒಬ್ಬ ವಿಕ್ರಮನಗರದ ನಾಗರಿಕರನ್ನು ಈ ರಾಜಕೀಯ ಆಂದೋಲನ ಮತ್ತರನ್ನಾಗಿ ಮಾಡಿದ ದಿನಗಳಲ್ಲೇ, ಈತ ಅಲ್ಲಿಗೆ ಹೋಗಿದ್ದ ಆಗ ಅಲ್ಲಿ ಕಂಡ ನೋಟವನ್ನು ಅವನ ಕಣ್ಣುಗಳು ನಂಬಲಿಲ್ಲ, ಕೇಳಿದುದನ್ನು ಅವನ ಕಿವಿಗಳೂ ನಂಬಲಿಲ್ಲ. ಅದಕ್ಕೆ ಕಾರಣ ಅವನ–ವಯಸ್ಸು, ಸಂಸ್ಕಾರ, ಹಳಗಾಲದ ಕಣ್ಣು, ಕಿವಿಗಳು ಹಳ್ಳಿಯಲ್ಲೇ ಹುಟ್ಟಿ ಹಳ್ಳಿಯಲ್ಲೇ ಬೆಳದ ಮುಕ್ಕಣ್ಣ, ಹೊಸದಕ್ಕೆ ಹೊಂದಿಸಿಕೊಳ್ಳಲಾರದ ಮುದುಕ. ಹಳ್ಳಿಯಿಂದ ಹೆಚ್ಚಾಗಿ ಹೊರಗೆ ಹೋಗದವನು ತಾನಿರುವ ಕಗ್ಗಾಡೇ ಸ್ವರ್ಗವೆಂದು ತಿಳಿದವನು. ಅವನ ಹಳ್ಳಿಯೂ ಅಷ್ಟು ಚಂದ–ಅದರ ಹೆಸರು ಕಿಗ್ಗಳ್ಳಿ ಅದಿರುವುದು ಗೊಂಡಾರಣ್ಯ ದೊಂಡಾರಣ್ಯವೆಂಬ ಎರಡು ಪರ್ವತಾವಳಿಗಳು ಕೂಡಿ, ಕಣಿವೆಯಾಗಿ ಇಳಿಯುವ ಒಂದು ಸಂದಿನಲ್ಲಿ ದೂರದ ಪೇಟೆ ಪಟ್ಟಣಗಳ ಗಾಳಿಯು ಅಲ್ಲಿ ಬೀಸಿದ್ದೆಂಬುದಿಲ್ಲ ಏನಾದರೂ ಕಾರಣದಿಂದ ಪೇಟೆಗೆ ಹೋದಾಗ ಮಾತ್ರ ಇವರಿಗೆ ಅಲ್ಲಿನ ಸುದ್ದಿ ತಿಳಿಯಬೇಕು

ಗೊಂಡಾರಣ್ಯದ ಪ್ರಜಾ ಸಾಮಾನ್ಯರಲ್ಲಿ ಮುಕ್ಕಣ್ಣ ಎಲ್ಲರಂತಿರುವ ಒಬ್ಬನಾದುದರಿಂದ, ಅವನ ವಿಷಯವನ್ನು ನಾವು ತಿಳಿಯಬೇಕಾಗುತ್ತದೆ ಅವನ ಊರು ನಿಸರ್ಗ ದೇವತೆಯ ಆಲಯವೆಂದರೂ ಸಲ್ಲುತ್ತದೆ ಅವನ ಹಳ್ಳಿಗೆ ಪಡು, ತೆಂಕು, ಬಡಗಣಗಳಲ್ಲಿ ಬೆಟ್ಟದ ಸೆರಗು ಹಿಮಾಲಯದಷ್ಟೇ ಭವ್ಯವಾಗಿ ನಿಂತಿದೆ ಅದರ ಬಡಗಣ ಸೆರಗು–ಗೊಂಡಾರಣ್ಯ ಪರ್ವತಾವಳಿ, ತೆಂಕಣ ಸೆರಗು ದೊಂಡಾರಣ್ಯ ಇವುಗಳಲ್ಲೊಂದರ ಹೆಸರು ನಾಡಿಗೇನೆ ಬಂದಿದೆ ದಕ್ಷಿಣದ ಸೆರಗು–ರಾಮಾಯಣ ಕಾಲದಲ್ಲಿದ್ದ 'ದಂಡಕಾರಣ್ಯ' ಹೋಗಿ ದೊಂಡಾರಣ್ಯ

ವಾಯಿತೋ ಏನೋ ಈ ಎರಡೂ ಪರ್ವತ ಬಾಹುಗಳಿಂದ ಆವೃತ ವಾದ ಗೊಂಡಾರಣ್ಯದಲ್ಲಿ ನದನದಿಗಳಿಗೆ ಕೊರತೆಯಿಲ್ಲ. ನಾಡಿನ ನಟ್ಟ ನಡುವೆ ಪಡುವಣದಿಂದ ಮೂಡಣಕ್ಕೆ ಹರಿಯುವ 'ವನಶ್ರೀ' ಅಲ್ಲಿನ ಮುಖ್ಯ ನದಿ ಅದರ ತೀರ ಬಾಡದ ದಂಡೆಯಲ್ಲಿ ಕಿಗ್ಗಳ್ಳಿಯಿದೆ; ತುತ್ತುದಿಯಲ್ಲಿ, ನಾಡಿನ ರಾಜಧಾನಿಯಾದ ವಿಕ್ರಮನಗರವಿದೆ. ಇನ್ನು ವನಶ್ರೀಗೆ-ಆಚೀಚಿನ ಪರ್ವತಗಳಿಂದ ಸೊಕ್ಕಿ ಬರುವ ಹಲವಾರು ಚಿಕ್ಕ ದೊಡ್ಡ ನದಿಗಳು ಪೋಷಕವಾಗಿವೆ ಅವಕ್ಕೆ ಶೀಲವತಿ, ಮಾನವತಿ, ನೀಲಾ ಇವೇ ಮೊದಲಾದ ಸುಂದರ ಹೆಸರುಗಳೂ ಇವೆ ಎರಡೂ ಬೆಟ್ಟಗಳ ನೀರನ್ನು ಹೊತ್ತು ತಂದು ಯುಗಸಾನಗಳಿಂದ ಈ ನದಿಗಳು ಗೊಂಡಾರಣ್ಯದ ಕಣವೆ, ಬಯಲುಗಳನ್ನು ಹರಸುತ್ತ ಬಂದಿವೆ.

ಹಳ್ಳಿಯ ವಾಡಿಕೆಯಲ್ಲಿ ನಾಡಿನ ಮೂಡು, ಪಡು, ತೆಂಕು ಭಾಗಗಳನ್ನು ಮೂಡುನಾಡು, ಪಡುನಾಡು, ಬಡಗುನಾಡು-ಎಂದಿತ್ಯಾದಿಯಾಗಿ ಕರೆಯುವ ವಾಡಿಕೆಯಿದ್ದರೂ, ಈಗ ಮಾನಜಿಲ್ಲೆ, ವಿಕ್ರಮಜಿಲ್ಲೆ ಹೆಸರುಗಳಿಂದ ಕರೆಯುವ ಹೊಸ ಪರಿಪಾಠ ಬಂದಿದೆ. ಸ್ವಾತಂತ್ರ್ಯ ಬರುವ ಮುಂಚೆಯೇ ಹೆಸರು ಬದಲಿಸುವ ಚಾಳಿ ಬಂದಿದ್ದು, ಊರುಗಳಿಗೂ, ಊರಿನ ಜನವರ್ಗಗಳಿಗೂ ಬದಲು ಹೆಸರುಗಳನ್ನು ಕೊಟ್ಟಿದ್ದಾರೆ ನಮ್ಮ ಮುಕ್ಕಣ್ಣ-ಜಾತಿಯಲ್ಲಿ ವಿನಾಮಧಾರಿ. ಅದು ಆತನಿಗೆ ತಿಳಿದ ಹೆಸರಲ್ಲ ಅವನ ಜನಕ್ಕೆ ಸರಕಾರ ಕೊಟ್ಟ ಹೆಸರು ಅವನ ಊರಲ್ಲಿ-ಒಡ್ಡರು, ಕಮ್ಮಾರರು, ಆರಂಬಗಾರರು ಎಂದು ಕಸುಬಿಗೆ ತಕ್ಕ ಜಾತಿ ಕುಲಗಳು ರೂಢಿಯಿಂದ ಬಂದುವು. ಮುಕ್ಕಣ್ಣನನ್ನು 'ನಿನ್ನ ಜಾತಿಯಾವುದು?' ಎಂದು ಕೇಳಿದರೆ 'ರಂಬಾರ' ಎಂದಾನು ಆರಂಬಗಾರ-ಎಂಬ ಪದ ಅವನ ಬಾಯಲ್ಲಿ 'ರಂಬಾರ' ಆಗಿದೆ ರಂಬಾರರು-ಎಂದರೆ ಅವರ ಜನ. ಕಿಗ್ಗಳ್ಳಿ, ಬೆಣ್ಣೆಹಳ್ಳಿ, ಮಾರನಹಳ್ಳಿ, ಸೋಮನಹಳ್ಳಿ ಮೊದಲಾದ ಹತ್ತೆಂಟು ಹಳ್ಳಿಗಳಲ್ಲಿ ರಂಬಾರ ಜನ ಇದ್ದಾರೆ ಅವರ ನಂಟುತನ ಈ ಹಳ್ಳಿಗಳೊಳಗಷ್ಟೆ ನಡೆದು ಬಂದಿದೆ

ಕಿಗ್ಗಳ್ಳಿಯಲ್ಲಿ ನೆಪಕ್ಕೆ ಒಂದು ಶಾಲೆಯಿದೆ. ಅದು ಪ್ರಾರಂಭವಾಗಿ ಬಹುವರ್ಷಗಳಾದರೂ-ಓದು ಬರಹದ ಪ್ರಯೋಜನ ಪಡೆ

ದವರು ಕಡಿಮೆ ಆ ಶಾಲೆಯಲ್ಲಿ ಐವತ್ತು ಮಂದಿಗಿಂತ ಹೆಚ್ಚಿಗೆ ವಿದ್ಯಾರ್ಥಿಗಳಿಲ್ಲ ಅಂಥವರಲ್ಲಿ ರಂಬಾರರ ಮಕ್ಕಳು ಇನ್ನೂ ಕಡಿಮೆ ಮುಕ್ಕಣ್ಣ ಹುರುಪಿನಿಂದ ತನ್ನ ಒಬ್ಬನೇ ಮಗ ಮಾನಪ್ಪನನ್ನು ಅದಕ್ಕೆ ಕಳುಹಿಸಿದ ಕಾಲವುಂಟು ಅವನಿಗೆ ಓದಿನ ಶಾಸ್ತ್ರವಾಗಿದೆ ಇನ್ನೂ ಅವರ ಊರ ಜನಕ್ಕೆ ಓದು ಬರಹ ಬೇಡ ರೈತಾಪಿ ಕೆಲಸಗಳಲ್ಲಿಯೇ ತೃಪ್ತಿ

ಹಾಗಿದ್ದರ ವಿನಾಮಧಾರಿಯೆಂದು ಅವನ ಜನಕ್ಕೆ ಹೆಸರು ಕೊಟ್ಟರೇಕೆ? ಅದು ರಾಜಕೀಯ ಮುಕ್ಕಣ್ಣನಂಥವರಿಗೆ ತಿಳಿಯದ್ದು ಅವರೆಲ್ಲ ಹಿಂದುಳಿದ ಜನರೆಂಬುದನ್ನು ಗುರುತಿಸಲು, ಯೋಗ್ಯ ಹೆಸರು ಬೇಕೆಂದು ಕಳೆದ ಖಾನೇಶುಮಾರಿಯಲ್ಲಿ ಈ ಹೆಸರು ಕೊಟ್ಟರು ಆದರೂ ಮುಕ್ಕಣ್ಣ ರಂಬಾರನಾಗಿಯೇ ಉಳಿದಿದ್ದಾನೆ ಶಾಲೆಗೆ ಹೋದ ಅವನ ಮಗ ತಾನು 'ವಿನಾಮಧಾರಿ' ಎಂದುಕೊಳ್ಳುತ್ತಿದ್ದಾನೆ ಆ ಮಾತಿಗೆ ಗೂಡಾರ್ಥವೇನೂ ಇಲ್ಲ ಅವರು ಹಣೆಯ ಮೇಲೆ-ನಾಮ, ವಿಭೂತಿ ಮೊದಲಾದ್ದನ್ನು ಹಚ್ಚದವರು ಎಂದು ಅರ್ಥ ಈ ಪ್ರಾಂತದ ಹಲವಾರು ಜಾತಿ, ಕೂಟಗಳನ್ನು ಅವರ ಸರಕಾರ ಇಂಥ ಹೆಸರುಗಳಿಂದ ಕರೆಯತೊಡಗಿದೆ ಜನಸಂಖ್ಯೆಯಲ್ಲಿ ಅರ್ಧಕ್ಕಿಂತಲೂ ಹೆಚ್ಚಿಗೆ ಜನರು ವಿನಾಮಧಾರಿಗಳು ಅವರೆಲ್ಲರೂ ಹಿಂದುಳಿದವರು ಎಂಬುದು ರಾಜಕೀಯ ಕ್ಷೇತ್ರದ ಊಹೆ ನಗರಗಳಲ್ಲಿ ಅವರಲ್ಲಿಯೂ ಬಹು ಮಂದಿ ಮುಂದೆ ಬಂದು ಸಂಪತ್ತು, ಖ್ಯಾತಿ, ಉದ್ಯೋಗ ಗಳಿಸಿ ಕೊಂಡವರುಂಟು ಅಂಥವರ ಪಾಲಿಗೆ 'ವಿನಾಮಧಾರಿ' ಹೆಸರು ಅನುಕೂಲಕ್ಕೊಬ್ಬ ಅಣ್ಣಸಿದ್ದ ಹಾಗೆ

ಇನ್ನು ಉಳಿದ ಜನವರ್ಗದಲ್ಲಿ ನೂರಾರು ಒಳಪಂಗಡ ಭೇದ ಗಳಿವೆಯಾದರೂ ಸರಕಾರ-ಎರಡು ಮುಖ್ಯ ಬಣಗಳಾಗಿ ಅವನ್ನು ವಿಭಾಗಿಸಿದೆ. ನಾಮಧಾರಿಗಳು, ದ್ವಿನಾಮಧಾರಿಗಳು-ಎಂದು ಅದಕ್ಕೂ ಗಂಭೀರ ಅರ್ಥವಿಲ್ಲ. ಮೂರು ನಾಮ ಹಾಕುವವರು ಸಹ ಈ ಎರಡು ಪಂಗಡಗಳಲ್ಲಿ ಸೇರಿಕೊಳ್ಳಬೇಕು ಇಷ್ಟವಿಲ್ಲದಲ್ಲಿ ಅನು ಕೂಲತೆಗೆ ಸಮನಾಗಿ-ವಿನಾಮಧಾರಿಗಳೆಂದುಕೊಳ್ಳುವುದೂ ಉಂಟು ಇವರಲ್ಲಿ ಒಂದು ನಾಮದವರು ಕಡಿಮೆ ಜನ, ಎರಡರವರು ಸಂಖ್ಯೆ

ಯಲ್ಲಿ ತುಸು ಹೆಚ್ಚು. ಇವೆರಡು ಪಂಗಡಗಳಲ್ಲಿ ವಿದ್ಯಾವಂತರ ಸಂಖ್ಯೆ ಅಧಿಕವಾಗಿದೆ. ವ್ಯಾಪಾರ ಸಾಪಾರಗಳಲ್ಲಿ ನಾಮಧಾರಿಗಳು ಮುಂದೆ ಬಂದಿದ್ದರೆ, ಭೂಮಿ ಕಾಣಿಕೆಗಳಲ್ಲಿ ದ್ವಿನಾಮಧಾರಿಗಳು ಮುಂದೆ ಬಂದವರು. ಕೂಲಿ, ನಾಟಿ ಮಾಡುವವರು, ಲಾವಣಿ (ಗುತ್ತಿಗೆ) ಪಡೆದು ಜಮೀನು ಮಾಡುವವರು (ಅವರಲ್ಲಿಯೂ ದ್ವಿನಾಮಿಗಳಿರಬಹುದು) ಬಹುಮಟ್ಟಿಗೆ ವಿನಾಮಿಗಳ ಗುಂಪಿಗೆ ಸೇರಿದವರು. ಅಂಥವರಲ್ಲಿ ಮುಕ್ಕಣ್ಣನೊಬ್ಬ. ಆತ ಕಿಗ್ಗಳ್ಳಿಯ ಒಂದು ಶ್ರೀಮಂತ ಮನೆತನದ ಆಶ್ರಯದಲ್ಲಿ ಬೆಳೆದು ಬಂದ ಪ್ರಾಮಾಣಿಕ ರೈತ, ಆದರೆ ರಾಜಕೀಯದಲ್ಲಿ ಹುಂಬ.

ಅವನ ಧನಿಗಳು ನಾಮಧಾರಿಗಳು. ನಾಮಧಾರಿಗಳಲ್ಲಿ ಜಮೀನುದಾರರು ಕಡಿಮೆಯಾದರೂ, ಇವರ ಹಿರಿಯರು ಮಾಡಿದ ಯಾವುದೋ ಉಪಕೃತಿಯಿಂದ ವಿಕ್ರಮ ಮನೆತನದ ಅರಸರು, ಇವರ ಮನೆತನಕ್ಕೆ ಕಿಗ್ಗಳ್ಳಿ, ಮಾರನಹಳ್ಳಿ ಮೊದಲಾದ ಕೆಲವು ಗ್ರಾಮಗಳನ್ನು ಉಂಬಳಿಯಾಗಿ ಕೊಟ್ಟಿದ್ದರು. ಅವರ ಮನೆತನಕ್ಕೆ ಪಟ್ಟೆದಾರರು–ಎಂಬ ಬಿರುದು ಬಹು ಹಿಂದಿನಿಂದಲೂ ಬಂದಿದೆ. ವಿಕ್ರಮನಗರದ ಅರಮನೆಯಲ್ಲಿ ವಾಡಿಕೆಯಿಂದ ನಡೆಯುವ ದಸರೆ ಮೊದಲಾದ ಉತ್ಸವಗಳಲ್ಲಿ ಪಟ್ಟೆದಾರರ ಮನೆತನಕ್ಕೆ ತಪ್ಪದೆ ಆಮಂತ್ರಣ ಬರುತ್ತಿತ್ತು. ಕಿಗ್ಗಳ್ಳಿಯಲ್ಲಿ ಇಂದಿಗೂ ನೀವು ಅವರ ಮೂಲದ ಮನೆಯನ್ನು ಕಾಣಬಹುದು. ಭಾರಿ ದೊಡ್ಡ ಮನೆ, ದೊಡ್ಡ ಪಾಗಾರ, ಹೆಬ್ಬಾಗಿಲು, ಅಂಬಲ, ಚಾವಡಿಗಳಿಂದ ಕೂಡಿದ ಮನೆ. ಹಳೆಗಾಲದ ಮರದ ಕೆತ್ತನೆಗಳಿಂದ ಶೋಭಿಸುವ ಕಿಟಕಿ, ಬಾಗಿಲು, ಕಂಭ, ಬೋದಿಗೆಗಳಿಂದ ಕೂಡಿದಂಥದು. ಮುಕ್ಕಣ್ಣ ಆ ಮನೆಯ ಅಂಗಳದ ಧೂಳಿನಲ್ಲಿ ಹುಟ್ಟಿ, ಬೆಳೆದವನು–ಎಂದರೆ ಸಲ್ಲುವ ಮಾತೇ. ಅವನ ಹಿರಿಯರು ಸಹ ಪಟ್ಟೆದಾರರ ಪಾರಂಪರ್ಯ ಒಕ್ಕಲುಗಳು. ಮುಕ್ಕಣ್ಣ ಎಳೆಯನಾಗಿದ್ದಾಗ ನಿತ್ಯವೂ ತನ್ನ ತಂದೆಯೊಡನೆ ಅಲ್ಲಿಗೆ ಬಂದು ಹೋಗುತ್ತಿದ್ದ ದೂರವೂ ಇರಲಿಲ್ಲ. ಅಂದಿನಿಂದ ಇಂದಿಗೂ ಆತ ಅವರ ಮನೆಯ ಆಳು. ನಂಬಿಕೆಗೆ ತಕ್ಕವನಾಗಿ ಬೆಳೆದು ಬಂದ ವ್ಯಕ್ತಿ.

ಈತನ ತಂದೆ ತಿಪ್ಪಣ್ಣನೊಡನೆ, ಮಗುವಾದಾಗ ಬಂದು ಹೋಗು

ತ್ತಿದ್ದ ಕಾಲದಲ್ಲಿ, ಪಟ್ಟೆದಾರ ಅನಂತದೇವರು ಯಜಮಾನರಾಗಿದ್ದರು. ಅವರಿಗಾಗಲೇ ಮುಪ್ಪು ಬಂದಿತ್ತು ಹಿರಿಯರಾದ ಅವರು ಕಿರಿಯ ಮುಕ್ಕಣ್ಣನನ್ನೆಲ್ಲಾದರೂ ಅಂಗಳದಲ್ಲಿ ಕಂಡರೆಂದರೆ, "ಮುಕ್ಕ, ತಂಗುಳಾಯಿತೇ ?" ಎಂದು ಎಷ್ಟೋ ಬಾರಿ ಕೇಳಿದ್ದುಂಟು "ಇಲ್ಲ" ಎಂದರೆ, "ಹಾಗಿದ್ದರೆ ಯಾಕೆ ನಿಂತಿದ್ದೀ ? ಹಿಂದೆ ಅಂಗಳದಲ್ಲಿ ಎಲ್ಲರೂ ಊಟಕ್ಕೆ ಕುಳಿತಿದ್ದಾರೆ-ಹೋಗು" ಎನ್ನುತ್ತಿದ್ದರು ಈತ ಹಿಂದಣ ಚಾವಡಿಗೆ ಹೋಗಿ, ಉಂಡು, ಹೊಟ್ಟೆ ತಂಪುಮಾಡಿಕೊಂಡು ಬರುವುದು ನಿತ್ಯದ ವಾಡಿಕೆ ಅವನ ಪಾಲಿಗೆ ಅನಂತದೇವರು ದೇವರೇ ಆಗಿದ್ದರು ಅವನ ತಂದೆ ತಿಪ್ಪಣ್ಣನ ಪಾಲಿಗೂ ಅವರು ದೇವರೇ ಇನ್ನು ಹಲವಾರು ಆಶ್ರಿತ ಕುಟುಂಬಗಳ ಪಾಲಿಗೂ ಹಾಗೆಯೇ ಈ ಎಲ್ಲ ಒಕ್ಕಲುಗಳೂ ತಮಗೆ ಏನು ಕಷ್ಟ ಬಂದರೂ, ಕಾಯಿಲೆ ಬಂದರೂ, ಬೆಳೆ ಕೆಟ್ಟು ಕಂಗಾಲಾದರೂ ಅವರ ಮುಂದೆ ಹೋಗಿ ಹೇಳಿಕೊಳ್ಳಬೇಕು ಅವರೇ ಏನಾದರೂ ಸಮಾಧಾನ ಹೇಳಬೇಕು ಆ ಸಮಾಧಾನ ಹೊತ್ತುಕೊಂಡು ಅವರು ತಮ್ಮ ಮನೆಗೆ ತೆರಳಬೇಕು. ಧನಿ ಒಕ್ಕಲೊಳಗಿನ ಒಂದು ಮೂಢ ನಂಬಿಕೆಯಾದರೂ, ಗಾಢ ನಂಬಿಕಯಾಗಿತ್ತು

ಮುಕ್ಕಣ್ಣನ ತಂದೆ ತಿಪ್ಪಣ್ಣ ತೀರಿಹೋದಾಗ, ಆತನಿಗೆ ಹದಿನೆಂಟು ವರ್ಷದ ಹರೆಯ ತಂದೆಗೆ ಅವನೊಬ್ಬನೇ ಗಂಡು ಮಗ. ತಂದೆ ತೀರಿದ ಗಳಿಗೆಯಲ್ಲಿ ತನ್ನ ಜೀವನಾಧಾರವೇ ಕಡಿದುಹೋದಂತೆ ಗೊಳೋ ಎಂದು ಕೂಗಿಕೊಂಡ ಆಗ ಧನಿಯೇ ಅವನ ಮನೆಯ ತನಕ ಬಂದು, ಅಳುತ್ತಿದ್ದ ಅವನ ಬೆನ್ನು ಚಪ್ಪರಿಸಿ, "ಮುಕ್ಕ, ಯಾಕೆ ಅಳುತ್ತೀಯಾ ? ಯಾರಿಗೆ ಜೀವ ಶಾಶ್ವತ ? ನೀನು ಹೀಗೆ ಅತ್ತರೆ ಹೇಗೆ ? ನೀನು ಗಂಡಸಲ್ಲವೆ ನಿನ್ನ ತಾಯಿಯ ಮುಖ ನೋಡು. ಅವಳಿಗೆ ಸಮಾಧಾನ ಹೇಳಿ ಅವಳ ಬದುಕನ್ನು ತಂಪು ಮಾಡಬೇಕು" ಎಂದಿದ್ದರು. ತನ್ನ ಮುಂದಿನ ಹೊರೆ ತನಗೆ ನಿರ್ವಹಿಸಲು ಬಂದೀತೇ-ಎಂದು ಕಂಗಾಲಾದಾಗ, ಅವರು "ಅಂಜುತ್ತೀ ಯಾಕೆ ? ನಾನಿಲ್ಲವೇ?" ಎಂದು ಧೈರ್ಯವನ್ನು ಹೇಳಿದ್ದರು ಅವರಿರುವಷ್ಟು ದಿನ ಅದೇ ರೀತಿಯಲಿ, ತಂದೆ ಮಗನನು, ನಡೆಯಿಸಿಕೊಂಡು ಹೋಗುವಂತೆ.

ಅವನನ್ನು ನಡೆಯಿಸಿಕೊಂಡು ಹೋದರು.

ಅವರು ತಮ್ಮ ಎಪ್ಪತ್ತರಲ್ಲಿ ತೀರಿಕೊಂಡರು, ಅನಂತರ ನಾಲ್ವತ್ತು ವಯಸ್ಸಿನ ಅವರ ಒಬ್ಬನೇ ಮಗ ರಾಮಕೃಷ್ಣದೇವರು ಪಟ್ಟಕ್ಕೆ ಬಂದರು 'ಪಟ್ಟ' ಎಂಬುದು ವಾಡಿಕೆಯಿಂದ ಬಂದ ಮರ್ಯಾದೆಯ ಮಾತು ಮುಕ್ಕಣ್ಣನಿಗೆ ಅದರಲ್ಲಿ ಯಾವ ಕಹಿಯೂ ಕಂಡು ಬಂದುದಿಲ್ಲ ಈ ರಾಮಕೃಷ್ಣದೇವರು ಸಹ ತಂದೆಯ ಹೆಜ್ಜೆಯನ್ನು ತುಳಿದು, ಜಮೀನುದಾರಿಕೆ ನಡೆಯಿಸಿಕೊಂಡು ಹೋದರು ಆಗಿನ ದಿನಗಳಲ್ಲಿ ಪಟ್ಟೆದಾರರ ಮನೆಯಲ್ಲಿ–ಚಚೌತಿ, ನವರಾತ್ರಿ, ನಾಗರ ಪಂಚಮಿ, ಯುಗಾದಿ–ಏನು ನಡೆಯುವುದಿದ್ದರೂ, ಯಾವತ್ತು ಒಕ್ಕಲುಗಳನ್ನು ಕರೆಯಿಸಿ ಅವರಿಗೆ ಊಟದ ಸನ್ಮಾನ ನಡೆಯುತ್ತಿತ್ತು ಅಷ್ಟೊಂದು ಆದಾಯವೂ ಅವರಿಗಿತ್ತು ಔದಾರ್ಯವೂ ಇತ್ತು ಹಾಗೆ ನೋಡಿದಲ್ಲಿ–ದಿನ ಸರಿದಂತೆ ಈ ಹಳೆಯ ಹಲವಾರು ಕಟ್ಟಲೆ, ಸಂಪ್ರದಾಯಗಳನ್ನು ನಡೆಯಿಸಿಕೊಂಡು ಹೋಗುವ ಕೆಲಸ ದಿಗಿಲು ಹಾರುವ ಕೆಲಸವಾಗುತ್ತ ಬಂದಿದೆ

ರಾಮಕೃಷ್ಣದೇವರ ಪ್ರಕೃತಿಯು ಕಾಯಿಲೆ ಪ್ರಕೃತಿ ಅವರು ಪಟ್ಟಕ್ಕೆ ಬಂದಂದಿನಿಂದ–ಪಿತ್ತ, ಉಬ್ಬಸ, ಮತ್ತೊಂದು ಎಂದು ಹಾಸುಗೆ ಹಿಡಿಯದ ವಾರವಿಲ್ಲ ಅವರಿಗೆ ಮೂರು ಮಂದಿ ಗಂಡು ಮಕ್ಕಳು. ಹಿರಿಯ ಮಗ ಕೃಷ್ಣದೇವ ತಂದೆಗೆ ವೈದ್ಯೋಪಚಾರ ನಡೆಯಿಸುವ ಸಲುವಾಗಿ, ಅವರನ್ನು ವಿಕ್ರಮನಗರಕ್ಕೆ ಕರೆದುಕೊಂಡು ಹೋಗುವ ಯೋಚನೆ ಮಾಡಿದ ಆತ ತಾಯ್ತಂದೆಯರೊಡನೆ ನಗರಕ್ಕೆ ಹೊರಟಾಗ, ಮುಕ್ಕಣ್ಣನನ್ನು ಕರೆದು ಧಣಿಗಳಾಡಿದ ಮಾತು ಅವನಿಗೆ ಇನ್ನೂ ನೆನಪು ಉಳಿದಿದೆ "ಮುಕ್ಕ–ನೀನು ಮನೆಯಲ್ಲೇ ಇರು ಕೃಷ್ಣ ನನ್ನೊಂದಿಗೆ ಬರುತ್ತಾನೆ ಇನ್ನಿಬ್ಬರು ಚಿಕ್ಕವರಲ್ಲವೇ ನಾವು ಬರುವುದಕ್ಕೆ ನಾಲ್ಕು ದಿನ ತಡವಾದೀತು ಅವರೆಲ್ಲಾದರೂ ತಪ್ಪಿದರೆ ನೀನು 'ಹಾಗಲ್ಲ, ಹೀಗೆ' ಎಂದು ಹೇಳಬೇಕು" ಎಂದಿದ್ದರು. ಆಗ ಮುಕ್ಕಣ್ಣನಿಗಸಿಸಿದ ಪ್ರತಿಮಾತಿದು 'ಏನು ಧಣಿಯೆ, ನಿಮ್ಮ ಮಕ್ಕಳಿಗೆ ಬುದ್ಧಿ ಸಾಲದೇ? ನಾನವರಿಗ ಹೇಳುವುದೆಂದರೇನು? ನಿಮ್ಮ ಅನ್ನತಿಂದು ಬೆಳೆದ ನಾಯಿಯಂತಿರುವವ ನಾನು." ಆ ಮಾತು

ಗಳ ಬದಲು ಕಂಬನಿಗಳು ಅವನ ಕಣ್ಣಿಂದ ಉದುರಿದುವು. ಅವರ ಉಳಿದಿಬ್ಬರು ಮಕ್ಕಳಿಗಿಂತ ಮುಕ್ಕಣ್ಣ ಬರಿಯ ಒಂದೆರಡು ವರ್ಷಗಳಿಗಷ್ಟೇ ಹಿರಿಯನಿರಬಹುದು.

ಅಲ್ಲಿಂದ ಮುಂದೆ ಎರಡುವರ್ಷಗಳಲ್ಲಿ ಆತ ಕಿಗ್ಗಳ್ಳಿಯಿಂದ ವಿಕ್ರಮನಗರಕ್ಕೆ ಸುದ್ದಿ, ಸೂರು ಮುಟ್ಟಿಸಲು ಹೋಗಿ ಬರಬೇಕಾಯಿತು ಆದರೆ, ರಾಮದೇವ ಧನಿಗಳ ಋಣ ನಗರದಲ್ಲಿಯೇ ತೀರಿದಾಗ, ಈತನ ದುಃಖ ಹೇಳುವುದಕ್ಕಿಲ್ಲ ಅದನ್ನು ನೆನೆದರೇ ಕಂಬನಿ ಬರುತ್ತದೆ.

ಮುಂದೆ–ಅನಂತರವೂ ಹೀಗೆಯೇ ಆ ಮನೆಯ ಸಂಗತಿಗಳು ಇವನ ಕಣ್ಮುಂದೆ ನಡೆದುವು ರಾಮದೇವರೂ ತೀರಿಕೊಂಡ ಬರಿಯ ಎರಡು ವರ್ಷಗಳಲ್ಲಿ ಅವರ ಹಿರಿಯ ಮಗ ಕೃಷ್ಣದೇವರು ತೀರಿಕೊಂಡರು ಉಳಿದವರಿಬ್ಬರೇ–ಜಯದೇವ, ವಾಮದೇವರುಗಳು. ಅವರು ಯೌವನಕ್ಕೆ ಕಾಲಿರಿಸಿದವರಷ್ಟೆ ಅವರಿಗೆ ಹಳ್ಳಿಗಿಂತ ಪೇಟೆ ವಾಸಿ–ಎಂದು ತೋರತೊಡಗಿತು ಇಲ್ಲಿನ ಹವ ಹಿಡಿಸುವುದಿಲ್ಲ–ಎನ್ನತೊಡಗಿದರು ಹಾಗೆಂದಾಗಲೆಲ್ಲ ಮುಕ್ಕಣ್ಣ "ಇಲ್ಲಿನ ಹವೆಗೇನಾಗಿದೆ–ಧನಿಯೇ! ನಿಮ್ಮ ಹಿರಿಯರೆಲ್ಲ ಇಲ್ಲೇ ಹುಟ್ಟಿ ಬೆಳೆದವರಲ್ಲವೇ?" ಎಂದು ವಾದಿಸಿದವ ಆದರೂ–ಮನೆಗೆ ಬಂದ ಗೃಹಿಣಿಯರಿಂದಲೋ, ಅವರ ಸ್ವಂತ ಬುದ್ಧಿಯಿಂದಲೋ–ಅಣ್ಣ ತಮ್ಮಂದಿರ ಸರದಿಯಿಂದ ವಿಕ್ರಮನಗರದಲ್ಲಿ ವಾಸಮಾಡತೊಡಗಿದರು ಕೆಲವೊಮ್ಮೆ ಇಬ್ಬರೂ ಅಲ್ಲಿ ಉಳಿಯುತ್ತಿದ್ದರು ಅಲ್ಲಿನ ನಾಗರಿಕ ಸೌಕರ್ಯ, ಆಕರ್ಷಣೆಗಳು ಬೆಳೆದು ಬಂದಂತೆ–ಕಿಗ್ಗಳ್ಳಿಗೆ ಬರುವುದು ಕಡಿಮೆಯಾಯಿತು. ಊರಿಗೆ ಕಟ್ಟು ಕಟ್ಟಳೆಗಳನ್ನು ನಡೆಯಿಸುವುದಕ್ಕಷ್ಟೇ ಬಂದು ಹೋಗತೊಡಗಿದರು ಮನೆಯ ಆಡಳಿತೆ, ಭೂಮಿಯ ಆಡಳಿತೆಯನ್ನು ಅನುಭವಿಕರಾದ ಕರಣಿಕ ನಾರಣಪ್ಪಯ್ಯ ನಡೆಯಿಸಿಕೊಂಡು ಹೋಗತೊಡಗಿದರು ಧನಿಯಿಲ್ಲದ ಮೇಲೆ, ಮುಕ್ಕಣ್ಣನೇ ಆ ಮನೆಯಲ್ಲಿ ನಂಬಿಕೆಯ ಆಳಾಗಿ ವಾಸಿಸತೊಡಗಿದ ಇನ್ನು ಇಲ್ಲಿಂದ ವಿಕ್ರಮನಗರಕ್ಕೆ ಹಣ, ಕಾಗದ, ಅಕ್ಕಿ–ಏನು ಒಯ್ಯುವುದಿದ್ದರೂ ಅದನ್ನು ಅವನೇ ಒಯ್ಯುತ್ತಿದ್ದ! ಅಷ್ಟು ಮಾಡುತ್ತಿದ್ದನಾದರೂ–ವಿಕ್ರಮ

ನಗರದಲ್ಲಿ ಅವನು ಕಂಡುದು ಧನಿಗಳ ಮನೆಯನ್ನು ಮಾತ್ರ ಎಂದರೂ ತಪ್ಪಿಲ್ಲ.

ಅವನ ಧನಿಯ ಕೃಪೆಯಿಂದ–ದೊರೆತನಕ್ಕೆ ಕಡಿಮೆಯಲ್ಲದ ಮತ್ತೊಂದು ರೀತಿಯ ಗೌರವ ಅವನ ಜೀವನಕ್ಕೆ ಅಂಟಿಬಂದಿತ್ತು. ಕಿಗ್ಗಳ್ಳಿಯ ಬೆನ್ನಿಗೆ, ಗಾವುದ ದೂರದಲ್ಲಿ ದೊಂಡಾರಣ್ಯದ ಸೆರಗಿದೆ. ಅದರಲ್ಲಿನ ಒಂದು ಅಂಗ ರಾಮಪುರ ಜಮೀನಿಗೆ ಸೇರಿಬಂದುದು. ಅಲ್ಲಿನ ಮೂರುನಾಲ್ಕು ಸಾವಿರ ಮಂದಿ ಆದಿವಾಸಿಗಳು, ದೊಂಡಾಲರೆಂಬುವರು, ಪಟ್ಟೆದಾರರ ಆಶ್ರಯದಲ್ಲಿ ತಲೆಮಾರುಗಳಿಂದ ಬೆಳೆದು ಬಂದವರು. ಮುಕ್ಕಣ್ಣ ಧನಿಗಳ ಪರವಾಗಿ ಅಲ್ಲಿಗೆ ರಾಯಭಾರಿಯಂತೆ ವರ್ಷಕ್ಕೆ ನಾಲ್ಕು ಬಾರಿಯಾದರೂ ಹೋಗಿ ಬರಬೇಕಾಗುತ್ತಿತ್ತು. ಹೀಗಾಗಿ ಆತ ಅವರ ಪಾಲಿನ ದೊರೆಯೆಂದರೆ ತಪ್ಪಿಲ್ಲ. ಆ ಆದಿವಾಸಿಗಳು ಬೇಸಗೆಯ ಪ್ರಾರಂಭಕ್ಕೆ ಕಿಗ್ಗಳ್ಳಿ ಮನೆಗೆ ಬಂದು "ಕುಮರಿ ಕಡಿಯಲು ಅಪ್ಪಣೆಯಾಗಬೇಕು" ಎಂದು ಬೇಡಿ, ಸಮ್ಮತಿ ಪಡೆದು, ಯುಗಾದಿಯ ಹಚ್ಚಡಗಳನ್ನು ಪಡೆದು ಹೋದರೆ, ತಿರುಗಿ ಬರುವುದು ಮಳೆಗಾಲ ಕಳೆದಮೇಲೆ. ಆಗ ಧನಿಯವರಿಗೆ ಕಾಡಿನ ಉತ್ಪನ್ನಗಳನ್ನು ಕಾಣಿಕೆಯಾಗಿ ತರುತ್ತಾರೆ. ಅವರನ್ನು ನವರಾತ್ರಿ ಹಬ್ಬದಲ್ಲಿ ಒಂದು ದಿನ ಕರೆಯಿಸುವುದೂ ಉಂಟು. ಚೌತಿಗೂ ಆಮಂತ್ರಣ ನಡೆಬೇಕು. ಈ ಕೆಲಸವನ್ನೆಲ್ಲ ಮಾಡುತ್ತಿದ್ದವ ಮುಕ್ಕಣ್ಣ. ಹೀಗಾಗಿ ಮುಕ್ಕಣ್ಣ, ಧನಿಗಳ ಪ್ರತಿನಿಧಿ. ಮಲೆವಾಸಿಗಳು ಅವನನ್ನು ಗೌರವದಿಂದ 'ದಂಡನಾಯಕ' ಎಂದು ವಾಡಿಕೆಯಾಗಿ ಕರೆಯುತ್ತಿದ್ದರು. ಅವರ ಗೋಳು ಏನಿದ್ದರೂ ಈತ ಅದನ್ನೇ ಧನಿಗಳ ಕಿವಿಗೆ ಮುಟ್ಟಿಸಿ, ಅವರಿಂದ ಪರಿಹಾರ ಒದಗಿಸುವವನು. ಅವನು ದಂಡನಾಯಕನಾದರೂ ದಂಡ ವಿಧಿಸಿದ ನಾಯಕನೆಂದೂ ಆಗಿರಲಿಲ್ಲ. ಅದು ಅವನ ಸ್ವಭಾವಕ್ಕೇ ಹಿಡಿಸದ ರೀತಿ. ಅವನ ಈ ಉದ್ಯಮದಿಂದಾಗಿ ಕ್ರಮೇಣ–ಆಸುಪಾಸಿನ ಅನೇಕ ಆದಿವಾಸಿ ಬಳಗಗಳಲ್ಲಿಯೂ ಅವನ ವರ್ಚಸ್ಸು ಪ್ರತಿಷ್ಠೆ ಬೆಳೆದು ಬಂದಿತ್ತು.

ಮುಕ್ಕಣ್ಣನಿಗೆ ನಿಜವಾಗಿ ಪರಿಚಯವುಳ್ಳ ಜಗತ್ತು–ಕಿಗ್ಗಳ್ಳಿಯ ಸಮೀಪದ ಗ್ರಾಮಗಳು, ಸುತ್ತಲಿನ ಪರ್ವತ ಪ್ರದೇಶ. ಅಲ್ಲಿನ ಜನ

ಜೀವನ ಇಂದಿಗೂ, ಹಿಂದಿನಂತೆ ಏರುತಗ್ಗಿಲ್ಲದೆ ಸಾಗಿದೆಯೆಂಬುದು ಅವನ ತಿಳಿವು. ಇದಕ್ಕಿಂತ ವಿಶಾಲವಾದ ಜಗತ್ತು ಅವನಿಗೆ ತಿಳಿದುದು ಕಡಿಮೆ. ವಿಕ್ರಮನಗರಕ್ಕೆ ಹೋಗುವ ದಾರಿಯಲ್ಲಿ ನಾಲ್ಕಾರು ಪೇಟೆಗಳನ್ನು ಕಂಡಿರುವನಾದರೂ, ಅಲ್ಲಿ ಉಳಿದು, ಅಲ್ಲಿನ ವಿಚಾರ ತಿಳಿದುಕೊಂಡವನೂ ಅಲ್ಲ. ಅಂಥ ಸ್ಥಳಗಳಲ್ಲೂ ಏನಾದರೂ ಪ್ರಲಯ, ವಿಪ್ಲವಗಳನ್ನು ಅವನು ಕಂಡವನೂ ಅಲ್ಲ. ಅವನ ನೆನಪಿಗೆ ಒಂದೆರಡು ದುಷ್ಕಾಲಗಳ ನೆನಪಿದೆ. ಅವು ದೇವರ ಕೋಪದಿಂದಾದುವು--ಎಂದು ತಿಳಿದವ.

ಗೊಂಡಾರಣ್ಯಕ್ಕೊಬ್ಬ ದೊರೆಯಿದ್ದಾನೆಂದು ಆತ ಬಲ್ಲ. ಅವನ ಹೆಸರು ವಿಕ್ರಮರಾಯ. ತಲೆಮಾರುಗಳಿಂದ ಬಂದ ಹೆಸರು ವ್ಯಕ್ತಿಗತ ಹೆಸರನ್ನೇ ಮರೆಸಿಬಿಡೆ. ಹಾಗಾಗಿ ಪ್ರತಾಪಚಂದ್ರರಾಯನೂ ವಿಕ್ರಮರಾಯನೇ! ಸಾಲದುದಕ್ಕೆ ವಿಕ್ರಮಾದಿತ್ಯನ ಸಂತತಿಯವನೇ ಆತನು ಎಂಬ ಅಂಧ ನಂಬಿಕೆ. ಬಹು ಹಿಂದೊಮ್ಮೆ ರಾಜಧಾನಿಗೆ ಈತ ಹೋದಾಗ, ವಿಜಯ ದಶಮಿಯ ಕಾಲವಾಗಿತ್ತು. ಅದರಿಂದ ದೊರೆಯ ವೈಭವಪೂರಿತ ಮೆರವಣಿಗೆಯನ್ನು ಕಂಡು, ಆ ವೈಭವ, ನೋಟಗಳಿಂದ ಹಿಗ್ಗಿ, ಆನಂದಿಸಿ ಮರಳಿ ಮನೆಗೆ ಬಂದಿದ್ದ. ಅಂದಿನಿಂದ ಇಂದಿಗೂ--ಅದೊಂದು ಅನುಭವಿಸಬೇಕಾದ ನೋಟ--ಎಂದು ಅವನಿಗೆ ಅನಿಸಿರಲೂ ಇಲ್ಲ.

ಹೀಗೆ ತಾರುಣ್ಯದಿಂದ ಯೌವನ ಬಂದಿತು, ಅದೂ ಸರಿಯಿತು. ಧನಿಪುರ ನಗರವನ್ನು ಹಿಡಿದಮೇಲೆ ಇವನೂ ಹತ್ತಾರು ಬಾರಿ ಹೋಗಬೇಕಾಯಿತು. ಅದೂ ಅಲ್ಲದೆ--ಕಿಗ್ಗಳ್ಳಿಯ ಪ್ರಾಂತಕ್ಕೆ ದೊರೆಯೇ ಬರುವಂಥ ಒಂದು ಮಹಾ ಉತ್ಸವ ಜರುಗಿತು. ಅವರು ಬರುವರೆಂದು ತಿಳಿದಾಗ, ಧನಿ, ಕರಣಿಕರ ಅಪ್ಪಣೆಯಂತೆ ಇವನೇ ಕಾಡು ಸವರಿ, ದಾರಿ ಮಾಡಿಸಿ, ತೋರಣ ಅಲಂಕಾರ ನಡೆಸಿ, ಸಮೀಪದ ಗ್ರಾಮಸ್ಥರು ಸಲಿಸಿದ ಗೌರವದಲ್ಲಿ ಪ್ರಮುಖನಾಗಿ ನಿಂತಿದ್ದ. ದೊರೆ ಅಶ್ವಾರೋಹಿಯಾಗಿ ಬಂದಾಗ "ನಮ್ಮ ಊರಿಗೆ ಬಂದು ಇಲ್ಲಿನ ನೆಲ ಪಾವನಮಾಡಿದಿರಿ" ಎಂದಿದ್ದ. ಅವನ ಮುಂದಾಳುತನದಲ್ಲಿ ಮುವ್ವತ್ತು ನಾಲ್ವತ್ತು ದೊಂಡಾಲರು, ದೊರೆಯ ಮುಂದೆ ತಮ್ಮ

ಕುಣಿತ ಕುಣಿದರು, ಹಾಡುಗಳನ್ನು ಹಾಡಿದರು ಅದನ್ನೆಲ್ಲ ನೆನೆದರೆ ಮುಕ್ಕಣ್ಣಗೆ ರಾಮಾಯಣ ಮಹಾಭಾರತಗಳೊಳಗಣ ವರ್ಣನೆಗಳ ನೆನಪಾಗುತ್ತದೆ.

ಅರಸು ಬಂದುದು ಶಿಕಾರಿಗೆ ಹೀಗಾಗಿ ನಾಲ್ಕು ದಿನ ಆ ಕಾಡು ಪರ್ವತಗಳಲ್ಲಿ ಡೇರೆ ಹೊಡಿ ನಿಂತರು ಆಗಲೂ ಈತನೇ ದೊಂಡಾಲರಿಗೆ ಹಿರಿಯನಾಗಿ, ದೊರೆಯ ಬೇಟೆ ನಡೆಯುವುದಕ್ಕೆ ಸಹಾಯನಾಗಿದ್ದ ಕರ್ತವ್ಯ ನಿರತನಾಗಿ ಆ ಬೇಟೆಗೆ ಓಡುತ್ತಿದ್ದ ಇವನನ್ನು ಕಂಡು ಅರಸು ಖುಷಿಗೊಂಡು "ಏನು ನಿನ್ನ ಹೆಸರು?" ಎಂದು ಕೇಳಿದ್ದುಂಟು ಆಗ ಮುಕ್ಕಣ್ಣ ಸ್ವರ್ಗಸುಖ ಅನುಭವಿಸಿದ್ದ

ಹೀಗಾಗಿ ದೊರೆಯ ವಿಚಾರದಲ್ಲಿ ಇಂಥ ಕನಸಿನ ಚಿತ್ರಗಳೇ ಅವನಲ್ಲಿ ತುಂಬಿಕೊಂಡಿದ್ದುವು ದೊರೆಯೇ ದೈವದ ಪ್ರತೀಕವಾಗಿತ್ತು ಅವನಿಗೆ ಅಂಥ ಹೊಂಗನಸು, ಅವನ ತೀರ ಈಚೆಗಿನ ವಿಕ್ರಮನಗರದ ಯಾತ್ರೆಯಿಂದಾಗಿ ಧ್ವಂಸಗೊಂಡು, ಅವನ ಹೊಟ್ಟೆಯನ್ನೇ ಉರಿಯಿಸಿಬಿಟ್ಟಿತು ಹೋಗುವ ಮೊದಲೇ ಕಿಗ್ಗಳ್ಳಿಗೆ ಹಲವಾರು ಸುದ್ದಿಗಳು, ಕರ್ಣಾಕರ್ಣಿಯಾಗಿ ಬಂದು ಸೇರಿದ್ದುವು 'ವಿಕ್ರಮರಾಯನನ್ನು ಓಡಿಸಿಯಾಯಿತು, ಇನ್ನೆಲ್ಲ ಸೊರಾಜ್ಯ' ಎಂಬ ಸುದ್ದಿ ಮುಟ್ಟಿತ್ತು ಅವನು ಮಾತ್ರ ಅದನ್ನು ನಂಬಿರಲಿಲ್ಲ ಸುದ್ದಿ ದಟ್ಟಣಿಸಿ, ಕಿವಿಗೆ ಸೇರವಾಗಿ ಎರೆಯತೊಡಗಿದಾಗ, ಅದನ್ನು ಮತ್ತೂ ನಂಬಲು ಇಷ್ಟವಾಗದೆ ಕರಣಿಕ ನಾರಣಪ್ಪಯ್ಯನವರನ್ನು ವಿಚಾರಿಸಿದ, "ಅಯ್ಯ, ಪಟ್ಟಣದಲ್ಲಿ ದಂಗೆ, ದೊಂಬಿಯೇನಾದರೂ ಆಯಿತೇ?" ಎಂದು ಪ್ರಶ್ನಿಸಿದ ವಾರಪತ್ರಿಕೆಗಳಿಂದ, ಮಾತುಕತೆಗಳಿಂದ ಅರ್ಧಮರ್ಧ ಸುದ್ದಿ ತಿಳಿದ ಅವರು ತಮ್ಮ ರಾಜಕೀಯ ಪ್ರೌಢಿಮೆಯನ್ನು ಅವನಿಗೆ ವಿವರಿಸಿ ಹೇಳಿದಾಗ ಮುಕ್ಕಣ್ಣಗೆ ಅದೊಂದರ ತಲೆಬುಡವೂ ಆಗಲಿಲ್ಲ ಇನ್ನೊಮ್ಮೆ "ರಾಜರನ್ನು ಓಡಿಸಿದ್ದು ನಿಜವೇ?" ಎಂದು ಕೇಳಿದ. "ಅವರು ಓಡಿಲ್ಲ, ಓಡಿದ ಹಾಗೆಯೇ" ಎಂದು ಕರಣಿಕರು ಹೇಳಿದರೆ, ಆ ಮಾತಿನ ಅರ್ಥ ಅವನಿಗೆ ಆಗದಾಯಿತು.

"ಇನ್ನು ರಾಜರು ನಮಗೆ ಬೇಡವೇ? ಹೊಸಬರು ಯಾರು ಬರುತ್ತಾರೆ" ಎಂದು ಕೇಳಿದ.

" ಇನ್ನು ನಮಗೆ ನಾವೇ ರಾಜರು  ರಾಜರ ಬದಲಿಗೆ ಹೆಳದಿ ಟೋಪಿಯವರು ಇದ್ದಾರಲ್ಲ."

" ಅಂದರೆ ರಾಜರಿಲ್ಲದೆ ಅನಾಯಕವಾಗುವುದೇ ?"

ತನ್ನ ಧನಿಗಳು ಇಂಥ ವೇಳೆಯಲ್ಲಿ ನಗರದಲ್ಲಿದ್ದಾರೆ, ದಂಗೆ ದೊಂಬಿಗಳಿಂದ ಅವರಿಗೇನಾದರೂ ಅಪಾಯ ಸಂಭವಿಸಲಾರದೇ–ಎಂಬುದರ ಕಡೆಗೂ ಮನಸ್ಸು ಹರಿಯಿತು

ಅಂತು ಸ್ವಾತಂತ್ರ್ಯೋದಯದ ಸುದ್ದಿ ಮುಕ್ಕಣ್ಣನಿಗೆ ನಿದ್ದೆಗೆಡಿಸುವ ಕನವರಿಕೆಯಾಯಿತು, ಹರ್ಷವನ್ನು ಕೊಡಲಾರದೆ ಹೋಯಿತು. ರಾಜರಿಲ್ಲದೆ ರಾಜ್ಯ ನಡೆದೀತು–ಎಂಬುದನ್ನು ಅವನು ಊಹಿಸಲಾರ. ಮುಂದೊಂದು ತಿಂಗಳಲ್ಲಿ ಅವನೇ ಕರಣಿಕರ ಪತ್ರ ಹಿಡಿದುಕೊಂಡು ನಗರಕ್ಕೆ ಹೋಗಬೇಕಾಯಿತು  ಜತೆಗೆ ತನ್ನ ಮಗ ಮಾನಪ್ಪನನ್ನು ಕರೆದುಕೊಂಡು ಹೋದ  ಹಿಂದಿನ ದಿನಗಳಲ್ಲಿ ಮಜಲು ಮಾಡುತಿದ್ದ ಊರು, ಮನೆ, ಛತ್ರಗಳಲ್ಲಿ ಈಗಲೂ ಉಳಿಯುತ್ತ ಹೋದ ತುಸುವೇ ಹಾದಿ ಬದಲಿಸಿದರೆ ಮೋಟರು ಸಂಚಾರದ ಅನುಕೂಲತೆಯಿತ್ತು ಅದನ್ನು ಬಯಸಲಿಲ್ಲ  ಅದು ನಾಲ್ಕು ಮಜಲಿನ ಹಾದಿ ರಾತ್ರಿ ಒಂದೊಂದುಕಡೆ ವಿಶ್ರಾಂತಿಗೆ ತಂಗಬೇಕಾಗುತ್ತಿತ್ತು  ಈತ ನಡೆದು, ದಣಿದು, ವಿಶ್ರಾಂತಿ ಪಡೆಯುತ್ತಿದ್ದ  ಆದರೆ ಇವನ ಮಗ, ತರುಣ, ಕುತೂಹಲಭರಿತ  ಅವನು ಹೋದಲ್ಲೆಲ್ಲ–ದಂಗೆ, ಚಳವಳ, ಸ್ವರಾಜ್ಯ ಸಂಪಾದನೆಗಳನ್ನು ಕುರಿತಾದ ಸುದ್ದಿಗಳನ್ನು ಸಂಗ್ರಹಿಸುತ್ತಲಿದ್ದ. ಅವನ್ನೆಲ್ಲ ತಂದೆಗೆ ಹೇಳಹೋದರೆ " ಸುಮ್ಮನಿರು ಮಗು, ನನಗೆ ನಿನಗೆ ಅದೆಲ್ಲ ಏಕೆ ? ನನ್ನ ದಿನ ಹೀಗೆ ಹೋದರೆ ಸಾಕು  ಇದನ್ನೆಲ್ಲಾ ಕಾಣುವುದಕ್ಕೆ ಕೇಳುವುದಕ್ಕೆ ನನಗೆ ಇಷ್ಟವಿಲ್ಲ" ಎಂದುಬಿಡುತ್ತಿದ್ದ ತನ್ನ ತಂದೆ ಹಳೆಗಾಲದ ಕೊರಡು ಎಂದು ಮಗ ಮಾನಪ್ಪನಿಗೆ ಹೊಳೆಯದೆ ಹೋಗಲಿಲ್ಲ

ಅಂತು ನಾಲ್ಕು ದಿನಗಳ ಕೊನೆಗೆ ವಿಕ್ರಮನಗರದ ಧನಿಯ ಮನೆಯನ್ನು ಸೇರಿದರು  ಕರಣಿಕರು ಒಪ್ಪಿಸಿದ ಪತ್ರ, ಹಾಲಾಹವಾಲಿಗಳನ್ನು ಮುಕ್ಕಣ್ಣ ಧನಿ ಜಯದೇವರಿಗೆ ತಿಳಿಸಿದ  ಮಳೆ, ಬೆಳೆಗಳ ಸುದ್ದಿಯನ್ನು ಹೇಳಿದ. "ಯುಗಾದಿಗೆ ಊರಿಗೆ ಬರುತ್ತೀರಲ್ಲ ?" ಎಂದು

ಬೇಡಿದ "ಪಾಪ, ನಮ್ಮ ದೊಂಡಾಲರು ಮೂರುವರ್ಷಗಳಿಂದಲೂ, ಯುಗಾದಿಗೆ ಅರಮನೆಗೆ ಬಂದು ಬಂದು ಧನಿಗಳೆಲ್ಲಿ ಎಂದು ಕೇಳಿ ಕೇಳಿ ಬೇಸರಿಸಿ ಹೋಗುತ್ತಿದ್ದಾರೆ ನೀವು ಊರಲ್ಲಿಲ್ಲದಿದ್ದರೆ ಬಾನಲ್ಲಿ ತಿಂಗಳು ಇಲ್ಲದ ಲೆಕ್ಕ ಎಷ್ಟು ಮಳೆ ಬಂದರೇನು ? ಬೆಳೆ ಬಂದರೇನು-ಊರಿಗೆ ಚಂದವಿಲ್ಲ" ಎಂದ ಧನಿಗಳು ನಗರ ಸೇರಿದ ಬಳಿಕ ದೊಂಡಾಲರಿಗೆಷ್ಟು ವ್ಯಥೆಯೋ, ಅಷ್ಟು ವ್ಯಥೆ ಅವನಿಗೂ ಆಗಿತ್ತು ವರ್ಷಕ್ಕೊಮ್ಮೆಯಾದರೂ ಬಂದು ಕೆಲವು ದಿನ ಇದ್ದು ಹೋಗಬೇಕು-ಎಂಬುದು ಅವನ ಆಸೆ ಅಲ್ಲಿ ಇದ್ದ ನಾಲ್ಕುದಿನಗಳಲ್ಲಿ ಆತ ತಿರು ತಿರುಗಿ ಅದೇ ಪ್ರಾರ್ಥನೆಯನ್ನೇ ಮಾಡಿದ ಜಯದೇವರು ಅದಕ್ಕೆ "ಯುಗಾದಿಗಲ್ಲವೇ-ನಾನಾಗಲೀ ತಮ್ಮನಾಗಲಿ ಬಂದೇ ಬರುತ್ತೇವೆ" ಎಂದರು ಆದರಿಂದ ಆತನ ಮನಸ್ಸಿಗಷ್ಟೇ ಸಮಾಧಾನವಾಯಿತು ಅಲ್ಲಿದ್ದ ನಾಲ್ಕು ದಿನಗಳಲ್ಲಿ ಆತ ಧನಿಗಳೊಡನೆಯೋ, ಯಜಮಾನಿಯರೊಡನೆಯೋ "ಅಪ್ಪಾ, ಅಮ್ಮ" ಎಂದು ಬಾಯಿತುಂಬ ಮಾತನಾಡಿ ಸಂತಸಗೊಂಡಿದ್ದ

ಅದೇ ಅವಧಿಯಲ್ಲಿ ಅವನ ಮಗ ಮಾಸಪ್ಪ ಮಾತ್ರ, ಬನವಸಂತೆ ಬೀದಿ ಸುತ್ತಿ, ಬಟ್ಟೆಗೆ ಎಷ್ಟು ದೂಳು ಅಂಟಿಸಿಕೊಂಡು ಬಂದನೋ, ತಲೆಗೆ ಅಷ್ಟು ಸುದ್ದಿಯನ್ನು ಅಂಟಿಸಿಕೊಂಡು ಬರುತ್ತಿದ್ದ ಒರಿಯ ಮೂರು ನಾಲ್ಕು ದಿನಗಳಲ್ಲಿ-ಆಯಸ್ಸಿನಲ್ಲಿ ಸಿಗಲಾರದಷ್ಟು ರಾಮಾಯಣವೇ ಅವನ ನಾಲಿಗೆ ದೊರೆಯಿತು ಅದರ ಸ್ವಾರಸ್ಯದ ಅಂಶವೆಂದರೆ 'ದೊರೆ ಪ್ರತಾಪಚಂದ್ರ ದುಷ್ಟ ರಾಕ್ಷಸ ಕುಲದವನು ಅವನನ್ನು ಸೋಲಿಸಿ, ಧರ್ಮರಾಜ್ಯ ಸ್ಥಾಪಿಸಲು ಬಂದವರೇ ಸಿಂಹಿ ವಾಮನರಾಯ ' ಅಂಥ ಅವತಾರ ಪುರುಷ-ರಾಜ್ಯದ ಪ್ರಧಾನಿಯಾಗುವುದೆಂದರೆ ತಮ್ಮೆಲ್ಲರ ಪುಣ್ಯ ವಿಶೇಷ'-ಇಂಥ ಘನಭಾಷಣೆಗಳು ಆ ಎಳೆಯನ ಮನಸ್ಸಿನಲ್ಲಿ ಮೂಡಿ ಸಂತೋಷ ಕೊಟ್ಟಿದ್ದವು

ಮುಕ್ಕಣ್ಣನಿಗೂ ಇದೇ ವಿಷಯವನ್ನು ಧನಿಗಳೊಡನೆ ಕೇಳಿ ತಿಳಿಯಬೇಕೆಂಬ ಚಪಲ ಧೈರ್ಯ ಸಾಲದಿದ್ದುದಕ್ಕೆ-ಮನೆಯ ಹಿಂದಿನ ಜಗುಲಿಯಲ್ಲಿ ಕುಳಿತು ಮನೆಯೊಡತಿಯೊಡನೆ "ಅಮ್ಮ, ಜನರು ಏನೇನೋ ಅನ್ನುತ್ತಿದ್ದಾರಲ್ಲ, ನಿಜವೇ ? ಅರಸರೇ ಇನ್ನಿಲ್ಲ

ವಂತೆ" ಎಂದು ಮಾತು ತೊಡಗಿದ ಆ ಹೆಂಗಸರಿಗೆ ಇಷನಷ್ಟು ಅಭಿಮಾನವಿಲ್ಲದಿದ್ದರೂ, ಸಾಕಷ್ಟು ಅಭಿಮಾನವಿದ್ದಿತು ಅವರು ಕ್ರಾಂತಿ ದಿನಗಳ ಕತೆ ಹೇಳಿದುದರ ಜತೆಗೆ "ನಮ್ಮವರು ಅನ್ನುತ್ತಾರೆ–ನಿನ್ನೆ ಅರಸಿಗೆ, ನಾಳೆ ನಮಗೆ ಈಗಾಗಲೇ ಜಮಿನ್ದಾರಿ ನಿರ್ಮೂಲನಮಾಡಿ ಎಂದು ಗುಲಾಲಿ ಟೋಪಿಯವರ ಕೂಗದ್ದಿದೆ" ಎನ್ನುತ್ತ ತಮ್ಮ ಗಂಡುಸರಿಗಿರುವ ಭಯ ಭೀತಿಗಳನ್ನು ತೋಡಿ ಕೊಂಡರು

ಆದರಿಂದ ಆತನ ಮನಸ್ಸು ಇನ್ನಷ್ಟು ಕಳವಳಕ್ಕೆ ಗುರಿಯಾಯಿತು "ಅಮ್ಮ, ಈ ಊರನ್ನು ಬಿಟ್ಟುಬನ್ನಿ, ನಮ್ಮ ಕಿಗ್ಗಳ್ಳಿಯಲ್ಲಿ ಯಾವ ಭಯವೂ ಇಲ್ಲ ಅಂಥಾ ಬಂಡಾಯ ಬರುವ ಕಾಲಕ್ಕೆ–ನಂಬಿದ ದೊಂಡಾಲರಿದ್ದಾರೆ ಜೀವಕ್ಕೆ ಜೀವ ತೆತ್ತಾರು"–ಎಂದ ಆತನ ಎದೆಯಲ್ಲಿ ನಟ್ಟ ಭೀತಿಯು ಬೆಳೆದು, ಬೃಹದಾಕಾರ ತಾಳಿ, ಅಶ್ವತ್ಥದ ಮರವೇ ಆಯಿತು ಮರುದಿನ ಆತ ಕಣ್ಣಾರ ಕಂಡ ನೋಟವು, ಆ ಮರದಲ್ಲಿ ಒಂದು ಬ್ರಹ್ಮರಾಕ್ಷಸನನ್ನೇ ತಂದು ನಟ್ಟಿತು

'ಆ ಮರುದಿನ'ವೆಂದರೆ ಗೊಂಡಾರಣ್ಯದ ಪ್ರಜೆಗಳ ಪಾಲಿನ ಸ್ವರ್ಣಯುಗದ ಆರಂಭೋತ್ಸವದ ದಿನ ರಾಜನ ದಬ್ಬಾಳಿಕೆಯಿಂದ ಗೊಂಡಾರಣ್ಯ ಮುಕ್ತಗೊಂಡ ಪುಣ್ಯದಿನ ಈ ವಿಜಯ ದೊರಕಿದುದು ಎರಡು ತಿಂಗಳಿಗೆ ಮುಂಚಿತವೇ ಆದರೂ, ಅದನ್ನು ವಿಧ್ಯುಕ್ತವಾಗಿ ಆಚರಿಸಲು ಗೊತ್ತು ಮಾಡಿದ ದಿನ ಅದು ದಿಲ್ಲಿಯಿಂದ ವಾನುನ ರಾಯನು, ಪ್ರಧಾನಿ ಪಟ್ಟಕ್ಕೆ ಸಮ್ಮತಿ ದೊರತು, ಆ ದೇಶವಾದಿ ಪಂಗಡದ ಪರವಾಗಿ, ಸರಕಾರದ ರಾಜ್ಯಸೂತ್ರಗಳನ್ನು ಹಿಡಿಯುವ ಮೊದಲದಿನ ನಗರದಲ್ಲಿ ಎಲ್ಲೆಲ್ಲೂ ಹಳದಿ ಬಾವುಟಗಳು ಹಾರುತ್ತಿವೆ ಹಾದಿಬೀದಿಗಳು ಶೃಂಗರಿಸಲ್ಪಟ್ಟಿವೆ ಸಾರ್ವಜನಿಕರು ನೆರದುಂಬಿದ ನದಿಯಂತೆ ಬೀದಿಗಳಲ್ಲಿ ಅಲೆದಾಡುತ್ತಿದ್ದಾರೆ ವಿಕ್ರಮನಗರ ರಾಜಧಾನಿಯಿಂದ ಮೇಲೆ ಅಲ್ಲಿನ ಉತ್ಸಾಹ ತುಂಬಿತುಳುಕುತ್ತಿದೆ ಎಲ್ಲರೂ ಉತ್ಸಾಹಿಗಳೇ, ಹಸನ್ಮುಖಿಗಳೇ 'ಎಲ್ಲರೂ' ಎಂದರೆ ಎಲ್ಲರಲ್ಲ ಹಳೆಗಾಲದ, ಪೌರಾಣಿಕ ಮನೋವೃತ್ತಿಯ ಜನಗಳ ಮಾತು

ಬೇರೆ. ತಮ್ಮ ಕಾಲ ಸಂದಿತೆಂದು ಅವರು ಇಂದಿಗೂ ತಿಳಿಯ ಲಾರರು ಅಂಥವರ ಬಗ್ಗೆ ಯಾರೇನೂ ಮಾಡುವಂತಿಲ್ಲ. ಉಳಿದ ಜನಕ್ಕೆಲ್ಲ ಅದು ಆನಂದದ ದಿನ

ಊರ ಪ್ರಮುಖ ಮೈದಾನದಲ್ಲಿ–ವೇದಿಕೆಯನ್ನು, ಮಂಟಪ ವನ್ನು ರಚಿಸಿ ಸಿಂಗರಿಸಿದ್ದಾರೆ. ಅಲ್ಲಿಯೇ ಇಂದು ಸಂಜೆ ಜನನಾಯಕ ವಾಮನರಾಯ ಹೊಸ ರಾಜ್ಯಾಡಳಿತೆಯ ಹೊಣೆಯನ್ನು ಸ್ವೀಕರಿಸಿ– ಭಾವೀ ಸ್ವರ್ಣಯುಗದ ಸಂದೇಶವನ್ನು ಬೀರುವವನು. ಈ ಉತ್ಸವ ದಲ್ಲಿ ಭಾಗಿಯಾಗಲು ಇಚ್ಛೆಯಿಲ್ಲವಾದರೂ, ಆಗಬೇಕಾಗಿ ಬಂದ ಪಾಡು ಪ್ರತಾಪರಾಯನದ್ದು, ಅವನ ಪರಿವಾರದ್ದು ಅಸ್ತಮಿಸಲಿ ರುವ ಪಚಿಪ ಕೃಷ್ಣಮೂರ್ತಿಯ ಉಪದೇಶದಂತೆ - ಅವನು ಬಹಿರಂಗ ವಾಗಿ ರಾಜ್ಯಸೂತ್ರವನ್ನು ಹೊಸ ಪ್ರಧಾನಿಯ ಕೈಗಳಿಗೆ ಸಮರ್ಪಿ ಸಲು ಒಪ್ಪಿದ್ದಾನೆ. ಆ ನಾಟಕ ಈಗಾಗಲೇ ಅರಮನೆಯಲ್ಲಿ ನಡೆದಿದೆ ಯಾದರೂ ಸಾರ್ವಜನಿಕರ ಮನಸ್ಸಂತೋಷಕ್ಕಾಗಿ ಅದು ಇಲ್ಲಿ ತಿರುಗಿ ನಡೆಯಬೇಕಾಗಿದೆ.

ರಾಜಮಾರ್ಗಗಳೆಂಬುವು ಹಳದಿ ಟೋಪಿಗಳ ಸಮುದ್ರವಾಗಿದೆ. ಅದರೆಡೆಯಲ್ಲಿ ಜಯೋದ್ಗಾರ ಮಾಡುತ್ತ ಬರುವ ಸ್ವಯಂಸೇವಕ, ಸೇವಿಕೆಯರೇನು! ಇದರ ನಾಯಕತ್ವದ ಹೊಣೆಯನ್ನು ಕಾಂಚನಮಾಲೆ ಹೊತ್ತು ನಿಂತಿದ್ದಾಳೆ. ಅವಳ ಬೆಂಗಡೆಯಲ್ಲಿ ವಾಮನರಾಯನನ್ನು ಕುಳ್ಳಿರಿಸಿಕೊಂಡ ಮೋಟಾರು ವಾಹನ ಬರುತ್ತಿದೆ. ಆತ ಲೋಕ ಗೆದ್ದವನ ರೀತಿಯಿಂದ ನಿಂತು, ಆಚೀಚೆ ಕತ್ತು ತಿರುಗಿಸಿ, ಜನಗಳ ಕಡೆಗೆ ಮಂದಹಾಸದ ಹೂವುಗಳನ್ನು ಚೆಲ್ಲುತ್ತಿದ್ದಾನೆ. ಜನರು ಅವನನ್ನು ಅಡಿಗಡಿಗೆ ತಡೆದು ಹಾರ, ತುರಾಯಿಗಳಿಂದ ಸತ್ಕರಿಸುತ್ತಿ ದ್ದಾರೆ ಮೆರವಣಿಗೆ ಇರುವೆಯ ಗತಿಯಿಂದ, ಮೈದಾನಿಗೆ ಬಂದು ಸೇರಲು ಕೆಲವು ತಾಸುಗಳೇ ಸಂದಿವೆ. ಅಲ್ಲಿಯೋ! ವಿಜಯ ದಶಮಿಯ ಉತ್ಸವವನ್ನು ಮೀರಿಸುವ ಶೃಂಗಾರ, ಜನಸಂದಣಿ. ಜನರ ನೂಕು ನುಗ್ಗಲು ಹೇಳತೀರದು ಸ್ವಯಂಸೇವಕರೊಡನೆ, ತಿಂಗಳೆರಡು ತಿಂಗಳ ಮೊದಲು ಅವರನ್ನು ಸದೆಬಡಿದ ಪೋಲಿಸರು ಸೇರಿ ಮೈತ್ರಿ ಯಿಂದ ಶಿಸ್ತು ಕಾಪಾಡಲು ಯತ್ನಿಸುತ್ತಿದ್ದಾರೆ

ಮೆರವಣಿಗೆ ವೇದಿಕೆಯ ಬಳಿಗೆ ಬಂದು, ವಾಮನರಾಯ ವೇದಿಕೆಯನ್ನು ಏರಿದ್ದಾಯಿತು ದೊರೆ, ಸಚಿವರುಗಳು ಮುಂಚಿತವಾಗಿ ಬಂದು ಕಾದು ಕುಳಿತಿದ್ದರು ಈತನಕ ಗೊಂಡಾರಣ್ಯದ ಪಾಲಿಗೆ ರಾಷ್ಟ್ರಗೀತೆಯಾಗಿದ್ದ 'ಪಾಲಿಸು ಭುವನೇಶ್ವರಿ' ಎಂಬ ಗೀತದ ಬದಲು 'ಜನಗಣ' ಗೀತೆ ಮೊಳಗಿತು ಪ್ರತಾಪರಾಯನು, ವಾಮನರಾಯರಿಗೆ ಹಸ್ತಲಾಘವ ಸಲ್ಲಿಸಿ ಬಳಿಯಲ್ಲಿ ಕುಳ್ಳಿರಿಸಿಕೊಂಡು, ಸಚಿವ ಬರೆದುಕೊಟ್ಟ ಶುಭಾಶಯದ ಮಾತುಗಳನ್ನು ಓದಲು ಎದ್ದು ನಿಂತ ಅದನ್ನು ಹೇಗೋ ಓದಿ ಮುಗಿಸುತ್ತಲೇ, ವಾಮನರಾಯ ಎದ್ದು ನಿಂತ ಅವನ ಅಮರವಾಣಿಯನ್ನು ಕೇಳುವುದಕ್ಕೆ ಜನ ಕಿವಿ ನಿಮಿರಿಸಿ ನಿಂತಿತ್ತು ಆತ ನಿಲ್ಲುತ್ತಲೇ ಕರತಾಡನವಾಯಿತು 'ವಾಮನರಾಯಕೀ ಜೈ' ಕೂಗಿನ ಪ್ರಳಯ ಉಕ್ಕಿತು

ಈ ಜನ ಸಮೂಹದ ಆಕರ್ಷಣೆಯಿಂದಾಗಿ, ಮುಕ್ಕಣ್ಣ ತನ್ನ ಮಗನೊಡನೆ, ಧನಿಗಳ ಬೆಂಗಡೆಯಲ್ಲಿ ಒಂದು ಮೂಲೆಯಲ್ಲಿ–ನೂಕಿಸಿಕೊಂಡು ನಿಂತು ಸುಗ್ಗಾಗಿದ್ದ ಅವನ ಕಣ್ಣುಗಳು ಈ ನೋಟವನ್ನು ಕಂಡಾಗ 'ಅಯ್ಯೋ, ಎಂಥ ದೇವರು ಹೋಗಿ ಎಂಥ ದೇವರು ಬಂದರಪ್ಪ' ಎಂಬ ನಿಟ್ಟುಸಿರೇ ಸೂಸಿತು

ಅಲ್ಲಿಂದ ಧ್ವನಿವರ್ಧಕದ ಮೂಲಕ ವಾಮನರಾಯನ ಭಾಷಣ ನಾಲ್ದೆಸೆಗಳಲ್ಲಿ ಪಸರಿತು 'ತಾವು ಸ್ವತಂತ್ರರಾಗಲು ತೋರಿದ ಸಾಹಸ, ತಮ್ಮ ವೀರರು ಅದಕ್ಕಾಗಿ ಚೆಲ್ಲಿದ ರಕ್ತ, ಈ ಕ್ರಾಂತಿಯಲ್ಲಿ ಅಹಿಂಸೆಯು ದೊರಕಿಸಿದ ಪ್ರಚಂಡ ವಿಜಯ' ಇವನ್ನೆಲ್ಲ ಬಣ್ಣಿಸಿದ ಮೇಲೆ, ಹೆಚ್ಚಿನ ರಕ್ತಪಾತಕ್ಕೆ ಅವಕಾಶಕೊಡದ ಪ್ರತಾಪರಾಯನ ಸಲುವಾಗಿಯೂ ಎರಡು ಒಳ್ಳೆಯ ಮಾತುಗಳನ್ನು ಹೇಳಿದ್ದಾಯಿತು ಅನಂತರ ಮುಂದಿನ ಸದಾಶಯಗಳನ್ನು ಬಿತ್ತರಿಸತೊಡಗಿದ :

"ಇನ್ನು ಹತ್ತು ವರ್ಷಗಳಲ್ಲಿ ಗೊಂಡಾರಣ್ಯದ ಗುರುತು ಸಹ ಸಿಕ್ಕದಂತೆ ಮಾಡುವ ಹೊಣೆ ನಮ್ಮದು ಆ ಹಿರಿಯ ಜವಾಬುದಾರಿಯನ್ನು ನೀವು ನನ್ನ ಮೇಲೆ ಹೊರಿಸಿದ್ದೀರಿ ಪ್ರಜಾಗಣ ಹೊರಿಸಿದ ಈ ಗುರುತರ ಕಾರ್ಯವನ್ನು ನಾನು ವಿನಯಪೂರ್ವಕವಾಗಿ ಹೊತ್ತಿದ್ದೇನೆ. ಇಂದು ಸ್ವಾತಂತ್ರ್ಯದ ಸ್ವರ್ಣಯುಗವು ಉದಯಿಸಿದೆ ಈ

ನಾಡಿನಲ್ಲಿ - ವಿದ್ಯೆ, ಸುಖ, ಸಂಪತ್ತು ತುಂಬಿ ತುಳುಕಿ ತಿರುಗಿ ಹಾಲು, ಜೇನು ಹರಿಯುವ ನಾಡಾಗಲಿ. ಪ್ರತಿಯೊಬ್ಬ ಪ್ರಜೆಯ ಮನಸ್ಸಿನಲ್ಲಿ- ತಾನೇ ನಾಡಿನ ಯಜಮಾನ - ಎಂಬ ಹೆಮ್ಮೆ ಮೂಡಲಿ, ಪ್ರಜಾಸತ್ತೆ ನಿಜವಾಗಲಿ

"ಇನ್ನು ಬರಿಯ ಹತ್ತು ವರ್ಷಗಳಲ್ಲಿ—ಈ ನಾಡಿನಲ್ಲಿ ಶಾಲೆ ಯಿಲ್ಲದ ಹಳ್ಳಿ ಇರದು ಸಂಚಾರ ಸೌಕರ್ಯವಿಲ್ಲದ ಮೂಲೆ ಇರದು ವಾಸಕ್ಕೆ ಗುಡಿಸಲಿರದ ತಲೆ ಇರದು, ಹೊತ್ತು ಹೊತ್ತಿಗೆ ಊಟ ವಿರದ ಜನ ಇರದು—ದೈನಂದಿನ ರಾಜಕೀಯದಲ್ಲಿ ಭಾಗವಹಿಸಲಾರದ ಪ್ರಜೆಯಿರನು-ಎಂದು ಮಾಡುವ ಅಖಿಲ ಭಾರತದಲ್ಲಿಯೇ ಗೊಂಡಾ ರಣ್ಯ ಆದರ್ಶ ಪ್ರಾಂತವೆನಿಸಬೇಕು ಈ ಹೊಣೆ ನಮ್ಮದು, ನಿಮ್ಮದು ಬಂಧುಗಳೇ, ನಮ್ಮಾ ಆಸೆ ಕೈಗೂಡಲಿ, ಭಾರತಮಾತೆಯು ನಮ್ಮೆಲ್ಲ ರನ್ನು "

ಅಷ್ಟಕ್ಕೆ ಪ್ರಚಂಡ ಕರತಾಡನವಾಯಿತು ಆ ಸದ್ದಿನ ಪ್ರವಾಹವು ಉಕ್ಕಿ ಬರುವಾಗಲೇ ಒಂದೆರಡು ಗುಂಡಿನ, ಧ್ವನಿಗಳ, ಚೀತ್ಕಾರ, ಕೇಳಿಸಿ, ಕೇಳಿಸದಂತಾದುವು ಮೊದಲಿನ ಗುಂಡು ಎಲ್ಲಿಂದಲೋ ಬಂದು ವಾಮನರಾಯನ ಮೈ ಸವರಿ ಸಾಗಿತು ಆತ ಎಡವಿ ಬೀಳು ತ್ತಿರುವಾಗಲೇ ದೊರೆ ಆವನನ್ನು ಹಿಡಿಯಲು ಹೋದ ಎರಡನೆಯ ಗುಂಡೊಂದು ಪ್ರತಾಪರಾಯನ ಕಿವಿಯನ್ನು ಕತ್ತರಿಸಿತು ಅಷ್ಟಕ್ಕೆ ಸಮನಾಗಿ, ವಿದ್ಯುತ್ತಿನ ಸರಿಗೆಗಳೂ ಕಡಿದು ಆ ಆವರಣವೇ ಕತ್ತಲಲ್ಲಿ ಮುಳುಗಿತು 'ಯಾರು?' 'ಏನು?' 'ಏಕೆ?' ಎಂಬ ಗದ್ದಲ ತೊಡಗಿತು. ಪೋಲೀಸರು, ಸ್ವಯಂಸೇವಕರುಗಳು ವೇದಿಕೆಯನ್ನು ಸುತ್ತುವರಿದು, ಜನರಿಂದ ಬೇರ್ಪಡಿಸಿದರು. ಅರಸು ಎದ್ದು ನಿಂತು, ಕಿವಿಯನ್ನೊತ್ತಿ ಹಿಡಿದುಕೊಂಡೇ "ಏನಾಗಿಲ್ಲ, ಗಾಬರಿ ಬೇಡ" ಎಂದು ಧೈರ್ಯ ಹೇಳುತ್ತಿದ್ದ. ಬಳಿನಿಂತ ಅಂಗರಕ್ಷಕನೊಡನೆ ಗುಂಡು ಹಾರಿ ಬಂದ ದಿಕ್ಕನ್ನು ತೋರಿಸಿದ. ಅಂತು ರಾತ್ರಿ ಕವಿದು, ಕತ್ತಲು ಹೆಚ್ಚಿ ಜನರು ಗಾಬರಿಗೊಂಡು ಸ್ಥಳ ಬಿಟ್ಟೋಡತೊಡಗಿದರು. ಯಾರಿಗೂ ಏನೆಂದು ತಿಳಿಯದಾಯಿತು

ಏನಾಯಿತೆಂಬ ಸರಿಯಾದ ವಿವರ ತಿಳಿದು ಬಂದುದು ಮರು

ದಿನವೇ ‘ಎರಡೆರಡು ಕಡೆಗಳಿಂದ ಗುಂಡು ಬಂದಿತಂತೆ. ವಾಮನ ರಾಯನ ಸ್ನೇಹಿಗಳು ಅದನ್ನು ಹಾರಿಸಿರಬೇಕು. ಅದರಲ್ಲಿ ಅರಸನ ಕೃಪಾಡವಿದ್ದಿರಲೂ ಬಹುದು’ ಎಂಬುದು ಒಂದು ಊಹೆ. ದೇಶ ವಾದಿಗಳ ಏಳಿಗೆಯನ್ನು ಕಾಣಲಾರದ ಗುಲಾಲಿ ಟೋಪಿಗಳ ಪೀಕ ಲಾಟವೆಂದು ಮತ್ತೊಂದು ಊಹೆ! ಆದರೆ ಆ ದಿನ ವಾಮನರಾಯ ನಿಗೆ ಪೆಟ್ಟು ತಗಲಿರಲಿಲ್ಲ. ಭಯ ತಗುಲಿತ್ತು. ಪ್ರತಾಪರಾಯನ ಕಿವಿಗೆ ಪೆಟ್ಟು ತಗುಲಿದ್ದರೂ ಆತ ಅದನ್ನು ತೋರಿಸಿಕೊಳ್ಳಲಿಲ್ಲ. ಈತ ಗುಂಡಿನ ಧಸಿಗೇ ಕುಸಿದು ಕುಳಿತ, ಕಿರುಚಿದ–ಬರಿಯ ಅಂಗಿಯನ್ನಷ್ಟೆ ಸವರಿಕೊಂಡು ಹೋಯಿತು ಗುಂಡು. ಪುರ ಪ್ರಮುಖರು ಅವನನ್ನು ಅವನ ಭವನದ ತನಕವೂ ನಾಗಿಸಿ ಬಂದರು. ಅರಸು ತನ್ನ ವಾಡೆಗೆ ತೆರಳಿದ. ಬಳಲಿದ ಅರಸಿಗೆ ಉಪಚಾರ ಅವಶ್ಯವಾಗಿತ್ತು. ಆ ಕಲಸಕ್ಕೆ ಅಂಗರಕ್ಷಕ, ಸಚಿವರು ಜತೆಗೆ ಹೋದರು. ಅದೆಲ್ಲ ವಾಮನರಾಯ ನಿಗೆ ತಿಳಿದುದು ಮರುದಿನವೇ. ಮೊದಲ ದಿನ ಬರಿಯ ಆತ್ಮರಕ್ಷ ಣೆಯ ಭಯ, ಭೀತಿಗಳಿಂದ ತುಂಬಿದ್ದ. ಈ ಸುದ್ದಿ ತಿಳಿದ ಮೇಲೆ ದೊರೆಯನ್ನು ಕಂಡು ಬಂದ. ಅಲ್ಲಿಯ ತನಕವೂ ಅವನ ಮನಸ್ಸಿನಲ್ಲಿ ದೊರೆಯನ್ನು ಕುರಿತಾದ ಅನುಮಾನವೇ ತುಂಬಿಕೊಂಡಿತ್ತು. ಅಲ್ಲಿಂದ ಪೋಲೀಸರಿಗೆ ಹೊಂತಕಾರಿಗಳನ್ನು ಹುಡುಕುವ ಕಲಸವಾಯಿತು. ನಗರದಲ್ಲಿದ್ದ ಕಲವರು ಶ್ರಮವಾದಿಗಳನ್ನು ಅನುಮಾನದಿಂದಲೇ ಹಿಡಿದುದೂ ಆಯಿತು.

ಜನಗಳಲ್ಲಿ ಉತ್ಸಾಹಕ್ಕೆ ಪ್ರತಿಯಾದ ಭಯ ತುಂಬಿತು. ಉತ್ಸವಕ್ಕೆ ಹಳ್ಳಿಯಿಂದ ಬಂದ ಜನಗಳಂತು ಗಾಬರಿಯಿಂದ, ಅವಸರ ದಿಂದ ಹೊರಟುಹೋದರು. ‘ಅಂತು ಸ್ವರಾಜ್ಯ ದೊರೆತ ಗಳಿಗೆಯೇ ಚೆನ್ನಿಲ್ಲ’ ಎಂದುಕೊಂಡರು ಹಲವರು.

ದಿನಗಳು ಸರಿದುವು. ಗುಂಡು ಹಾರಿಸಿದ್ದಾರೆಂದು ತಿಳಿಯದೆ ಹೋದರೂ ತಿರುಗಿ ಅಂತಹ ಪ್ರಸಂಗ ನಡೆಯಲಿಲ್ಲ. ಮುಂದೆಂದೂ ವಾಮನರಾಯ ತಕ್ಕ ಉಸ್ತುವಾರಿಯಿಲ್ಲದೆ ಹೊರಬೀಳುತ್ತಿರಲಿಲ್ಲ. ಅವನ ದಿನಗಳು ರಾಜಕೀಯದ ಚದುರಂಗ ಆಡುವುದರಲ್ಲಿಯೇ ಕಳೆಯಿತು.

ಜನರ ನಿಗ್ಗಿನಲ್ಲಿ ನಿಲುಕಿ, ಗಲಭೆ, ಗುಂಡು ಮೊದಲಾದವುಗಳಿಗೆ ಸಾಕ್ಷಿಯಾದ ಮುಕ್ಕಣ್ಣನ ಮನಸ್ಸಿಗೆ–ಇವೆಲ್ಲವೂ ಮುಂದೆ ಬರಲಿರುವ ದುರ್ದಿನಗಳ ಸೂಚನೆಯೆಂಬುದಾಗಿ ಕಾಣಿಸಿದುವು

## ಅಧ್ಯಾಯ ೨

ಸ್ವಾತಂತ್ರ್ಯೋದಯದ ಗಳಿಗೆಯಲ್ಲಿ ಕಾಣಿಸಿದ ಉತ್ಸಾಹ, ಆವೇಶ, ಭರವಸೆಗಳೆಲ್ಲವೂ ಜನತೆಯಲ್ಲಿ ಬಹು ದಿನ ಉಳಿಯುವುದು ಅವಶ್ಯವಾಯಿತು ಸಂಸ್ಥಾನದ ಭವಿಷ್ಯವನ್ನು ರೂಪಿಸುವ ಹೊಣೆ ಪ್ರಧಾನಿಯಾದ ವಾಮನರಾಯ ಮತ್ತು ಅವನ ನಿಕಟವರ್ತಿಗಳ ಪಾಲಿಗೆ ಉಳಿಯಿತು ಅದನ್ನು ಕುರಿತಾದ ಭಯ, ಭೀತಿ, ಅನುಮಾನಗಳು ವಿಚಾರಶಾಲಿಗಳಾದ ಕೆಲವರ ಪಾಲಿಗೆ ಬಂದುವು ಪ್ರಜಾಸಮೂಹಕ್ಕೆ ಮೊದಲಿನ ಅಜ್ಞಾನವೇ ಉಳಿದಿದೆ. ನಿತ್ಯ ಜೀವನದ ಹೋರಾಟವು ಅವರ ಸಮಯ, ಬುದ್ಧಿಗಳನ್ನು ಅಪಹರಿಸುತ್ತಿದ್ದುದರಿಂದ ಸ್ವಾತಂತ್ರ್ಯೋತ್ಸವ ಬರಿಯ ನಾಲ್ಕು ದಿನಗಳ ಹಬ್ಬವಾಗಿತ್ತು ಜನಜೀವನದ ದೃಷ್ಟಿಯಿಂದ ಗೊಂಡಾರಣ್ಯದಲ್ಲಿ ಒಂದು ವರ್ಷದ ಕಾಲದಲ್ಲಿ ನಡೆದು ಹೋದ ಘಟನೆಗಳು ಕೆಲವೇ ಮುಖ್ಯ ವ್ಯಕ್ತಿಗಳನ್ನು ಸುತ್ತುವರಿದು ಸಾಗಿದ್ದರೂ ಅವುಗಳ ಪ್ರಭಾವ ಜನಗಳ ಆಸೆ, ಅನುರಾಗಗಳ ಮೇಲೆ ಉಂಟಾಗದಿರುತ್ತದೆಯೇ ? ಅಂದಿನ ರಾಜಕೀಯ ರಂಗದಲ್ಲಿ ಚಲಿಸತೊಡಗಿದ ವ್ಯಕ್ತಿಗಳು ತೀರ ಸಾಮಾನ್ಯರು, ಅಮುಖ್ಯರೂ ಆಗಿದ್ದರು ಅವರ ಸ್ಥಾನದಿಂದ ಅದು ಹಿರಿದಾಗುತ್ತದೆ. ನದಿಮೂಲ, ಋಷಿಮೂಲಗಳನ್ನು ತಿಳಿಯಲು ಹೋಗಬಾರದೆನ್ನುತ್ತಾರ ಹಾಗೆಯೇ ರಾಜಕೀಯ ಪುಡಾರಿಗಳ ಮೂಲವನ್ನು ತಿಳಿಯಬಾರದೋ ಏನೋ ಆದರೆ–ಮನುಷ್ಯರಾದ ಅವರು ಹುಟ್ಟಿನಿಂದ ಕಟ್ಟಿಕೊಂಡು ಬಂದ ಗುಣಗಳಿಂದಾಗಿ ಅವರ ಸಾರ್ವಜನಿಕ ನಡತೆಗಳಿಗ ವಿಶೇಷ ರೂಪ ಬರುತ್ತದೆ. ಕಾದಂಬರಿಕಾರನಿಗೆ ಇಂತಹ ವ್ಯಕ್ತಿಗಳ ಶೀಲ ಸಾರ್ವಜನಿಕ ವರ್ತನೆಗಳಷ್ಟೇ ಮುಖ್ಯವಾಗುತ್ತದೆ.

ಜನಜೀವನದ ಗತಿಯಲ್ಲಿ ದೃಗ್ಗೋಚರವಾಗುವ ಪ್ರಭಾವಗಳು ಕೆಲವೇ ಒಳಿತಿಗೋ ಕೆಟ್ಟುದಕ್ಕೋ ಜನ ಅವುಗಳನ್ನು ಬೊಟ್ಟಿಟ್ಟು ತೋರಿಸುತ್ತಾರೆ ದೃಗ್ಗೋಚರವಲ್ಲದ ಪ್ರಭಾವಗಳು ಅನೇಕ. ಅವು ಆಳವಾಗಿಯೂ, ವಿಶಾಲವಾಗಿಯೂ ಹರಿದರೂ ಕೂಡ ತಿಳಿವಿಗೆ ಬರುವುದು ಕಠಿಣ ತಿಳಿವಿಗೆ ಬಾರದ ಮಾತ್ರದಿಂದ ಅವು ಕ್ಷುಲ್ಲಕವಲ್ಲ ಆ ದೃಷ್ಟಿಯಿಂದ ಗೊಂಡಾರಣ್ಯದಲ್ಲಿ ಕಳೆದ ಸ್ವಾತಂತ್ರ್ಯದ ಒಂದು ವರ್ಷಕಾಲ ಕ್ಷುಲ್ಲಕವಲ್ಲ ಅದು ಅಧಿಕಾರಿಗಳ, ಪ್ರಮುಖರ ತೊದಲು ನಡಿಗೆಯಲ್ಲ ಅವರಲ್ಲಿ ಶೈಶವದ ಬುದ್ಧಿ ಹೋಗದಿದ್ದರೆ ಜನತೆಯು ಸಹಿಸದು ಅವರೂ ತಮ್ಮ ತಪ್ಪಿನದಾರಿ ತಿದ್ದುವುದಿಲ್ಲ ಕ್ರಾಂತಿ ಅದನ್ನು ಚಿಕಿತ್ಸೆಗೊಳಿಸಲಾರದು ಕ್ರಾಂತಿಯೋ ಬೇನೆಯ ಬಹಿರಂಗ ರೂಪ

* * * *

ವಿಜಯೋತ್ಸವದ ಗುಂಡಿನ ಪ್ರಕರಣದ ಗುಟ್ಟು ಯಾರೊಬ್ಬರಿಗೂ ಸ್ಪಷ್ಟವಾಗಿ ತಿಳಿಯಲಿಲ್ಲ, ಅಪರಾಧಿಗಳು ಬಯಲಿಗೆ ಬರಲಿಲ್ಲ ವಾಮನರಾಯನಿಗೆ ತನ್ನ ಹಗೆಗಳಾರೆಂಬುದು ತಿಳಿಯಲಿಲ್ಲ ಅದು ವ್ಯಕ್ತಿಯೋ, ಮಗಡವೇ ಎಂಬುದೂ ಗೊತ್ತಾಗಲಿಲ್ಲ ಆತ ನಿರಂಕುಶನಾಗಿ, ತನ್ನ ಬೆಂಬಲಿಗರ ದೌರ್ಬಲ್ಯವನ್ನು ಸಂಪತ್ತನ್ನಾಗಿ ಮಾಡಿಕೊಂಡು, ಇಷ್ಟ ಬಂದಂತೆ ನಡೆದರೂ ಅವನ ಮನಸ್ಸಿನಲ್ಲಿ ಭಯವಿತ್ತು. "ಏನೇ ಆಗಲಿ ಆ ದಿನದ ಗುಂಡಿನೇಟಿನ ಪ್ರಕರಣದ ಹಿಂದೆ ಯಾರಿದ್ದಾರೆ? ಹೇಗಾದರೂ ಶೋಧಿಸಬೇಕು" ಎಂದು ಡಿ ಐ ಜಿ ದೊರೆಸ್ವಾಮಿಗೆ ಆಜ್ಞೆ ವಿಧಿಸಿದ ಮಾಜಿ ಸಚಿವ ಕೃಷ್ಣಮೂರ್ತಿಗೂ ಈ ವಿಷಯದಲ್ಲಿ ತಿಳಿವು ದೊರೆಯಲಿಲ್ಲ. ಅದರಲ್ಲಿ ರಾಜನ ಕೈವಾಡವಿರಲಿಲ್ಲ ಎಂಬ ಒಂದೇ ಸಮಾಧಾನ ಅವನಿಗೆ. ಆದರೆ ಮುಂದಿನ ಭವಿಷ್ಯ ಚೆನ್ನಾಗಿಲ್ಲ ಎಂದೆನಿಸಿತು ತನಗೂ ಅದರ ಕಷ್ಟ, ನಿಷ್ಠುರಗಳು ಬೇಡ ಅನಿಸಿತು

ದೊರೆಸ್ವಾಮಿಯ ಅನುಯಾಯಿಗಳು ಮೂರು ತಿಂಗಳ ವ್ಯರ್ಥ ಶೋಧನೆ ನಡೆಯಿಸಿದರು. ಅನುಮಾನದ ಮೇಲೆ ಹಲವರನ್ನು ಹಿಡಿದು ಹಿಂಸಿಸಿದರು. ಪೆಟ್ಟಿನ ಬಲದಿಂದ ಹತ್ತು ಮಂದಿಯ ಹೆಸರನ್ನು ಹೊರಗೆಡವಿದರು. ಆದರೆ ಅದೆಲ್ಲ ಪೆಟ್ಟಿನ ಪರಿಣಾಮ ಎಂದು ತೀದು

ನಿರಾಶರಾಗಬೇಕಾಯಿತು ಮುಂದೆ ಅಂಥ ಪ್ರಕರಣಗಳು ನಡೆಯು ಲಿಲ್ಲ ಪ್ರಧಾನಿ ಸಂಚಾರಕ್ಕೆ ಹೋದ ಊರುಗಳಲ್ಲಿ ಯಾವ ಗದ್ದಲವೂ ಆಗಲಿಲ್ಲ ಇಷ್ಟಿದ್ದರೂ ತಮ್ಮಿಂದ ಕಾರ್ಯವಾಗಲಿಲ್ಲ ಎಂಬ ಅಪ ಮಾನಕ್ಕೆ ಬೆದರಿ-ವಾಮನರಾಯ, ರಾಜಕೀಯದಲ್ಲಿ ತನ್ನನ್ನು ಬಹಿ ರಂಗವಾಗಿ ಖಂಡಿಸುತ್ತಿದ್ದ "ಜ್ವಾಲೆ" ಎಂಬ ಪತ್ರಿಕೆಯ ಸಂಪಾ ದಕನನ್ನು ಆರೋಪಕ್ಕೆ ಗುರಿಪಡಿಸಿದ ಸಾಕ್ಷಿನಿರ್ಮಿಸಿದರು ಸಂಪಾದಕ ತಿರುಮೂರ್ತಿಯನ್ನು ಕೆಲವು ದಿನಗಳ ಕಾಲ ಜೈಲಿಗೂ ತುರುಕಿದರು. ಅದರಿಂದ ತಮ್ಮ ಗೌರವ ಉಳಿಯುತ್ತದೆ ಎಂದು ತಿಳಿದುಕೊಂಡ ಆದರೆ ತಿರುಮೂರ್ತಿಗೆ ಮಿತ್ರರು ಬಹಳ ಅವನು ಹಿಂಸಾವಾದಿಯಂತು ಅಲ್ಲವೇ ಅಲ್ಲ ಅನೇಕರಲ್ಲಿ ಅವನಿಗೆ ಮಮತೆಯೂ ಇತ್ತು ಅವನು ನಿರಪರಾಧಿಯೆಂದು ತಿಳಿದೂ ಇತ್ತು ಅವನ ಬರವಣಿಗೆಗಳು ಎಷ್ಟೇ ಕಠಿಣವಾಗಿದ್ದರೂ ಅವನು ಹಿಂಸವಾದಿಯೆಂದು ಯಾರೊಬ್ಬರೂ ನಂಬಲಾರರು ಅದರಿಂದ ಹಲವಾರು ಪ್ರಮುಖರು-ಈ ಆರೋಪ ಹಿಂದೆಗೆಯಬೇಕೆಂದು ವಾಮನರಾಯನನ್ನೇ ಬಲವಂತಮಾಡಿದರು ವ್ಯಕ್ತಿದ್ವೇಷದಿಂದ ಅವನು ಹಾಗೆ ಮಾಡಲಿಲ್ಲ ಆದರೆ ಮುಂದೆ ತನಿಖೆಯ ವೇಳೆ-ಸಾಕ್ಷಿಗಳೆಲ್ಲ ತಿರುಗು ಮುರುಗಾಗಿ, ಪೋಲೀಸು ಇಲಾಖೆಯನ್ನು ವಿಧಾನಗಳನ್ನು ಖಂಡಿಸುವಂಥ ತೀರ್ಪಿನೊಡನೆ ಮುಕ್ತಾಯಗೊಂಡಿತು! ತಿರುಮೂರ್ತಿಯ ಪ್ರತಿಷ್ಠೆಯು ಜನಗಳಲ್ಲಿ ಹೆಚ್ಚಿಕೊಂಡಿತು!

ಈ ಗೊಂದಲ ಮುಗಿದ ಕೆಲವೇ ದಿನಗಳಲ್ಲಿ-ವಿಕ್ರಮನಗರದ ಹತ್ತಿಯ ಗಿರಣಿವೊಂದರಲ್ಲಿ-ಕೆಲಸಗಾರರ ಸಂಪು ತೊಡಗಿತು ಒಂದೆರಡು ವಾರಗಳಲ್ಲಿ ಕೆಲಸಗಾರರ ರೌದ್ರಾವೇಶ ಮಿತಿಮೀರಿ, ಒಂದು ದಿನ ಗಿರಣಿಯನ್ನೆ ಸುಟ್ಟರು ಅದರಿಂದಾಗಿ ಹಲವಾರು, ಶ್ರಮಗಾರ ರನ್ನು ಅನುಮಾನದ ಮೇಲೆ ಬಂಧನದಲ್ಲಿರಿಸಿದರು ಈ ಮಜೂರರನ್ನು ಹಿಂದಿನಿಂದ ಕುಣಿಸುತ್ತಿರುವವರು ಯಾರು ಎಂಬುದೂ ತಿಳಿಯ ದಾಯಿತು

ಅಲ್ಲಿಂದ ಮುಂದೆ ಒಂದೇಸಮನೆ-ರಾಜ್ಯದ ಮೂಲೆಮೂಲೆಗಳಲ್ಲಿ ಹಲವು ಶ್ರೀಮಂತರ, ಭೂಮಿವಂತರ ಆಸ್ತಿ, ಮನೆಗಳು ಸುಲಿಗೆಯಾಗ

ತೊಡಗಿದುವು ಅನೇಕ ಕಡೆ ದರೋಡೆಗಾರರು, ಭಯ ಹುಟ್ಟಿಸಿ, ತಡೆಯಲು ಬಂದವರನ್ನೇ ಕೊಂದು ಅಕೃತ್ಯಗಳನ್ನು ನಡೆಯಿಸಿದ ಸುದ್ದಿಗಳೂ ಬಂದು ಸೇರಿದುವು ವಾಮನರಾಯನಿಗೂ, ಪೋಲೀಸು ಇಲಾಖೆಗೂ ಹೊಸ ಉದ್ಯೋಗವೇ ನಿರ್ಮಾಣವಾಯಿತು ಇದು ಆ ಪ್ರಾಂತದ ಇಲ್ಲವೆ ನೆರೆಪ್ರಾಂತದ ವ್ಯವಸಾಯಿ ದರೋಡೆಕಾರರ ಕೆಲಸವೆನ್ನುವಂತಿರಲಿಲ್ಲ ಇಂಥ ವಿದ್ಯಮಾನಗಳಾಗದ ಗೊಂಡಾರಣ್ಯದ ನಾಲ್ಕಾರು ದೂರದೂರದ ಮೂಲೆಗಳಲ್ಲಿ–ಈಗ ಇಂಥವು ನಡೆಯ ತೊಡಗಲು, ಇದರ ಹಿಂದೆ ಬಲವಾದೊಂದು ಸಂಗಟನಿರ ಬೇಕೆಂದೂ, ಅದು ಗುಲಾಲಿ ಟೋಪಿಯ ಶ್ರಮವಾದಿಗಳ ಗುಂಪೆಂದೂ ಅವರು ತರ್ಕಿಸಿದರು ಇದನ್ನು ಕುರಿತು ವಾಮನರಾಯ ವಿಚಾರಕ್ಕೊಳಗಾದ ೧೯೪೨ರ ವಿಧ್ವಂಸಕ ಚಟುವಟಿಕೆಯ ಕಾಲದಲ್ಲಿ ಅವನೂ ಇಂಥ 'ಅಹಿಂಸಾತ್ಮಕ' ಚಟುವಟಿಕೆ ನಡೆಯಿಸಿದವ ಆಗ ಅವನ ಸಂಗಡಿಗರಾಗಿದ್ದು, ಮುಂದೆ ಅವನ ಯಜಮಾನಿಕೆಯನ್ನು ತಿರಸ್ಕರಿಸಿದ ಇಬ್ಬರು ಮುಖಂಡರ ಮೇಲೆ ಅವನ ಅನುಮಾನ ಹರಿಯಬೇಕಾಯಿತು. ಅವರನ್ನೇ ಹುಡುಕಿ ಹಿಡಿಯುವಂತೆ ಡಿ ಐ ಜಿ ಸಾಹೇಬನಿಗೆ ಸಲಹೆಯನ್ನು ನೀಡಿದ ಆದರೆ ಅವನ ಪಡೆಯವರಿಗೆ ಈ ಇಬ್ಬರ ಸುಳಿವು ಸಹ ತಿಳಿಯುವುದು ಅಶಕ್ಯವಾಯಿತು

ಒಂದು ಕಡೆಯಿಂದ ಈ ಎಲ್ಲ ದರೋಡೆಗಳಾದ ಊರುಗಳಲ್ಲಿ ಪೋಲೀಸರು ಹೋಗಿ ಸುದ್ದಿ ಸಂಗ್ರಹಿಸಿ, ಇದಕ್ಕೆ ಗುಲಾಲಿ ಟೋಪಿಯವರೇ ಕಾರಣರೆಂಬ ಊಹೆಯಿಂದ, ಅವರಿಗೆ ಆಶ್ರಯ ಕೊಟ್ಟವರನ್ನು ಹಿಂಸಿಸತೊಡಗಿದರು ಪ್ರತಿಯಾಗಿ ಅವರು–ಪೋಲೀಸು ಠಾಣೆಗಳನ್ನು ಸುಲಿದರು, ಅಂಚೆ ಕಚೇರಿಗಳನ್ನು ಸುಟ್ಟರು. ಹಳದಿ ಟೋಪಿಯವರನ್ನು, ಶ್ರೀಮಂತರನ್ನು ಹಿಂಸಿಸತೊಡಗಿ ತಾವು ಯಾವ ಸಂಗಡಕ್ಕೆ ಸೇರಿದವರೆಂದು ಊಹಿಸಲು ಸುಲಭಮಾಡಿಕೊಟ್ಟರು ನಾಡಿನ ಕೆಲವು ಭಾಗಗಳಲ್ಲಿ ಅನಾಯಕತೆ ಹೆಚ್ಚಲಾರಂಭಿಸಿತು. ಜನ ಭಯಗೊಂಡರು. ಪೋಲೀಸು ಪಡೆಯು ಬಲಗೊಂಡಷ್ಟು, ಅವರ ಪ್ರತಿಕ್ರಿಯೆಯೂ ಹೆಚ್ಚಿತು ಈ ನಡುವೆ ಆಸ್ತಿ ಮನೆಯುಳ್ಳವರು ತಳಮಳಕ್ಕೀಡಾದರು

ಇಂಥ ಪರಿಸ್ಥಿತಿಯಿಂದಾಗಿ, ತಮ್ಮ ಮುದಿ ಸೇವಕ ಮುಕ್ಕಣ್ಣನ ಬೋಧನೆಯನ್ನು ನೆನೆದು, ಪಟ್ಟೇದಾರ ಸೋದರರು, ವಿಕ್ರಮನಗರ ಬಿಟ್ಟು, ಅಜ್ಞಾತ ಗ್ರಾಮವಾಸಕ್ಕೆ ಹೊರಟರು ವಿಕ್ರಮನಗರದಲ್ಲೇ ಒಂದು ಲೂಟಿಯ ಪ್ರಕರಣವಾದುದರಿಂದ–ಊರಲ್ಲಿ ತಮ್ಮ ಒಕ್ಕಲು ಮಕ್ಕಳ ವಿಶ್ವಾಸವನ್ನು ಅವರು ಹಂಬಲಿಸುವಂತಾಯಿತು ಅದರಿಂದ ಮುಕ್ಕಣ್ಣನಿಗೆ ಹೆಚ್ಚಿನ ಸಮಾಧಾನವುಂಟಾಯಿತು ಆದರೆ ಊರೂರುಗಳಲ್ಲಿ ನಡೆಯುತ್ತಿರುವ ಕೊಲೆ, ಸುಲಿಗೆಗಳ ಸುದ್ದಿ ಅವನ ಕಿವಿಯನ್ನು ಸೇರುತ್ತಿವೆ ಹೀಗೆ ಅವು ನಡೆಯುತ್ತ ಹೋದರೆ, ಪೋಲೀಸರಿಂದ ಅವುಗಳ ಪತ್ತೆ ಅಸಾಧ್ಯವಾಗುತ್ತ ಹೋದರೆ, ಕಿಗ್ಗಳ್ಳಿಯಲ್ಲೂ ಧನಿಗಳ ಮನೆ ಸುರಕ್ಷಿತವಾಗಿ ಉಳಿಯಲು ಶಕ್ಯವೇ ಎಂಬ ಭಯವೂ ಉಂಟಾಯಿತು ಅದಕ್ಕೇನೆ–ಅವನು ದೊಂಡಾಲರಿಗೆ ಪೂರ್ವ ಸೂಚನೆಯನ್ನು ಕೊಟ್ಟಿರಿಸಬೇಕಾಯಿತು 'ಏನಾದರೂ ಆಪತ್ತಿನ ಸೂಚನೆ ಕಂಡರೆ, ಮನೆಯ ಮುಂದಿನ ಗುಡ್ಡದಲ್ಲಿ, ಬೆಂಕಿ ಉರಿಸಿ ಸೂಚನೆ ಕೊಡುತ್ತೇವೆ ಆಗ ದೊಂಡಾಲರು ಧಾವಿಸಿ ಬರಬೇಕು' ಎಂದು ತಿಳಿಸಿದ ಎದುರಿನ ಗುಡ್ಡದಲ್ಲಿ ಅಲ್ಲಲ್ಲಿ ಸಲಿಕೆ, ಹುಲ್ಲುಗಳ ರಾಶಿಯನ್ನು ನಾಲ್ಕೆಂಟು ಕಡೆಗಳಲ್ಲಿ ಸದಾ ಸಿದ್ಧವಾಗಿರಿಸಿದ ಅತ್ತ ನಗರದಲ್ಲಿರುವ ಧನಿಗಳ ಮನೆಯ ಕಾವಲಿಗೆ ತನ್ನ ಮಗನನ್ನೂ ಇನ್ನೊಬ್ಬನನ್ನೂ ಸೇರಿಸಿ ಕಳುಹಿಸಿದ ಇಷ್ಟೆಲ್ಲ ಏರ್ಪಾಟುಮಾಡಿ 'ದೇವರೇ, ನಾವು ಮಾಡುವುದನ್ನು ಮಾಡುತ್ತೇವೆ ಧನಿಗಳನ್ನು ಕಾಯುವ ಭಾರ ನಿನ್ನದು' ಎಂದು ಹೇಳುತ್ತ, ನಿತ್ಯವೂ ಧನಿಯ ಮನೆಯ ಕಾವಲು ಹಾಕತೊಡಗಿದ

ರಾಜ್ಯದಲ್ಲಿ ಕಾಣಿಸಿದ ಒಂದು ಭಯ ಮೇಲಿನಂತಿದ್ದರೆ, ಇನ್ನು ಇತರ ಭಯ ಅಸಂತುಷ್ಟಿಗಳೂ ಕಾಣಿಸಿಕೊಂಡುವು ಅಧಿಕಾರವಿಲ್ಲದಾಗಿ ಒಕ್ಕೂಟವೆಂಬಂತೆ ಕಾಣಿಸಿಬಂದ ದೇಶವಾದಿಗಳ ಪಂಗಡದಲ್ಲಿ, ಈಗೀಗ ಅಸಮಾಧಾನ ಅಶಾಂತಿಗಳು ಹುಟ್ಟಿಕೊಂಡುದರಲ್ಲಿ ಆಶ್ಚರ್ಯವೇನಿಲ್ಲ. ವಾಮನರಾಯ ಏನು ಹೆಚ್ಚು ? ತಾವೇನು ಕಡಿಮೆ ? ಎಂದು ಅವನ ಸಹಚರರು ತಿಳಿಯತೊಡಗಿದರು. ಮಂತ್ರಿ ಮಂಡಳಕ್ಕೆ ತಮ್ಮನ್ನು ಸೇರಿಸಿಕೊಳ್ಳಲಿಲ್ಲ ಎಂಬ ಉದ್ವಿಗ್ನತೆ ಹಲವು ಮಿತ್ರರಲ್ಲಿ ಉದಯಿಸಿತು. 'ಸಾಹುಕಾರ ಶೀನನನ್ನು ಮಂತ್ರಿಯಾಗಿ

ಮಾಡುವುದೇ ? ಯಾಕೆ ? ಜೈಲಿಗೆ ಹೋಗಿದ್ದಾನೆಯೇ ? ಚಳವಳದ ಫಂಡಿಗೆ ಹಣತೆತ್ತಿದ್ದಾನೆಂದೇ ? ನಾವು ತೆತ್ತಿಲ್ಲವೇ ? ಅವನಿಗಿಂತ ಕಡಿಮೆಯಿಲ್ಲದೆ ಹಣ ತೆತ್ತಿದ್ದೇವೆ ? ಕೇತಕರನನ್ನು ಮಂತ್ರಿಯಾಗಿ ಮಾಡಿದ್ದೇಕೆ ? ಇದು ಏಕನಾಮಿಗಳ ಮೇಲೆ ಅವನಿಗಿರುವ ಪಕ್ಷ ಪಾತವಲ್ಲವೇ ? ಹೀಗೆ ಬೆಳೆದು ಬಂದರೆ ಇವರೊಂದು ದಿನ ದ್ವಿನಾಮಿ ಗಳನ್ನೂ ಪಿನಾಮಿಗಳನ್ನೂ ಮೂಲೆಗೊತ್ತುತ್ತಾರೆ'-ಎಂದರು ಕೆಲ ವರು. ನಿಜಕ್ಕೂ ಹಲವಾರು ವರ್ಷಗಳಿಂದಲೂ, ಗೊಂಡಾರಣ್ಯದ ರಾಜಕೀಯ ಬೆಂಗಾಡಿನಲ್ಲಿ-ಗಾಂಧೀಜೀಯ ಅಸಹಕಾರಯೋಗ ಬಿತ್ತಲು ಪ್ರಯತ್ನಿಸಿದಾಗ, ಮುಂದೆ ಹೆಸರಿಗಾದರೂ ಅದನ್ನು ಅಲ್ಲಿ ಉಳಿಸಿಕೊಳ್ಳಲು ಒದ್ದಾಡಿದಾತ-ವಾಮನರಾಯನಲ್ಲ ಅವನು ೧೯೫೨ರಲ್ಲಿ ಕಾಣಿಸಿದ ಉಲ್ಕೆಯೋ, ಧೂಮಕೇತುವೋ ಮೊದಲಿ ನಿಂದಲೂ ನಾಮಪೂರ್ತಿಗಾದರೂ ದುಡಿದು, ಇದ್ದುದನ್ನು ತ್ಯಾಗ ದಿಂದ ಕಳೆದುಕೊಂಡು ಬಂದವನು ವರ್ಚಸ್ವಿಯಾದ ಅರುಣಾಚಲಯ್ಯ ಬಹುಕಾಲ ಅವನೆಂದರೇ ಗೊಂಡಾರಣ್ಯದ ದೇಶವಾದಿ ಸಂಗಡ ವಾಗಿತ್ತು ಆಗ ರಾಜಕೀಯ ಚಳವಳ ನಷ್ಟದ ವ್ಯಾಪಾರವಾಗಿತ್ತು. ಅವನನ್ನು ಕುಯುಕ್ತಿ, ಸಂಚುಗಳಿಂದ, ಭೇದೋಪಾಯದಿಂದ ಉರುಳಿಸಿ, ಅಧ್ಯಕ್ಷ ಪದವಿಯನ್ನು ಕಸಿದುಕೊಂಡ ಚಾಣಾಕ್ಷ-ವಾಮನ ರಾಯ ಆತ ಪಕ್ಷವನ್ನು ಬಿಟ್ಟಿರಲಿಲ್ಲ ಅವನನ್ನು ವಾಮನರಾಯ ತನ್ನ ಸಂಪುಟಕ್ಕೆ ಕರೆಯಿಸಿಕೊಳ್ಳಲಿಲ್ಲವೆಂದು, ಹಲವು ದೇಶವಾದಿ ಗಳಿಗೆ ಅನಿಸಿತ್ತು ಆಗಲೇ ಅವರು ' ಈ ಶಕುನಿ ಸಾಮಾನ್ಯನಲ್ಲ ' ಎಂದುಕೊಂಡವು.

"ಕಾಂಚನಮಾಲೆಯ ಮೇಲೆ ಪ್ರೀತಿಯಿದ್ದರೆ, ಹೋಗಿ ಮದುವೆ ಯಾಗಲಿ ಇಷ್ಟೆಲ್ಲ ಗಂಡಸರು, ಬಲ್ಲವರು, ವರ್ಚಸ್ವಿಗಳು, ತ್ಯಾಗಿಗಳು ಇರುತ್ತ - ಅವಳಿಗೆ ಏತಕ್ಕೆ ಮಂತ್ರಿಪದವನ್ನು ಕೊಟ್ಟ ?" ಎಂದವರು ಹಲವರು "ಹಾಗೆ ಸ್ತ್ರೀಯಳೊಬ್ಬಳು ಬೇಕೇ ಎಂದಾದರೆ, ಡಾ ನಾಗಲಾಂಬಾ ಇಲ್ಲವೇ ? ಅವಳೇನು ಕಡಿಮೆ ತ್ಯಾಗಮಾಡಿದವಳೇ ?" ಎಂದರು. ಈ ರೀತಿಯಲ್ಲಿ ಹಳದಿ ಕೂಟದ ಬೆಂಬಲಿಗರು ಅಸಮಾಧಾನ ತಾಳಿದರೂ, ತಮ್ಮ ಅಂತರಂಗದ ಗೊಣಗನ್ನು ವಾಮನರಾಯನ

ಮುಖಕ್ಕೆ ಹೇಳುವ ಸಾಹಸವುಳ್ಳವರಾಗಿರಲಿಲ್ಲ. ತಂತವನ್ನು ನುಡಿಕೆಗಳ ತೂತನ್ನು ಮುಚ್ಚಿರಿಸಿ, 'ವಾಮನರಾಯನ ಮಡಿಕೆ ತೂತಾಗಿದೆ' ಎನ್ನುವುದಕ್ಕೆ ಅಂಜಿಕೆಯೂ ಇತ್ತು. ಆತನ ಶಕ್ತಿ, ಯುಕ್ತಿ, ಪ್ರಭಾವಗಳು ತಮಗಿಲ್ಲವೆಂಬುದೂ ತಿಳಿದಿತ್ತು. ವಾಮನರಾಯ ಈ ಗಾಂಧಿಯುಗದಲ್ಲಿ ಜನಿಸಿದ ಒಬ್ಬ ಮಹಾ ಧೂರ್ತ - ಎಂಬ ಅರಿವು ಅವನ ನಿಕಟಪರಿಚಯವುಳ್ಳವರೆಲ್ಲರಿಗೂ ಇದ್ದಿತು. ಅವನು ಕೆಲವರನ್ನು ಮಾತಿನಿಂದ ಕೊಳ್ಳಬಲ್ಲ, ಕೆಲವರನ್ನು ಜೇಬಿಗೆ ಕೊಳ್ಳಬಲ್ಲ, ಕೆಲವರನ್ನು ಭಯದಿಂದ ಕೊಳ್ಳಬಲ್ಲ. ಕೊಳ್ಳಲಾರದವರನ್ನು ಅಥರ್ವಣದಿಂದ ಮುಣುಗಿಸಲೂ ಬಲ್ಲ. ಅಂತು ಆತ ಸಾಮಾನ್ಯ ವ್ಯಕ್ತಿಯಲ್ಲ. ಹಿಂದೆ ಬಹಿರಂಗ ಸಭೆಯೊಂದರಲ್ಲಿ, ಬಹುಮತವಿಲ್ಲದಿರುವಾಗ, ಅರುಣಾಚಲಯ್ಯ ಅವನ ಅಪಮಾರ್ಗಗಳನ್ನು ಬಹಿರಂಗವಾಗಿ ಖಂಡಿಸಿದಾಗ, ಅವನನ್ನೇ ಅಪಹಾಸಕ್ಕೆ ಗುರಿಪಡಿಸಿ, ಅವನ ಸತ್ಯವನ್ನು ಸಾವಿರ ಸುಳ್ಳಿಂದ ಸೋಲಿಸಿ. ಗೆದ್ದ ವೀರ ಅವನು. ಮುಂದೆ ಅವನನ್ನು ದಾರಿಯಿಂದಲೇ ತಳ್ಳಿ, ತಾನೇ ಅಧ್ಯಕ್ಷನಾಗುವ ಬೆಂಬಲ ಗಳಿಸಿದ ಚಾಣಾಕ್ಷ.

ಹಾಗಿದ್ದಲ್ಲಿ 'ವಾಮನರಾಯನಿಗೇ ಒಮ್ಮಿಂದೊಮ್ಮೆಗೆ ರಾಜ್ಯಸೂತ್ರವನ್ನು ವಹಿಸುವ ಯೋಗ್ಯತೆಯಿದೆಯೇ, ವಿದ್ಯಾಬುದ್ಧಿಗಳಿವೆಯೇ ?' ಎಂದು ಕೇಳಿದಲ್ಲಿ, ಅವನ ಸಮೀಪಸ್ಥರು 'ಕಾಂಚನಮಾಲೆಗೆ ಇದ್ದರೆ ಸಾಲದೇ ?' ಎನ್ನುವುದುಂಟು. ಮಾಜಿ ಸಚಿವ ಕೃಷ್ಣಮೂರ್ತಿಯ ದೈನಂದಿನ ಉಪದೇಶದಿಂದಲೇ ವಾಮನರಾಯನ ಆಡಳಿತೆ ಸಾಗುತ್ತಿದೆ - ಇನ್ನೂ, ಎಂಬುದು ಹಲವರಿಗೆ ತಿಳಿದ ಮಾತು. ಅದೇ ವಿಚಾರವನ್ನು ಕುರಿತು ತಿರುಮೂರ್ತಿ ತನ್ನ 'ಜ್ವಾಲೆ' ಪತ್ರಿಕೆಯಲ್ಲಿ "ಹಳೆಯ ನರಿಗಳ ಕೂಗನ್ನು ತನ್ನ ಹೊಸಕಂಠದಿಂದ ಹೊರಡಿಸುತ್ತಿರುವ ತೋಳನೇ ನಮ್ಮ ಪ್ರಧಾನಿ" ಎಂದು ಗುಟ್ಟನ್ನು ರಟ್ಟು ಮಾಡಿದ್ದುಂಟು. ಅಂಥ ಮಾತುಗಳನ್ನು ಬರೆದುದಕ್ಕೆ, ತಿರುಮೂರ್ತಿಗೆ ನಾಲ್ಕುದಿನಗಳ ಸೆರೆಮನೆಯ ಯೋಗ ಒಂದಿತು, ಅವನ ಗಾತ್ರವೂ ಹೆಚ್ಚಿತು.

ವಾಮನರಾಯನು ತನ್ನ ಪರಿಚಿತರಿಗೆ ಸಾಮಾನ್ಯ ಗಾತ್ರದ ವ್ಯಕ್ತಿಯೆನಿಸಿರಬಹುದಾದರೂ, ಅವರ ತಿಳಿವಿಗೆ ಎಟುಕುವಂಥ ಆಳಲ್ಲ

ಎಂಬುದೂ ತಿಳಿದಿದೆ. ಅವನು ಹುಟ್ಟಿ ಬೆಳೆದುದು ನೆರೆನಾಡಿನಲ್ಲಿ ಅಲ್ಲಿಂದ ೧೯೪೨ರಲ್ಲಿ ಗೊಂಡಾರಣ್ಯಕ್ಕೆ ಬಂದು ಕೀರ್ತಿಗಳಿಸಿದ ಅವನ ಪೂರ್ವೇತಿಹಾಸ ತಿಳಿದವರು ಕಡಿಮೆ, ಇಲ್ಲವೆಂದರೂ ಸರಿಯೆ ಅಂತು ಜನಗಳ ಪಾಲಿಗೆ ಅವನು–ಸ್ವಾತಂತ್ರ್ಯವನ್ನು ಕಸಿದು, ಕೊಡಿಸಿದ ಮೂರ್ತಿಯಾದ ಅದನ್ನು ನಿಜಕ್ಕೂ ಗದ್ದೆ ಶಕ್ತಿ ದೊರೆಯ ಪುಕ್ಕಲು ತನ, ಜನರ ಕೂಗು, ರಾಜ್ಯದ ಹೊರಗಿನಿಂದ ಬಂದು ಎರಗಬಹು ದಾದ ಶಕ್ತಿಗಳ ಭಯ ಭೀತಿಗಳು ಆದರೆ ಕಾಲಕ್ಕೆ ಸಮನಾಗಿ ಒದಗಿ, ಉಳಿದವರನ್ನು ಮೀರಿಸಿ ಕೂಗಿ ಈತ ಕೀರ್ತಿಗಳಿಸಿದ

ಆತ ಬಂದ ಪ್ರಾರಂಭದಲ್ಲಿ ಊರ ಜನರಿಗೆ ಇವನ ತಿಳಿವು ಸಾಲದು, ನಂಬಿಕೆಯೂ ಇದ್ದಿರಲಿಲ್ಲ ಇವನು ಬಂದುದೂ ಅಂಥೊಂದು ಸಂಧಿಕಾಲದಲ್ಲಿ ಅದಕ್ಕಿಂತ ಮೊದಲೇ ಅರುಣಾ ಚಲಯ್ಯ ಗಾಂಧಿಯ ಮಾರ್ಗ ತುಳಿದವ, ದೇಶವಾದಿ ಸಂಸ್ಥೆ ನಡೆಯಿ ಸಿದವ, ಅದನ್ನು ಉಳಿಸಿ ನಾಗಿಸಿದವ ಆತಗೆ 'ಅಹಿಂಸೆ'ಯ ಮೇಲೆ ನಂಬಿಕೆಯಿತ್ತು ಅದರಿಂದಲೇ ಅವನು ಚಳವಳದ ಪ್ರಾರಂಭಕ್ಕೆ ಸೆರೆಮನೆಗೆ ನಡೆದ ಅವನ ನಿಷ್ಠಾವಂತ ಅನುಯಾಯಿಗಳು ನಾಲ್ಕು ದಿನ ಸತ್ಯಾಗ್ರಹದ ಗೊಂದಲವೆಬ್ಬಿಸಿ, 'ಮಾಡಿಯೂ ಮಡಿಯದೆಯೂ ಸ್ತಬ್ಧರಾದರು' ಆಗ ಈತ ಧೂಮಕೇತುವಿನಂತೆ ಉದಯಿ ಸಿದ ವಿಧ್ವಂಸಕ ಚಟುವಟಿಕೆಗಳ ನಾಯಕನಾದ ರಹಸ್ಯವಾಗಿ ಹತ್ತೆಂಟು ಮಂದಿಗಳನ್ನು ಕೂಡಿಕೊಂಡು - ಕಳ್ಳ ಅಚ್ಚುಕೂಟದಿಂದ ಪ್ರಚಾರ ನಡೆಯಿಸಿದ, ಬ್ರಿಟಿಷರ ಮೇಲೆ ತೀವ್ರವಾಗಿ ಬರೆದ. ಕ್ರಮೇಣ ಖಜಾನೆ, ಅಂಚೆಗಳ ಲೂಟಿ, ಪೋಲೀಸು ಠಾಣೆಗಳ ಸುಲಿಗೆ ಗಳನ್ನು ನಡೆಯಿಸಿ–ತಲೆತಪ್ಪಿಸಿಕೊಂಡು, ನೇತಾರನಾಗಿ ಅಲೆದ. ಅವನ ದೊಂದು ಬಹುದೊಡ್ಡ ಗುಪ್ತಗಾಮಿ ಸಂಸ್ಥೆಯಿದೆಯೆಂದೂ, ಅವನ ಕೆಳಗೆ ನೂರಾರು ಗೆರಿಲ್ಲಾ ಕಾದಾಳುಗಳಿರುವರೆಂದೂ ಸುದ್ದಿ ಹಬ್ಬಿತು. ಅಂತು ಅವನ ಮುಂದಾಳುತನದಲ್ಲಿ - ನೂರು ಇನ್ನೂರು ಮೈಲಿಗಳ ಅಂತರದಲ್ಲಿ ದಿನ ಬಿಟ್ಟು ದಿನ ಒಂದೊಂದು ಉಪಟಳ ತಲೆದೋರಿತು. ಅರಸನ ಬುದ್ಧಿಗೆ ನೆಮ್ಮದಿ ಸಿಗದೆ ಹೋಯಿತು

ಆಗಲೆಲ್ಲ ವಾಮನರಾಯ ಗುಪ್ತನಾಮಧಾರಿ, ಗುಪ್ತವೇಷ

ಧಾರಿ. ನಡೆದ ವಿಧ್ವಂಸನ ಕಾರ್ಯವೆಲ್ಲ ಅವನೊಬ್ಬನದೇ ಎನ್ನು ವುದೂ ಹೆಚ್ಚಿನ ಮಾತು. ಇವು ತೊಡಗುವ ತನಕ ಅರೆಹೊಟ್ಟೆ ಅರೆ ಬಟ್ಟೆಗಳಲ್ಲಿ ದಿನಕಳೆದ ಈ ದೇಶಸೇವಕ, ಬೀಡಿಯ ತುಣಿಕಿನಿಂದ ಪರ ಮಾವಧಿ ವಿಲಾಸ ಕಂಡನ, ಅನಂತರ ರಾಜಶ್ರೀವಿಯಿಂದ ಮೆರೆದಾಡಿದ. ಚಳವಳದ ಕಾಲದಲ್ಲಿ ಆತ ನೂರಾರು ಕುಟುಂಬಗಳನ್ನು ಸಾಕಿದನೆನ್ನು ತ್ತಾರೆ ಅವನಲ್ಲಿ ನೋಟು ಮುದ್ರಿಸುವ ಛಾಪಖಾನೆಯೇ ಇತ್ತು ಎನ್ನುತ್ತಾರೆ. ಅವೆಲ್ಲ ಅತಿಶಯೋಕ್ತಿಗಳಾದರೂ ಅವನು ಬರುವಾಗ ಇದ್ದ ಸುಧಾಮ ಅನಂತರವಲ್ಲ.

ಅದರಂತೆ ಅವನು ಸಾಮಾನ್ಯ ವ್ಯಕ್ತಿಯಲ್ಲವೆಂಬುದೂ ಅವ ನೊಡನೆ ನಿಕಟ ಪರಿಚಯ ಬೆಳೆಯಿಸಿದವರಿಗೆ ತಿಳಿದೀತು ಅಂಥವ ನಿಗೂ ಒಂದು ದಿನ ಸೆರೆಮನೆ ಪ್ರಾಪ್ತವಾಯಿತು, ಅವನ ಸಂಗಡಿಗ ರಿಂದಲೇ ಅವನಡಗಿದ ತಾವು ಬಹಿರಂಗವಾಯಿತು ಅದನ್ನು ತಿಳಿಸಿದ ಒಬ್ಬಿಬ್ಬರು ಅವನ ವರನು ವೈರಿಗಳಾದರು ಅವರಲ್ಲಿ ಒಬ್ಬ ಗುಲಾಬಿ ಟೋಪಿಯ ಸೇತಾರ - ಎಂಬುದು ಅವನ ಅನುಮಾನ ಈತನನ್ನು ಮುಳುಗಿಸುವುದಕ್ಕಾಗಿ ಆತ, ಈ ಚಳವಳವನ್ನು ಸೇರಿದನೆನ್ನುತ್ತಾರೆ ಇನ್ನೊಬ್ಬ ಅವನ ವೈರಿಯೆಂದರೆ ಅರುಣಾಚಲಯ್ಯ ಅರುಣಾಚಲಯ್ಯ ನವರಿಗೆ ಬಿಡುಗಡೆಯಾದ ಮೇಲೆ, ವಾಮನರಾಯನ ಕೆಲಸಗಳಾವುವೂ ರುಚಿಸಲಿಲ್ಲ. ' ಗಾಂಧಿ ಹೆಸರಿಗೇ ಮಣ್ಣು ಬಳಿದವನವನು ' ಎಂದು ಹೇಳತೊಡಗಿದರು ಅಲ್ಲಿಂದಲೇ ಅವರ ವೈರ ಬೆಳೆಯಿತು ಆದರೆ ದೇಶವಾದಿ ಸಂಗಡದ ಜನಗಳಿಗೆ - ಅರುಣಾಚಲಯ್ಯನ ದೇವತಾನೀತಿ ರಾಜಕೀಯಕ್ಕೆ ತಕ್ಕುದಲ್ಲ ಎಂದೆನಿಸಿತು

ಇತ್ತ ಅವನ ಗೆಳೆತನದಿಂದ ಅವನಂತೆಯೇ ವಿಧ್ವಂಸ ಚಳವಳ ನಡೆಯಿಸಿದ ಸೇತುರಾಯಗೆ ವಾಮನರಾಯನೊಡನೆ ದ್ವೇಷ ಬೆಳೆ ಯಿತು ಆತನೂ ವಾಮನರಾಯನ ವಿರೋಧಿಯಾದ ಮೊದಲು ದೇಶವಾದಿಯಾಗಿದ್ದವ, ಶ್ರಮವಾದಿ ಸಂಗಡದ ಸೂತ್ರ ವಹಿಸಿಕೊಂಡು ಗುಪ್ತವಾಗಿಯೇ ಜೀವನ ನಡೆಯಿಸಿದ ವಾಮನರಾಯನು ಜೈಲಿಂದ ಬಿಡುಗಡೆಗೊಂಡ ಮೇಲೆಯೂ, ಸೇತುರಾಯ ತಲೆಮರೆಯಿಸಿಕೊಂಡು ತಿರುಗಿದ ಕಾರಣ ಯಾರಿಗೂ ತಿಳಿಯದು.

ಅಂತು - ಚಳವಳವು ತಣ್ಣಗಾದ ಮೇಲೆ - ಬರಿದೆ ಜೈಲಿಗೆ ಹೋಗಿ ಸ್ನಾನ ಬದ್ಧತೆ ಮುಗಿಸಿ ಬಂದ ಅರುಣಾಚಲಯ್ಯನವರನ್ನು ಮೀರಿಸುವಂಥ ಕೀರ್ತಿ ವಾಮನರಾಯನಿಗೆ ಬಂದಿತು ! 'ಸರ್ದಾರ ವಾಮನರಾಯ', 'ಗೊಂಡಾರಣ್ಯದ ಸಿಂಹ' ಮುಂತಾದ ಬಿರುದು ಗಳಿಸಿದ ಅಂದಿನಿಂದ ಅವನ ಪರಿಚಯ, ವರ್ಚಸ್ಸು ಬೆಳೆಯಿತು. ಅನೇಕರು ಚಳವಳದ ಕಾಲದಲ್ಲಿ, ಸರಕಾರಕ್ಕೆ ಮಿತ್ರರಾಗಿದ್ದರೂ, ಒಳಗಿಂದೊಳಗೆ ಇವನಿಗೂ ಬೆಂಬಲ ಕೊಡುತ್ತಿದ್ದರು ಅಂಥವರೇ ಈಗ ಅವನ ಮುಖ್ಯ ಮಿತ್ರರು

ಪ್ರತಾಪರಾಯನ ಎದುರು - ಸ್ವಾತಂತ್ರ್ಯ ಚಳವಳ ನಡೆಯಿಸು ವಾಗ ಅರುಣಾಚಲಯ್ಯನವರು ತಣ್ಣಗಿರಲಿಲ್ಲ ಅವರೂ ತಕ್ಕಷ್ಟು ಜನಜಾಗೃತಿ ಹುಟ್ಟಿಸಿದ್ದರು ಆದರೆ ಜನ ವಾಮನರಾಯನ ಗಂಟ ಲನ್ನು ನೆಚ್ಚಿ - ಅವನನ್ನೇ ಸರ್ವಾಧಿಕಾರಿಯನ್ನಾಗಿ ಮಾಡಿತು ಈ ಚಳವಳದ ಕಾಲದಲ್ಲೂ ಜನರೆದುರಿಗೆ ಬೀಳದ ವ್ಯಕ್ತಿ ಸೇತುರಾಯ ಆತ ತನ್ನ ಧ್ಯೇಯ, ದಾರಿಗಳು ಇನ್ನು ಮುಂದೆ ಬೇರೆಯೇ ಎಂದು ನಿರ್ಣಯಿಸಿದ ಅವನು ಗೊಂಡಾರಣ್ಯದಲ್ಲೇ ಇಲ್ಲ - ಅಸ್ಸಾಮಿನಲ್ಲೋ, ಒರಿಸ್ಸಾದಲ್ಲೋ ಕೆಂದಳದ ಗೆರಿಲ್ಲಾಗಳನ್ನು ನಡೆಯಿಸುತ್ತಿದ್ದಾನೆ- ಎಂದು ವದಂತಿಯೂ ಇತ್ತು

ರಾಜಧಾನಿಯಲ್ಲಿ ಈಗ ಸುಳಿದಾಡುತ್ತಿರುವ ಪ್ರಭಾವಗಳಲ್ಲಿ ಮಾಜಿ ಸಚಿವ ಕೃಷ್ಣಮೂರ್ತಿಯದೂ ಒಂದು-ಎಂದೆವು ಆತ, ಬ್ರಿಟಿಷರು ಭಾರತವನ್ನು ಬಿಡುವುದಕ್ಕೆ ನಾಲ್ಕು ವರ್ಷಗಳಿಗಿಂತ ಮೊದಲೇ ಸಚಿವನಾಗಿ ಪ್ರತಾಪರಾಯನ ಬಳಿಗೆ ಬಂದವನು ಅವನು ಇದ್ದ ನಾಲ್ಕು ವರ್ಷಗಳ ಕಾಲದಲ್ಲಿ 'ಮೇಧಾವಿ, ಆಡಳಿತ ನಡೆಯಿಸ ಬಲ್ಲ ಬುದ್ಧಿವಂತ' ಎಂಬ ಕೀರ್ತಿ ಗಳಿಸಿದ್ದ ಇಂದಿಗೂ ಅಧಿಕಾರಿ ವರ್ಗಕ್ಕೆ ಅವನೆಂದರೆ ತುಂಬ ಗೌರವವಿದೆ ಆತ ದಕ್ಷ ರಾಜ್ಯ ಸೂತ್ರ ನಡೆಯಿಸಬಲ್ಲ ಕರ್ಮಠ ಅರಸು ಅವನಿಗೆ ಸಾಕಷ್ಟು ಸ್ವಾತಂತ್ರ್ಯ ವನ್ನು ಕೊಟ್ಟಿದ್ದ. ಅದರಿಂದಲೇ-ಆತ ಕೆಲವೊಂದು ಹೊಸ ಯೋಜನೆ ಗಳಿಗೆ ಅರಸನ್ನು ಒಪ್ಪಿಸಿ, ಯುದ್ಧ ಕಾಲದಲ್ಲಿಯೇ ಅದಕ್ಕೆ ಪಾಯ ಹಾಕಿದ. ಒಂದೆರಡು ನೀರಾವರಿ ಯೋಜನೆಗಳನ್ನು, ಹೊಸ ಉದ್ಯಮ

ಗಳನ್ನು ತೊಡಗಿಸಿದ. ಸಂಸ್ಥಾನದಲ್ಲಿ–ವಿದ್ಯಾಭ್ಯಾಸ, ಚಿಕಿತ್ಸೆ ಸೌಕರ್ಯ ಗಳನ್ನು ವಿಸ್ತರಿಸತೊಡಗಿದ ಉತ್ಪನ್ನ ಕೊಟ್ಟ ದೊರೆಯ ವಿಚಾರ ದಲ್ಲಿ ತುಂಬ ಬುದ್ಧಿವಂತಿಕೆಯಿಂದ ನಡೆದು, ಅವನನ್ನು ಉಳಿಸಲೂ ಕಾರಣನಾದ ಅವನ ಕೆಲಸ, ಬುದ್ಧಿಮತ್ತತೆಯೆಷ್ಟು–ಎಂದು ತಿಳಿದುದರಿಂದಲೋ ಏನೋ, ವಾಮನರಾಯ ಅವನನ್ನು ಉಳಿಸಿ ಕೊಂಡು, ತನ್ನ ಖಾಸಗಿ ಉಪದೇಶಕನಾಗಿ ಮಾಡಿಕೊಂಡ ತನಗೆ ರಾಜ್ಯದ ಪಾಲು ಹೊಕ್ಕು ತಿಳಿಯುವ ತನಕವಾದರೂ ಅವನ ನೆರವು ಬೇಕೆಂದು ತಿಳಿದಿತ್ತು 'ತನ್ನ ಹೊಸ ಹಂಚಿಕೆಗಳು ಇಂಥಿಂಥವು' ಎಂದು ಆತನೆನ್ನುತ್ತಿದ್ದ ಪ್ರತಿಯೊಂದೂ ಕೃಷ್ಣಮೂರ್ತಿ ಮುಂಚೆಯೇ ಸಿದ್ಧಪಡಿಸಿ ಇರಿಸಿದ ಹಂಚಿಕೆಗಳೆಂದು–ಬಲ್ಲವರಿಗೆ ತಿಳಿದೇ ಇತ್ತು

ಇತ್ತ ಸಚಿವನಾಗಿದ್ದ ಕೃಷ್ಣಮೂರ್ತಿ ಸೇವಕನಾದುದು (ಉಪ ದೇಶಕ ಎಂಬ ಹೆಸರಿನಲ್ಲಿ) ಕೇವಲ ಉಪಾಯವೋ, ಅನಿವಾರ್ಯವೋ ತಿಳಿಯದ ಸಂಗತಿ ಅದು ಅಭಿಮಾನದಿಂದ ಕೈಗೊಂಡ ವೃತ್ತಿಯಲ್ಲ. ವಾಮನರಾಯನ ಪೂರ್ವೇತಿಹಾಸವಂತು ಅವನಿಗೆ ತೀರ ತಿಳಿದಿತ್ತು. ೧೯೨೧ರಲ್ಲಿನ ಅಸಹಕಾರ ಚಳವಳದಲ್ಲಿ–ಆತ ಒಬ್ಬ ಶಾಲಾ ಉಪಾ ಧ್ಯಾಯನಾಗಿದ್ದು, ಕೆಲಸದಿಂದ ನಿವೃತ್ತಿಗೊಂಡ ಗಾಂಧಿ ಚಳವಳದ ಶುಂಠ ಅಭಿಮಾನಿಯಾಗಿದ್ದ ಅಲ್ಲಿನ ಹತ್ತು ವರ್ಷಗಳಲ್ಲಿ ಕೀರ್ತಿ ಗಳಿಸಿ ಪ್ರಭಾವಶಾಲಿಯೂ ಆದ ಆದರೆ ಅನಂತರ ಅದೇ ಪ್ರಾಂತದ ಮತ್ತೊಬ್ಬ ಶಕುನಿ, ಅವನೆದುರು ನಿಂತು, ರಾಜಕೀಯದಲ್ಲಿ ಸ್ಪರ್ಧಿಸಿ, ಇವನನ್ನು ಹಿಂದೆ ತಳ್ಳಿದುದರಿಂದಲೇ, ಆತ ಅದೃಷ್ಟ ಪರೀಕ್ಷೆಗೆಂದು ಗೊಂಡಾರಣ್ಯಕ್ಕೆ ಬಂದ ಗೊಂಡಾರಣ್ಯ ಮಾತ್ರ ಅವನ ಪಾಲಿನ ಚಿನ್ನದ ಗಣಿಯೇ ಆಯಿತು

ಇಷ್ಟೆಲ್ಲ ಜನಗಳೂ ರಾಜಕೀಯದಲ್ಲಿ ಪ್ರಬುದ್ಧರು ಇವರೊಡನೆ ಎಳೆಯಳೂ, ಓದಿದವಳೂ ಆದ ಕಾಂಚನಮಾಲೆ ಸೇರಿಕೊಂಡುದಾಗಲಿ ಕೀರ್ತಿಗಳಿಸಿದುದಾಗಲಿ ಒಂದು ವಿಶೇಷದ ಸಂಗತಿಯೇ ಅವಳಾಗಿ ರಾಜಕೀಯಕ್ಕೆ ಧುಮುಕಿದಳೇ, ಅಥವ ಕೃಷ್ಣಮೂರ್ತಿಯ ಪ್ರೇರಣೆ ಅದಕ್ಕಿತ್ತೇ–ಎಂಬುದು ಸಂದಿಗ್ಧದ ಮಾತು ಆಕೆ ಸಾಮಾನ್ಯ ವ್ಯಕ್ತಿ ಯಂತು ಅಲ್ಲ ಈಗ ಅವಳಿಗೆ ಮೂವತ್ತು ವಯಸ್ಸು ಕಳೆದಿರಬಹು

ದಷ್ಟೆ, ಆದರೆ ವಯಸ್ಸನ್ನು ಮೀರಿದ ಬುದ್ಧಿಶಕ್ತಿ ಅವಳದು ಕಾಲೇಜು ವಿದ್ಯಾಭ್ಯಾಸವನ್ನು ಮುಗಿಸಿದ ಅವಳ ಪಾಲಿಗೆ ಭಾರತದ ಸ್ವಾತಂತ್ರ್ಯ ಸಂಗ್ರಾಮ ಚಳವಳ ಮನಸ್ಸನ್ನು ಸೆಳೆಯಿತು ತಾನಾಗಿಯೇ ಲಾಟಿ ಪ್ರಹಾರಕ್ಕೊ, ಸೆರೆಮನೆಗೊ ಹೋಗಲು ಸಿದ್ಧಳಾದ ಅವಳನ್ನು ಸಚಿವನಾಗಿ ಬಂದ ಕೃಷ್ಣಮೂರ್ತಿ, ಉಪಾಯಾಂತರದಿಂದ ಆ ಚಳವಳಕ್ಕೆ ತಳ್ಳಿದ್ದೂ ನಿಜವೇ ಅವಳ ಮೂಲಕ ಚಳವಳದ ಹಿನ್ನೆಲೆಯಲ್ಲಿ ನಿಂತವರನ್ನು ಹಿಡಿಯಬಹುದು ಎಂಬುದು ಅವನ ಎಣಿಕೆಯಾಗಿತ್ತು ಆದರೆ ಅವನ ಆಸೆಯನ್ನು ಮೀರಿ, ಸ್ವತಂತ್ರಳಾಗಿ ವರ್ತಿಸಬಲ್ಲ ಶಕ್ತಿ ಅವಳಲ್ಲಿತ್ತೆಂದು ಅವನಿಗೂ ಆಗ ಗೋಚರಿಸಿರಲಿಲ್ಲ.

ಅವಳು ಯಃಕಶ್ಚಿತ ವ್ಯಕ್ತಿಯೂ ಅಲ್ಲ ಅವಳ ಮೂಲವನ್ನು ಅರಸಿದಲ್ಲಿ ಬೇಸರವೂ ಬರಬಹುದು ಅವಳ ಮನೆತನ ನಾಲ್ವತ್ತು ವರ್ಷಗಳ ಹಿಂದೆ ವಿಕ್ರಮನಗರಕ್ಕೆ ಬಂದಿತ್ತು ಈಗಣ ದೊರೆಯ ತಂದೆ ಹೇಮಚಂದ್ರರಾಜ, ಅವಳ ತಾಯಿಯನ್ನು ರಾಜಪುತಾನದಿಂದ, ಚೆಲುವಿಗೆ ಮೆಚ್ಚಿ ಸಂಪಾದಿಸಿಕೊಂಡು ಬಂದ ಆಕೆ ಹಿಂದಣದೊರೆಯ ವಿಲಾಸವತಿಯಾಗಿ ಮೆರೆದವಳು ಇಂದು ಆಕೆ ಮುದುಕಿಯಾದರೂ, ರಾಜಧಾನಿಯಲ್ಲಿ ಪ್ರಭಾವಶಾಲಿಯಾಗಿಯೇ ಉಳಿದಿದ್ದಾಳೆ ಅವಳು ವಿಕ್ರಮನಗರಕ್ಕೆ ಬಂದಮೇಲೆ ಹಡೆದ ಕೂಸುಗಳು ಕಾಂಚನಮಾಲೆ ಮತ್ತು ಅಣ್ಣ ಸಾಗರ ಇಬ್ಬರೂ ಕಾಲೇಜು ವಿದ್ಯಾಭ್ಯಾಸ ಪಡೆದರು ತಾಯಿಯ ವರ್ಚಸ್ಸು ಹಿರಿದೊರೆಯ ಸಾವಿನಿಂದ ಕುಂದಿತಾದರೂ, ಈಗಣ ದೊರೆ ಹಿಂದಿನಂತೆಯೇ ಅವರಿಗೆ ಬೇಕಾದ ನೆರವು ಕೊಡುತ್ತ ಬಂದಿದ್ದ ಅವಳು ಅರಮನೆಗೆ ತೀರ ಪರಿಚಿತಳಾದವಳು ವಿದ್ಯಾಭ್ಯಾಸ ಪಡೆದವಳು ಅವಳ ತಮ್ಮ ವೈದ್ಯನಾಗಿ ಇಂದು ಉದ್ಯೋಗದಲ್ಲಿದ್ದಾನೆ

ಈಕೆ ಕುಲದ ನಿರ್ಬಂಧವಿಲ್ಲದಾದುದರಿಂದ ಗುಂಡುಬೀರಿಯಂತೆ ತುಸು ಮೆರೆದಾಡಿದವಳು ನಿಜವೇ ಸಾರ್ವಜನಿಕರ ಜೀವನದ ಹುಚ್ಚಿನೊಡನೆ ಅವಳಲ್ಲಿ ದೇಶಪ್ರೇಮವೂ ಉದ್ಭವಿಸಿತ್ತು. ದೇಶದ ರಾಜಕೀಯಕ್ಕೆ ಧುಮುಕುವಾಗ ತಾನೊಂದು ಪಗಡೆಯ ದಾಳವಾದೇನು-ಎಂದು ತೋರಿರಲಿಲ್ಲ ಸಚಿವ ಕೃಷ್ಣಮೂರ್ತಿಯ ಮನೆಯೂ ಅವಳಿಗೆ

ಪರಿಚಯದ್ದಾಗಿತ್ತು. ಆತನ ಮಗಳು ಅವಳ ಗೆಳತಿಯೂ ಆಗಿದ್ದಳು. ಹಾಗಾಗಿ ಆಕೆ ಅವರ ಮನೆಗೆ ಹೋದಾಗ–ಈ ಆಂದೋಲನದ ವಿಚಾರದಲ್ಲಿ, ಅರಮನೆಯವರಿಗೆ ಏನನಿಸೀತು ಎಂಬುದರ ಯೋಚನೆಯಿಲ್ಲದೆ, ತನ್ನ ಆಕಾಂಕ್ಷೆಗಳನ್ನು ತೋಡಿಕೊಂಡುಮುಂಟು. ಮಾತಿನ ಎಡೆಯಲ್ಲಿ ಕೃಷ್ಣಮೂರ್ತಿಯು "ನನಗೇನು ದೇಶಾಭಿಮಾನವಿಲ್ಲೆಂದು ತಿಳಿಯುತ್ತೀಯಾ? ಈ ಸಂಸಾರ ತಾಪತ್ರಯನಿಲ್ಲದಿರುತ್ತಿದ್ದರೆ, ನಿನ್ನ ಬಿಸಿರಕ್ತ ನನ್ನಲ್ಲಿರುತ್ತಿದ್ದರೆ ನಾನು ಅದರಲ್ಲಿ ಧುಮುಕುತ್ತಿದ್ದೆನೋ ಏನೋ. ಆದರೆ ನೋಡು–ದೊರೆ ನಿನಗೆ ಸೋದರ ಸಮಾನ. ಅವನ ಜೀವ, ಮಾನಗಳಿಗೆ ಏನಾದರೂ ಆಪತ್ತು ಬಾರದ ರೀತಿಯಲ್ಲಿ ನೀನು ವರ್ತಿಸಬೇಕಾದ ಹೊಣೆಯೂ ನಿನಗಿದೆ" ಎಂದು ಅವಳ ವಿವೇಕವನ್ನು ಚುಚ್ಚಿ ನುಡಿದಿದ್ದ.

ಆಕೆ ಚೆಲುವೆ, ಮಾತುಗಾರ್ತಿ, ಗಾಡಿಗಾತಿ–ಎಲ್ಲ ನಿಜವೇ. ಆದರೆ ಕೆಲವು ದಿನ ರಾಜಕೀಯದಲ್ಲಿ ಧುರೀಣೆಯೆನಿಸಿ ಮೆರದಾಡಿದ ಬಳಿಕ, ತಾನೂ ಬಲ್ಲಿನಳು, ವಾಮನರಾಯನ ಯೋಗ್ಯತೆಯನ್ನು ಮೀರಿದವಳು, ತನಗಿರುವ ಮನ್ನಣೆ ಅವನಿಗೆಲ್ಲಿ-ಎಂದೂ ತಿಳಿದಿದ್ದಳು. ಅವನನ್ನು ಬಲ್ಲ ಯಾರೊಬ್ಬರೂ ಅವನನ್ನು ಸರ್ವಾಧಿಕಾರಿಯನ್ನಾಗಿ ಆರಿಸಲಾರರೆಂದೇ ತಿಳಿದಿದ್ದಳು. ಆರಿಸಿದರು. ಈಕೆ ಚಳವಳದ ಕಾಲದಲ್ಲಿ ಬರಿದೆ ಸ್ವಯಂಸೇವಕ ದಳದ ನಾಯಕಿಯಾದಳು. ಅವಳ ವಿಷಯಯದಲ್ಲಿ ವಾಮನರಾಯನಿಗೂ ಆದರವಿದ್ದಿತು, ದುಡುಕು ದಿಟ್ಟತನ ತೋರಿಸಿದವನಲ್ಲ. ಅವಳ ರೂಪ, ಧೈರ್ಯಗಳ ಪರಿಚಯದಿಂದ ಮೂಕ ದಾಸನಾದ. ಅವಳ ನಕಾರನನ್ನು ಮೀರಿದವನಲ್ಲ. ಉಳಿದವರೊಡನೆ ಎಷ್ಟು ದುರಹಂಕಾರದಿಂದ ವರ್ತಿಸಿದರೂ ಅವಳ ಮುಂದೆ ಮಾತ್ರ ವಿನಯಶೀಲ. ಅದಕ್ಕೆ ಕಾರಣ–ಅವಳ ಕೃಪೆಯನ್ನು ಗಳಿಸಬೇಕೆಂಬ ಲವಲವಿಕೆ. ಅವಳನ್ನು ಮದುವೆಯಾಗಬೇಕೆಂಬ ಹಂಬಲ ಅವನಲ್ಲಿ ತುಂಬಿಕೊಂಡಿತ್ತಾದರೂ ಕೇಳಲಾರ, ಬಹಿರಂಗದಲ್ಲಿ ಅಂಥ ಕುಲದವಳನ್ನು ಮದುವೆಯಾಗುವ ನೈತಿಕ ಧೈರ್ಯವೂ ಇರಲಿಲ್ಲ. ಹೀಗಾಗಿ ಅವಳ ಕೃಪೆಯನ್ನು ಕಣ್ಣುಗಳಿಂದ ಯಾಚಿಸುವ ಕೆಲಸವಷ್ಟೇ ಅವನದು. ಅವಳು ಸಮೀಪವಾಗಿರುವಾಗಲೂ 'ನನ್ನವಳಾಗು'

ಎಂದು ಕೇಳುವುದಕ್ಕೆ ಭಯ ತನಗಿಂತ 'ಚುರುಕುಬುದ್ಧಿಯವಳನ್ನು ಮದುವೆಯಾದರೋ' ಎಂಬ ಅಂಜಿಕೆಯೂ ಉಂಟು. ಬರಿಯ ಹೆಣ್ಣಿನ ಸುಖಕ್ಕಾದರೆ ಮದುವೆಯ ಕಟ್ಟೇಕೆ–ಎಂದು ಬಾಳಿ ಬಂದ ರೀತಿ ಅವನದು ಅಂತಹ ನಿರಂಕುಶನ ಬಾಲಿಗೆ ತೊಡಿಸಬಹುದಾದ ಕಡಿವಾಣ 'ಹೆಣ್ಣು' ಎಂಬುದು ಸಚಿವ ಕೃಷ್ಣಮೂರ್ತಿಯ ಎಣಿಕೆಯಾಗಿತ್ತು

ಕಾಂಚನ ಮಾಲೆಯ ಸ್ನೇಹದ ಹಂಬಲದಿಂದಲೇ, ವಾಮನರಾಯ ಕೃಷ್ಣಮೂರ್ತಿಯೊಡನೆ 'ಮಂತ್ರಿ ಸಂಪುಟದಲ್ಲಿ ಸ್ತ್ರೀಯರಿರಬೇಕು, ಅವರೂ ಸ್ವಾತಂತ್ರ್ಯಕ್ಕಾಗಿ ಹೋರಾಡಲಿಲ್ಲವೇ?' ಎಂದು ಬಡಬಡಿಸಿದಾಗ, ಆತ ಕಾಂಚನಮಾಲೆಯ ಹೆಸರನ್ನು ಸೂಚಿಸಿದ ಆತನು ಬಯಸಿದ ಹೆಸರನ್ನು ಅವನ ಸಂಗಡದವರು ಸೂಚಿಸದೆ ಹೋದರೂ, ಈತ ಸೂಚಿಸಿದ್ದ ಅನಂತರ ವಾಮನರಾಯ ಆಕೆಯನ್ನು ಕರೆಯಿಸಿಕೊಂಡು "ಇಷ್ಟೆಲ್ಲ ಕೆಲಸಮಾಡಿದ ನೀವು, ಇನ್ನು ರಾಜಕೀಯ ಬಿಡುತ್ತೀರಾ? ರಾಜ್ಯದ ಹೊಣೆಯನ್ನು ಹೊರಬೇಡವೇ? ಒಮ್ಮೆ ರಾಜಕೀಯಕ್ಕೆ ಇಳಿದಮೇಲೆ ಯಾವಜ್ಜೀವವೇ ಅದಕ್ಕೆ ಮೀಸಲು" ಎಂದು ಉಪದೇಶಿಸಿದ

ಆಕೆಯ ಮನಸ್ಸಿನಲ್ಲಿ ಮಂತ್ರಿಪದದ ಕನಸು ಮೂಡಿರಲಿಲ್ಲ, ನಾಲ್ಕು ದಿನ ಮೆರೆದಾಡುವ ಹುಚ್ಚಿದ್ದುದಂತು ಸರಿಯೆ ಅದರಿಂದಾಗಿ ಅವಳು "ಸರಕಾರ ನಡೆಸುವ ಕಲಸವೇ! ಅದು ನಿಮ್ಮಂಥವರಿಗೆ" ಎಂದಳು ನಿರಾಶನಾದ ವಾಮನರಾಯ ತಿರುಗಿ ಕೃಷ್ಣಮೂರ್ತಿಯಲ್ಲಿ ಹೋಗಿ "ನೀವು ಅವಳನ್ನು ಒಪ್ಪಿಸಬೇಕು. ಅವಳನ್ನು ವಿದ್ಯಾಖಾತೆಗೋ, ಆರೋಗ್ಯಕ್ಕೋ ಮಂತ್ರಿಯನ್ನಾಗಿ ಮಾಡುತ್ತಿದ್ದೆ. ನಮ್ಮ ವರಿಷ್ಠರಿಗೂ ಅವಳ ವಿಷಯದಲ್ಲಿ ಒಳ್ಳೆಯ ಅಭಿಪ್ರಾಯವಿದೆ" ಎಂದ ಆ ಹೊಣೆಯನ್ನು ಕೃಷ್ಣಮೂರ್ತಿಯೂ ಹೊತ್ತ ಆಕೆ ತನಗೆ ಪರಿಚಿತಳು, ಅಲ್ಲದೆ ದೊರೆಯ ಜನ ಒಬ್ಬರಾದರೂ ಸಂಪುಟದಲ್ಲಿದ್ದಂತಾಯಿತು-ಎಂದು ಅವಳ ಬಳಿಗೆ ಹೋಗಿ "ಕಾಂಚನ, ಅವರಾಗಿ ಇಂಥ ಪ್ರಶ್ನೆ ಕೇಳಿದರೆ ಬೇಡ ಅನ್ನುವುದೇ? ಸ್ತ್ರೀಯರು ಮುಂದೆ ಬರುವ ಇಂಥ ಅವಕಾಶ ಬಿಡುತ್ತೀಯ? ಅವರಿಗೆ ಒಬ್ಬಳಾದರೂ

ಸ್ತ್ರೀ ಮಂತ್ರಿಸಂಪುಟದಲ್ಲಿರಬೇಕೆಂದಿದೆ ನೀನು ಒಪ್ಪದೆ ಹೋದರೆ ಡಾ. ನಾಗಲಾಂಬೆಯನ್ನು ಸೇರಿಸಿಕೊಳ್ಳುವ ಪ್ರಸಂಗವಿದೆ" ಎಂದ ಆಕೆಯ ಹೆಸರನ್ನು ಕೇಳಿ ಕಾಂಚನಮಾಲೆಗೆ ಆಶ್ಚರ್ಯವಾಯಿತು "ಏನು ಅವಳೇ ? ಅವಳಲ್ಲಿ ಯಾವ ಯೋಗ್ಯತೆಯಿದೆ ? ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅವಳೇನು ಮಾಡಿದ್ದಾಳೆ ? ನಮ್ಮ ಫಂಡಿಗಿಷ್ಟು ಹಣ ಕೊಟ್ಟಿರಬಹುದು ಅಷ್ಟಕ್ಕಾಗಿ ಅವಳನ್ನು ಆರಿಸುವುದೇ ?" ಎಂದಳು

"ನಿನ್ನಂಥವರು, ಯೋಗ್ಯತೆಯಿದ್ದವರು, ರಾಜಕೀಯದಲ್ಲಿ ಮುಂದೆ ಬಾರದಿದ್ದರೆ, ಮುಂದೆ ಬರುತ್ತೇನೆ ಎನ್ನುವವರನ್ನು ಬಿಡುವುದೇ?" ಎಂಬುದರಿಂದ ಅವಳ ಅಸೂಯೆಯನ್ನು ಕೆರಳಿಸಿದಂತಾಯಿತು ಸಮ್ಮತಿಸಿದಳು ಅಲ್ಲಿಂದ ವಾಮನರಾಯನಿಗೆ ಸುದ್ದಿ ಸೇರಿತು ಆತ ನಾಲ್ಕು ಜನಗಳ ಮುಂದೆಯೇ ಅವಳನ್ನು ಹೊಗಳಿ, ಕೇಳಿ, ಉಳಿದವರ ಸಮ್ಮತಿಯನ್ನು ಗಳಿಸಿಕೊಂಡ ಉಳಿದ ಮಂತ್ರಿಗಳ ಆಯ್ಕೆಯ ವಿಚಾರದಲ್ಲಿ ಆತ ಬಹಳ ಗುಟ್ಟಾಗಿ ವರ್ತಿಸಿದ್ದರೂ, ಈಕೆಯ ವಿಷಯದಲ್ಲಿ ಅನುಮಾನವುಂಟಾಗದಂತೆ ಬಹಿರಂಗವಾಗಿ ವರ್ತಿಸಿದ ಅಂತು ರೋಗಿ ಬಯಸಿದ ಹಾಲೇ ದೊರೆಯಿತು ಕಾಂಚನಮಾಲೆಯ ಹೆಸರು ಪ್ರಕಟವಾಗುತ್ತಲೇ, ನಾಗಲಾಂಬೆಯ ದ್ವೇಷ, ಪ್ರಚಾರಗಳು ಪಂಗಡದಲ್ಲಿ ನಡೆದುವು "ಆ ಮೊದ್ದು ಹುಡುಗಿಯ ಚೆಲುವು ನೋಡಿ ಮಂತ್ರಿಪದವಿಯನ್ನು ಕೊಟ್ಟನೇ ?" ಎಂದಳು ಅವಳ ಮನಸ್ಸಿಗೆ-ಇದು ವಾಮನರಾಯನ ವ್ಯಾಮೋಹದ ಗುರುತು, ತನ್ನ ವಿಷಯದಲ್ಲ ಅವನ ಕೃತಘ್ನತೆಯ ಗುರುತೆಂದೂ ತೋರಿತು ೧೯೪೨ ಚಳವಳದಲ್ಲಿ ವಾಮನರಾಯ, ಈ ನಾಗಲಾಂಬೆಯ ಮನೆಯಲ್ಲಿಯೇ ಅಡಗಿ ಕುಳಿತ ದಿನಗಳಿದ್ದವು ಅವಳು ಅವನಿಗೆ ಆಶ್ರಯವನ್ನು ಕೊಟ್ಟಂತೆಯೇ ಧನ ಸಹಾಯವನ್ನೂ ಮಾಡಿದ್ದಳು ಅಂಥ ವ್ಯಕ್ತಿ, ವಯ್ಯಾರಿಯೊಬ್ಬಳ ಮೋಹಕ್ಕೆ ಒಳಗಾಗಿ, ತನ್ನನ್ನು ಮರೆತುಬಿಟ್ಟನಲ್ಲ-ಎಂದು ಅವಳಿಗೆ ತುಂಬ ನೋವುಂಟಾಯಿತು

ಮುಂದೆ ಆರು ತಿಂಗಳಲ್ಲಿ ಡಾ|| ನಾಗಲಾಂಬೆ ತನ್ನಂತೆಯೇ ಅಸಂತುಷ್ಟರಾದ ಕೆಲವರನ್ನು ಕಟ್ಟಿಕೊಂಡು ಹೊಸದೊಂದು ರಾಜ

ಕೀಯ ಪಕ್ಷವನ್ನು ಕಟ್ಟುವುದಕ್ಕೂ ಸಿದ್ಧಳಾದಳು ಆ ಸುದ್ದಿಯು ಅರಣಾಚಲಯ್ಯನವರ ಕಿವಿಯನ್ನು ಸೇರಿತು ಸರಕಾರದಲ್ಲಿ ಆಡಳಿತೆಯ ಸ್ವರೂಪ ದಿನದಿನ ವಿಕಟವಾಗುತ್ತಿದ್ದುದರಿಂದ ಅವರು, ತಮ್ಮ ಪದಚ್ಯುತಿಗಾಗಿ ದುಃಖಿಸಲಿಲ್ಲವಾದರೂ, ದೇಶವಾದಿಗಳ ವಿಚಾರದಲ್ಲೂ ಅವರ ನಾಯಕರ ವಿಚಾರದಲ್ಲೂ ಬೇಸರಗೊಂಡಿದ್ದರು ಸ್ವಂತ ಪಕ್ಷವನ್ನು ಕಟ್ಟುವ ಬಯಕೆ, ಅವರಲ್ಲಿ ಆಗಲೇ ಉಂಟಾಗಲಿಲ್ಲವಾದರೂ, ಬೇರೊಂದು ಪಕ್ಷವಿಲ್ಲದೆ ಸರಕಾರ ಸುಧಾರಿಸಲಾರದು ಎಂದು ತೋರುತ್ತಿತ್ತು ನಾಗಲಾಂಬೆ ಅಂಥ ಪಕ್ಷಕ್ಕೆ ಜನ್ಮ ಕೊಟ್ಟುದು ಸ್ವಾರ್ಥದ ಅಸಮಾಧಾನದಿಂದಲಾದರೂ, ಅದು ಅನಿವಾರ್ಯವೆಂದು ಜನಗಳ ಮನಸ್ಸಿನಲ್ಲಿ ಉಂಟಾಗುವಂತೆ ಮಾಡಿದುದು ವಾಮನರಾಯನ ನಿರಂಕುಶ ಆಡಳಿತೆ

ಸ್ವಾತಂತ್ರ್ಯ ಉತ್ಸವದ ದಿನ ! “ ಗೊಂಡಾರಣ್ಯ ಇನ್ನು ಹತ್ತು ವರ್ಷಗಳಲ್ಲಿ ಆದರ್ಶ ಸಂಸ್ಥಾನವಾದೀತು ” ಎಂದು ವಾಮನರಾಯ ಸಾರಿದ್ದ ಅದಕ್ಕೆ ಬೇಕಾದ ಹಂಚಿಕೆಗಳನ್ನು ಕೃಷ್ಣಮೂರ್ತಿ ರೂಪಿಸಿ ಕೊಟ್ಟಿದ್ದ ಆಡಳಿತ ಪ್ರಾರಂಭವಾದ ದಿನ ಸರಕಾರದ ಖಜಾನೆಯಲ್ಲಿ ಒಂದು, ಒಂದುವರೆ ಕೋಟಿ ರೂಪಾಯಿಗಳಷ್ಟು ನಗದು ಹಣ ಇತ್ತು ಹೀಗಾಗಿ ಕೃಷ್ಣಮೂರ್ತಿಗೆ-ಹೊಸ ಉದ್ಯಮ, ಅನುಕೂಲತೆ ಮೊದಲಾದುವುಗಳನ್ನು ಮಾಡುವುದು ಕಷ್ಟವಲ್ಲವೆಂಬ ವಿಶ್ವಾಸವಿದ್ದಿತು ಅದು ಬರಿಯ ಕನಸಾದೀತೋ ಎಂದು ಆತ ತಿಳಿದಿರಲಿಲ್ಲ ಅದಕ್ಕೆ ಬಂದ ವಿಘ್ನವಿಷ್ಟೆ-ವಾಮನರಾಯ ಆ ಆದರ್ಶ ಹಂಚಿಕೆಗಳನ್ನು ಜನಗಳ ಮುಂದಿರಿಸಿದ್ದನಾದರೂ ಅವನ್ನು ನಡೆಯಿಸುವ ಆತುರ ತೋರಲಿಲ್ಲ. ನಡೆಯಿಸುವ ಏರ್ಪಾಟಿನಲ್ಲಿಯೂ ತನ್ನ ಪ್ರತಿಷ್ಠೆ, ಹಿಡಿತ, ಹಿತಗಳನ್ನು ಬೆಳೆಯಿಸಲು ಬೇಕಾದ ಬದಲಾವಣೆಗಳನ್ನು ಮಾಡಿ ಕೆಲಸ ಪ್ರಾರಂಭಿಸಿದ ಒಂದೊಂದು ಕೆಲಸಕ್ಕೂ, ತನಗೆ ಬೆಂಬಲ ಕೊಡುವ ಜನರಿಗೆ ಆಶ್ರಯಕೊಟ್ಟು, ಮಾಡಿದ ಎಣಿಕೆಗಳನ್ನು ಮೀರಿಸುವ ಗುತ್ತಿಗೆಗಳಿಗೆ ವಹಿಸಿಕೊಟ್ಟು, ಹಣವನ್ನು ನೀರಿನಂತೆ ಚೆಲ್ಲತೊಡಗಿದ ಒಂದು ಕ್ಷಣಕ್ಕೆ ಅರಸುತನದ ಕನಸು ಅವನ ಪಾಲಿಗೆ ನನಸಾಯಿತು. ತಿರುಗಿ ಜನರು ತನ್ನನ್ನೇ ಪಂಗಡದ ನಾಯಕನನ್ನಾಗಿ ಆರಿಸುವಂತೆ ಉಪಾಯ

ಮಾಡುವುದು ಮುಖ್ಯವೆನಿಸಿತು ತಾನು ಮಾಡಿದ್ದು ಸರಿ, ತನ್ನದು ಅಪುರವಾಣಿ-ಎಂದು ತಿಳಿಯತೊಡಗಿದ ಆ ಹೆಮ್ಮೆಯ ಜತೆಗೆ ಅಧಿಕಾರ ದಾನ, ಧನದಾನ, ವರ್ಚಸ್ಸಿನ ದಾನ ಮೊದಲಾದುವುಗಳನ್ನೂ ಮನಸ್ವೀ ಮಾಡಿದ ಪ್ರಜೆಗಳಿಗೆ ಏನೂ ತಿಳಿಯದೆಂದೂ ತಾನೇ ಸರ್ವಾಧಿಕಾರಿಯೆಂದೂ ಮೆರೆಯುವ ಆಸೆಯು ಮೂಡಿತು ಅರಸನಿಗೆ ಬರುತ್ತಿದ್ದ ಸಮ್ಮಾನವೆಲ್ಲ ತನಗೆ ಬರತೊಡಗಿದಮೇಲೆ-ತಾನು ಅಸಾಮಾನ್ಯ ವ್ಯಕ್ತಿ, ತನ್ನ ಮಾತೇ ಮಾತು-ಎಂಬ ಜಂಭ ಬೆಳೆಯಿತು. ದಿನ ಸರಿದಂತೆ ಕೃಷ್ಣಮೂರ್ತಿಯ ಹಿತೋಪದೇಶದ ವಿಚಾರದಲ್ಲಿ ಮೊದಲಿನ ಗೌರವವು ಉಳಿಯಲಿಲ್ಲ ಮೊದಲು ಮೊದಲು 'ಹಾಗಲ್ಲ ಹೀಗೆ' ಎಂದು ಕೃಷ್ಣಮೂರ್ತಿ ವಾದಿಸುತ್ತಿದ್ದ ಈಗೀಗ ವಾದಿಸುವಂತಿಲ್ಲ. "ಹೇಳಿದಷ್ಟು ಮಾಡಿ" ಎನ್ನುತ್ತಿದ್ದಾನೆ.

ವಾಮನರಾಯನಿಗಿರುವ ಭಯ ಒಂದೇ-ಸೇತುರಾಯನ ಸಂಗಡದ ಭೀತಿ, ಗುಲಾಲಿ ಟೋಪಿಗಳ ಭಯ. ಅವಕಾಶ ಸಿಕ್ಕಿದರೆ ಅವರನ್ನು ಮರಬೇಟೆಯಾಡುವುದಕ್ಕೂ ಆತ ಸಿದ್ಧ

ಒಂದು ವರ್ಷ ಕಳೆಯುತ್ತಲೇ ಗೊಂಡಾರಣ್ಯದಲ್ಲಿ, ಚಿಕ್ಕರುಡದಲ್ಲಿ ಜನವಾದಿ ಸಂಗಡ ಎಂಬ ಹೊಸ ಸಂಗಡ ಉದಯಿಸಿತು ಅದು ನಾಗಲಾಂಬೆಯ ಕಾಣಿಕೆ ಗುಪ್ತಗಾಮಿನಿಯಾಗಿ ಹರಿಯುತ್ತಿದ್ದ ಶ್ರಮವಾದಿ ಸಂಗಡ ಬಲವಾಗುತ್ತಾ ಹೋಯಿತು ಅದರ ಚಟುವಟಿಕೆಗಳು ಬಹಿರಂಗವಾಗತೊಡಗಿದವು ಅವರು ಕೊಡ ತೊಡಗಿದ ಉಪಟಳವು ಬೆಳೆಬೆಳೆದು 'ಕ್ಷುದ್ರಸಂಗಡ' ಎನ್ನಲಾರದ ಸ್ಥಿತಿಗೆ ಬಂದಿತ್ತು ರಾಜ್ಯದುದ್ದಕ್ಕೂ ಹಿಂಸೆ, ಸುಲಿಗೆ, ಅತ್ಯಾಚಾರಗಳು ಹಚ್ಚ ತೊಡಗಿದವು ಬಹಿರಂಗದಲ್ಲಿ ಮುಷ್ಕರಗಳು ಹೆಚ್ಚತೊಡಗಿದವು ಹೊರ ಸ್ವಾತಂತ್ರ್ಯದ ಡಕಾಯಿತರು ಇಂಥ ಕೊಲೆ, ಸುಲಿಗೆ, ಮಾಡುತ್ತಿದ್ದಾರೆ ಎಂಬ ಅಭಿಪ್ರಾಯವೂ ಬಂದಿತ್ತು ಆದರೆ ರಾಜ್ಯಸೂತ್ರವನ್ನು ಹಿಡಿದಿರುವವರಿಗೆ ದೊರಕುತ್ತಿರುವ ಸುದ್ದಿಗಳಿಂದ ಅವು ಬರಿಯ ಡಕಾಯಿತರ ಕೈವಾಡವಲ್ಲವೆಂದೂ, ಅವುಗಳ ಹಿಂದೆ ರಾಜಕೀಯ ಸಂಗಡವೊಂದರ ಕೈವಾಡವಿದೆಯೆಂದೂ ಅನುಭವಕ್ಕೆ ಬರತೊಡಗಿತು.

ಅಂಥ ಪ್ರಕರಣದಲ್ಲಿ ವನಶ್ರೀ ನದಿಯ ಉಪನದಿಯಾದ ಮಾನವತಿಯ ಮೇಲಿನ ಸೇತುವೆಯನ್ನು ಕಿಡಿಗೇಡಿಗಳಾರೋ ನಾಶಮಾಡಿದುದು ಮುಖ್ಯ ಸಂಗತಿಯಾಗಿದ್ದಿತು ಗೊಂಡಾರಣ್ಯದ ಪೂರ್ವೋತ್ತರ ಮತ್ತು ಪಶ್ಚಿಮೋತ್ತರ ಭಾಗಗಳನ್ನು ಒಂದುಗೂಡಿಸುವ ಆ ಸೇತುವೆಯನ್ನು ಸಿಡಿಮದ್ದಿನಿಂದ ನಾಶಮಾಡಿದುದರಿಂದ ಉಂಟಾದ ಹಾನಿ ಸ್ವಲ್ಪವಲ್ಲ ಮುಂದೆ ಬರುವುದು ಮಳೆಗಾಲ ಈ ನಾರಿಗೆಯು, ಸಂಪರ್ಕ ಕಡಿದುದರಿಂದ ಗೊಂಡಾರಣ್ಯದ ಈಶಾನ್ಯಕ್ಕೆ ಪೋಲೀಸು ರಕ್ಷಣೆ ಕೊಡುವ ಕೆಲಸ ಕಷ್ಟವಾಯಿತು. ಡಕಾಯಿತರಾದರೆ ಅವರಿಗೆ ಅದರಿಂದ ಹೆಚ್ಚಿನ ಪ್ರಯೋಜನವಿಲ್ಲ ಬದಲು ಆ ಭಾಗದಲ್ಲಿ ಗುಲಾಲಿ ಟೋಪಿಗಳ ತರಬೇತಿ ಶಿಬಿರಗಳು ನಡೆಯುತ್ತಿವೆಯೆಂದೂ ಅವರ ವರ್ಚಸ್ಸಿನಲ್ಲಿ ಆದಿವಾಸಿಗಳೂ ಸಿಕ್ಕಿದ್ದಾರೆಂದೂ ಸುದ್ದಿ ಬಂದಿತ್ತು. ಹೀಗಾಗಿ ವಾಮನರಾಯ ಅಲ್ಲಿಗೆ ವರಿಷ್ಠ ಅಧಿಕಾರಿಗಳನ್ನು ಕಳುಹಿಸಿ ಮಳೆಗಾಲಕ್ಕಿಂತ ಮುಂಚಿತವಾಗಿಯೆ ತಾತ್ಕಾಲಿಕವಾಗಿಯಾದರೂ ಸೇತುವೆಯನ್ನು ದುರಸ್ತಿ ಮಾಡುವ ಕೆಲಸ ತೊಡಗಿಸಿದ. ಅಲ್ಲಿಂದ ಮುಂದೆ ಆ ಕೆಲಸ ನಡೆಸುತ್ತಿದ್ದ ನೌಕರರಿಗೂ, ಕೆಲಸಗಾರರಿಗೂ ಜೀವಭಯ ತೊಡಗಿತು ರಾತ್ರಿವೇಳೆ ಅಜ್ಞಾತ ವ್ಯಕ್ತಿಗಳು ಬಂದು ಅವರನ್ನು ಬೆದರಿಸಿ, ಗಾಯಗೊಳಿಸಿ ಓಡಿಸುವ ಪ್ರಯತ್ನಮಾಡಿದರು. ಅವರ ರಕ್ಷಣೆಗೆ ಪೋಲೀಸು ದಳವನ್ನು ಕಳುಹಿಸಬೇಕಾಯಿತು ಅಲ್ಲಿಂದ ಮುಂದೆ ಅದೊಂದು ಕದನ ಭೂಮಿಯೇ ಆಯಿತು ನಿತ್ಯ ನಿತ್ಯ ಜೀವಹಾನಿಯಾಗತೊಡಗಿ ಕೆಲಸಗಾರರೂ ಇರಲು ಅಂಜತೊಡಗಿದರು. ಪೋಲೀಸರು ಬರಿಯ ರಕ್ಷಣೆಗಷ್ಟೇ ಕುಳಿತುಕೊಳ್ಳಲಾರದೆ ಸುತ್ತುಮುತ್ತಲಿನ ಪ್ರಾಂತ್ಯಗಳಲ್ಲಿ ಧಾಳಿಮಾಡಿ, ಹಿಂಸೆಗಾರರಿಗೆ ಆಶ್ರಯ ಸಿಗದಂತೆ ಮಾಡಲು ಯತ್ನಿಸಿದರು ಪಕ್ಷ, ಪ್ರತಿಪಕ್ಷಗಳೆರಡೂ ಹಿಂಸೆಯ ದಾರಿಯನ್ನು ಹಿಡಿದುದರಿಂದ ಹಲವಾರು ಹಳ್ಳಿಗಾಡಿನ ಜನ, ನಿರಪರಾಧಿಗಳು ಸಹ ಅತ್ಯಾಚಾರಕ್ಕೊಳಗಾದರು. ಗುಲಾಲಿ ಟೋಪಿಯವರ ಕೈಯೇ ಮೇಲಾಗಿ ಬಂದಿತು. ಆ ಸುದ್ದಿಯನ್ನೆಷ್ಟು ಅಡಗಿಸಿದರೂ, ವಿಕ್ರಮನಗರದ ಪತ್ರಿಕೆಗಳಲ್ಲಿ ಅತ್ಯಾಚಾರಗಳ ಕತೆ ಪ್ರಕಟಗೊಂಡು ಜನತೆಯ ಮನಸ್ಸು ಕೆರಳಿತು.

ಪೋಲೀಸರ ಪ್ರತಿಹಿಂಸೆಗಳಗೊಳಗಾದ ಗುಲಾಲಿ ದಳದವರ, ಹಳ್ಳಿಗಾಡಿನ ಜನಗಳ ಸುದ್ದಿಗಳು, ಚಿತ್ರಗಳು, ನಗರಗಳಲ್ಲಿ ಗುಪ್ತವಾಗಿ ಹಂಚಲ್ಪಟ್ಟುವು. ಗುಂಡಿನೇಟಿಗೆ ತುತ್ತಾದವರ, ಚಿತ್ರಹಿಂಸೆಗೊಳಗಾದವರ, ಮೂಗು ಕಿವಿ ಕೈ ಕಳೆದುಕೊಂಡವರ ಚಿತ್ರಗಳು, ಅವರದ್ದೆನ್ನುವ ಹೇಳಿಕೆಗಳು ಪ್ರಕಟಗೊಂಡು ನಾಗರಿಕರ ಕೈಗೆ ಬೀಳತೊಡಗಿದಾಗ, ವಾಮನರಾಯನ ಪೋಲೀಸು ಸೇನೆ ಜನಗಳ ಮೇಲೆ ಅತ್ಯಾಚಾರ ನಡೆಯಿಸುತ್ತಿದೆ ಎಂಬ ಅಭಿಪ್ರಾಯ ಹುಟ್ಟದಿದ್ದೀತೆ ? ಸಾಲದುದಕ್ಕೆ ಈ ಗೆರಿಲ್ಲಾ ಕ್ಷೇತ್ರ ಗೊಂಡಾರಣ್ಯಕ್ಕೂ ವಿಸ್ತರಿಸಿದೆ, ಅಲ್ಲಿನ ಆದಿವಾಸಿಗಳನ್ನು ಪೋಲೀಸರು ಹಿಂಸಿಸುತ್ತಿದ್ದಾರೆ—ಎಂದು ತಿಳಿದು ಬರುತ್ತಲೇ ಅನೇಕ ರಾಜಕೀಯ ಪ್ರಮುಖರು ತಳಮಳಗೊಂಡರು ಕೆಲವರು ಸತ್ಯವನ್ನು ತಿಳಿಯಲು ಅಲ್ಲಿಗೇನೆ ಪ್ರವಾಸ ಕೈಗೊಂಡರು ಸರಕಾರಿ ಪ್ರಕಟಣೆಗಳಿಂದ ಜನಕ್ಕೆ ನಂಬಿಕೆ ಹುಟ್ಟದಾಯಿತು

ಅರಣ್ಯವಾಸಿಗಳೇಕೆ ರಾಜಕೀಯಕ್ಕೆ ಸೇರುತ್ತಾರೆ? ಅವರನ್ನು ಕೆರಳಿಸಿದವರು ಪೋಲೀಸರೇ ಶಾಂತ ಸ್ವಭಾವಿಗಳಾದ ಅವರು ಅಜ್ಞಾನಿಗಳು, ಗುಲಾಲಿ ಪಂಗಡಕ್ಕೂ ಸೇರುವವರಲ್ಲ ಇನ್ನಾವುದಕ್ಕೂ ಸೇರುವವರಲ್ಲ-ಎಂಬುದು ಸಾಮಾನ್ಯರ ನಂಬಿಕೆ. ಆದರೂ ಸರಕಾರದ ಕಣ್ಣು ತಪ್ಪಿಸಿ ಬರತೊಡಗಿದ ಸಾಕ್ಷಿಗಳಿಂದ ಅವರೂ ಬಂಡಾಯದಲ್ಲಿ ಸೇರಿದ್ದಾರೆಂಬ ತಿಳಿವು ಉಂಟಾಯಿತು

ಅಂತು ಮಳೆಗಾಲದೊಳಗೆ ಮಾನವತಿ ನದಿಯ ಸೇತುವೆ ದುರಸ್ತಿಯಾಗಲಿಲ್ಲ ಜೀವದ ಭಯದಿಂದ ಒಂದು ಮಳೆಗಾಲವೆಲ್ಲಾ ಈಶಾನ್ಯ ಗೊಂಡಾರಣ್ಯ ಉಳಿದ ಭಾಗದ ಸಂಪರ್ಕ ಕಡಿದುಕೊಂಡಿತು ಬಳಸು ದಾರಿಯಿಂದ ಪೋಲೀಸರು ಹೋಗಬೇಕು, ಸರಬರಾಯಿ ಹೋಗಬೇಕು ದಾರಿಯುದ್ದಕ್ಕೂ ಕಾಡುಗಳೇ. ಹೆಜ್ಜೆಹೆಜ್ಜೆಗೂ ಭಯಭೀತಿ ಇದ್ದಿತು-ಹೋಗುವವರು ಕಿಗ್ಗಳ್ಳಿಗೆ ಹೋಗಿ, ಅಲ್ಲಿಂದ ಬೆಟ್ಟವೇರಿ ಉತ್ತರಕ್ಕೆ ಹೋಗಿ ತಿರುಗಿ ದಕ್ಷಿಣಕ್ಕೆ ಇಳಿಯಬೇಕು. ಇದರಿಂದ ಕಿಗ್ಗಳ್ಳಿಯು ಪ್ರಖ್ಯಾತಿಗೆ ಬರುವಂತಾಯಿತು ಹೋಗುವ ದಾರಿಗನಾಗಲೀ, ಸರ್ಕಾರಿ ನೌಕರನಾಗಲೀ ಒಂದು ರಾತ್ರಿ ಕಿಗ್ಗಳ್ಳಿಯಲ್ಲಿ ತಂಗಬೇಕು. ಅನ್ನ ವಸತಿ ಪಡೆಯುವುದಕ್ಕೆ ಪಟ್ಟೆದಾರರ

ಮನೆಗೆ ಹೋಗಬೇಕು ಸುತ್ತುಮುತ್ತಲಿನ ಜನ ಅಷ್ಟು ಅನುಕೂಲ ವಂತರಲ್ಲ ಅನುಕೂಲವಂತರಾದ ಇವರು ಬಂದವರಿಗೆ ಅನ್ನ, ವಸತಿ ಕೊಡುವುದಲ್ಲದೆ, ಒಳದಾರಿಯಲ್ಲಿ ಕರೆದೊಯ್ಯುವುದಕ್ಕೆ ಜನಗಳನ್ನು ಕೊಡಬೇಕು ಇದೇ ವೇಳೆಯಲ್ಲಿ ಈಶಾನ್ಯಭಾಗದಲ್ಲಿ ಹಲವಾರು ಶ್ರೀಮಂತರ ಮನೆಗಳು ಸುಲಿಗೆಯಾಗುವುದನ್ನು ಕೇಳಿದ ಜಯದೇವ, ವಾಮದೇವರುಗಳ ಮನಸ್ಸಿನಲ್ಲಿ, ಇದಕ್ಕೆ ಗುಲಾಲಿ ಟೋಪಿಯವರೇ ಕಾರಣ ಎಂಬ ನಂಬಿಕೆ ಮೂಡಿತ್ತು. ಆದುದರಿಂದ ತಮ್ಮ ಸರಕಾರಕ್ಕೆ ನೆರವು ನೀಡುವುದು ತಮ್ಮ ಕರ್ತವ್ಯವೆಂದೂ ತಿಳಿದರು

'ಆದಿವಾಸಿಗಳು ಸಹ ಈ ಗೊಂದಲದಲ್ಲಿ ಸೇರಿದ್ದಾರೆ' ಎಂಬ ಸುದ್ದಿ ಇವರಿಗೂ ಬಂದಿತ್ತು ಅವರಿಗೆ ಅದರ ಅರ್ಥ ಆಗುವಂತಿರ ಲಿಲ್ಲ ಅವರ ಮನಸ್ಸಿಗೂ ಅದು ಸಮ್ಮತವಿಲ್ಲ ಹೀಗಾಗಿ ಅವರು ಮುಕ್ಕಣ್ಣನನ್ನು ಕರೆದು " ನೋಡು–ನೀನು ನಮ್ಮ ಮಲೆಯವರಿಗೆಲ್ಲಾ ತಿಳಿಸಬೇಕು - ಯಾರು ಏನೇ ಮಾಡಲಿ ಅವರು ಬಂಡಾಯಕ್ಕೆ ಹೋಗಬಾರದು. ಬಂಡಾಯ ಮಾಡಿದವರಿಗೆ ಆಶ್ರಯವನ್ನು ಕೊಡ ಬಾರದು " ಎಂದು ನುಡಿದರು ಆ ಸಂದೇಶವನ್ನು ಕಟ್ಟಿಕೊಂಡು ಮುಕ್ಕಣ್ಣ ಗೊಂಡಾರಣ್ಯಕ್ಕೆ ಹೋದ ಅವನಿಗೂ ತಮ್ಮ ಜನರು ಅಂತಹ ಕಲಸ ಮಾಡಲಾರರೆಂದೇ ಅನಿಸಿತ್ತು. ಅಂತೂ ಆತ ಹೋಗಿ ಮಲೆಯವರಿಗೆಲ್ಲಾ ಧನಿಗಳ ಆಜ್ಞೆ ತಿಳಿಸಿ, ಅವರಿಗೆ ರಕ್ತಸಿವಾಸೆ ಸೋಂಕಿಲ್ಲ ಎಂಬುದನ್ನು ತಿಳಿದುಕೊಂಡು ಊರಿಗೆ ಮರಳಿದ, ಧನಿಗಳಿಗೆ ಸುದ್ದಿ ಮುಟ್ಟಿಸಿದ

ಮಳಗಾಲದ ಬಿರುಸು ಕಳದ ಸ್ವಲ್ಪ ದಿನಗಳಲ್ಲಿಯೇ ಒಂದು ದಿನ, ಇದ್ದಕ್ಕಿದ್ದಂತೆಯೇ ಡಿ. ಐ ಜಿ ದೊರಸ್ವಾಮಿ ಕೆಲವೊಂದು ಅನು ಯಾಯಿಗಳೊಡನೆ ವ್ಯಾಪಾರಿಗಳ ಸೋಗು ಹಾಕಿಕೊಂಡು, ಕುದುರೆ ಗಳಮೇಲೆ ಬಟ್ಟೆಗಳ ಹೇರು ಹೊರಿಸಿಕೊಂಡು ಕಿಗ್ಗಳ್ಳಿಗೆ ಬಂದ. ಬರುವಾಗ ಸಂಜೆಯಾಗಿತ್ತು. ಎಲ್ಲರಂತೆ ಅವರು ಸಹ ಪಟ್ಟೆದಾರರ ಮನೆಯ ಚಾವಡಿಗೆ ರಾತ್ರಿ ಕಳೆಯುವುದಕ್ಕೆ ಬಂದರು. ಬಂದವರನ್ನು ಬರಿದೇ ಕಳುಹಿಸುವ ಮನೆ ಅದಲ್ಲ ಎಂದಿನಂತೆ ಊಟ ಹಾಕಿ ಉಪ ಚರಿಸಿದರು. ದೊರೆಸ್ವಾಮಿ ನಿಜಕ್ಕೂ ಸಾಹುಕಾರನೆಂದೇ ನಂಬಿದ

ಅವರು ಅವನೊಡನೆ "ಸಾಹುಕಾರರೇ, ಮಳೆಗಾಲ ಕಳೆಯುತ್ತಾ ಬಂದುದು ನಿಜ. ಆದರೂ ಈ ಸಮಯದಲ್ಲಿ ಎಲ್ಲೆಡೆಯಲ್ಲಿ ಸುಲಿಗೆ, ದರೋಡೆಗಳು ನಡೆಯುತ್ತಿರುವಾಗ ನೀವು ವ್ಯಾಪಾರಕ್ಕೆ ಹೊರಟದ್ದು ಸಮನಲ್ಲ. ಇದು ಅನಾಯಕವಾದ ರಾಜ್ಯ, ಸರಕಾರ ಇದ್ದೂ ಇಲ್ಲದಂತಾಗಿದೆ. ನಿಮಗೆ ವ್ಯಾಪಾರ ಹೆಚ್ಚೇ? ಜೀವ ಹೆಚ್ಚೇ?" ಎಂದು ಪ್ರಶ್ನಿಸಿದರು ಮುಖಂಡ ದೊರೆಸ್ವಾಮಿ, "ನಮಗ ಯಾರು ಏನು ಮಾಡುತ್ತಾರೆ? ನಾವು ವ್ಯಾಪಾರಕ್ಕೆ ಬಂದವರು ನಾವು ಯಾವ ಬಣ್ಣದ ಟೋಪಿಯೂ ಇಲ್ಲದವರು. ಅಂಥವರಿಗೆ ಭಯವೇನು? ನಿಮ್ಮ ಮಲೆಗಳಲ್ಲಿ ಬಂಡಾಯಗಾರರು ಇದ್ದಾರೆಯೋ?" ಎಂದು ಕೇಳಿದ.

"ಇಲ್ಲಿಲ್ಲ, ಮುಂದೆ ಅಂಥ ಸ್ಥಳಗಳೇ ಇವೆ ಅಲ್ಲೆಲ್ಲ ಅನಾಯಕ ರಾಜ್ಯವೇ"

ಆತ ವಿಷಯ ತಿರುಗಿಸಿ ರಾಜಕೀಯವನ್ನು ಎತ್ತಿಕೊಂಡ; ಸರಕಾರವನ್ನು ದೂರಿದ, ತೆರಿಗೆಗಳ ಹೆಚ್ಚಳವನ್ನು ಕುರಿತು ದೂರಿದ. ಪ್ರಧಾನಿಗಳನ್ನೂ ದೂರಿದ ಆಮೇಲೆ "ಇಂಥಾ ಸರಕಾರಕ್ಕೆ ಬುದ್ಧಿ ಕಲಿಸಲು ಗುಲಾಲಿ ಟೋಪಿಯವರೇ ಬೇಕು" ಎಂದ. ಪಟ್ಟೆದಾರರ ಮನಸ್ಸಿನ ಒಲ ಯಾವ ಕಡೆಗೆಂದು ತಿಳಿಯಲು ಆತ ಹೀಗೆ ಮಾಡಿದ. ಅದಕ್ಕೆ ಪ್ರತಿಯಾಗಿ ಅವರು "ನಮ್ಮ ಕಷ್ಟ, ಕಾರ್ಪಣ್ಯ ಏನೇ ಇರಲಿ– ಊರಿಗೊಂದು ಸರಕಾರವಿಲ್ಲದಿದ್ದರೆ ರಾಜ್ಯ ನಡೆಯದು ಹೀಗೆ ಕೊಲೆ, ಸುಲಿಗೆಗಳನ್ನು ಮಾಡಿ ಯಾರಿಗೂ ಸುಖ ಶಾಂತಿ ಸಿಗದು. ನಮ್ಮ ಮಲೆಯ ದೊಂಡಾಲರಿಗೆ, ಯಾರು ಏನೇ ಅಂದರೂ, ಅಂಥ ಕೆಲಸಕ್ಕೆ ಸೇರಬಾರದು ಎಂದಿದ್ದೇವೆ. ಅವರು ತಮ್ಮ ದೈವಗಳ ಮುಂದೆ ಹಾಗೆ ಮಾಡುವುದಿಲ್ಲವೆಂದು ಪ್ರಮಾಣ ಮಾಡಿದ್ದಾರೆ ಅವರ ನಂಬಿಕೆ ನಮಗಿದೆ ನೀವು ಮುಂದೆ ಹೋಗುವುದು ಒಳ್ಳೆಯದಲ್ಲ ಮುಂದಿನ ಊರುಗಳ ಪರಿಸ್ಥಿತಿ ನಮಗೂ ಸಮನಾಗಿ ತಿಳಿಯುತ್ತಲಿಲ್ಲ. ಇಲ್ಲೇ ಏನಾದರೂ ವ್ಯಾಪಾರ ಮಾಡಿಕೊಂಡು ಹಿಂದಿರುಗುವುದು ಒಳ್ಳೆಯದು" ಎಂದು ಉಪದೇಶಿಸಿದರು.

ಈ ಮಾತುಗಳನ್ನು ಮುಕ್ಕಣ್ಣ ಕೇಳುತ್ತಿದ್ದ. ಮಾತಿನ ಚಪಲಕ್ಕೆ ಸಿಕ್ಕಿ "ಈ ಒಂದು ಸುದ್ದಿ ನಿಜವೇ?" ಎಂದು ಕೇಳಿದ.

" ಏನದು ?"

" ನನಗೆ ದೊಂಡಾಲರಿಂದ ತಿಳಿದ ಸುದ್ದಿ ! ಅವರಲ್ಲಿ ಕೆಲವರಿಗೆ ಆ ಜನ ಮಲೆಗಳ ಸುದ್ದಿ ತಿಳಿದ ಹಾಗೆಯೂ ಕಾಣುತ್ತಿದೆ ಅಲ್ಲಿನವರು ಕೆಲವರಾದರೂ ಬಂಡಾಯಗಾರರ ಒಟ್ಟಿಗೆ ಸೇರಿರಬೇಕು ಸುದ್ದಿ ಹೇಗಿದ್ದರೂ ಆ ಜನಗಳಿಗೆ ಸಿಟ್ಟು ಬಂದದ್ದು ನಿಜ ಅಲ್ಲೆಲ್ಲ ಸುದ್ದಿಯಂತೆ . ಸರಕಾರ ಕಾಡುಗಳ ಮಧ್ಯ ರಸ್ತೆ ಕಡಿಸತೊಡಗಿದೆ. ಇನ್ನು ಮುಂದೆ ಕಾಡುಗಳಿಂದ ಅವರನ್ನೆಲ್ಲಾ ಓಡಿಸುತ್ತಾರೆ ಎಂಬ ಸುದ್ದಿ ಹರಡಿಕೊಂಡಿದೆ. ಅದರಿಂದಲೇ ಅವರೆಲ್ಲ ಸಿಟ್ಟಾಗಿದ್ದಾರೆ ಸುದ್ದಿ ಎಷ್ಟು ನಿಜವೋ ನನಗೂ ತಿಳಿಯದು ಅವರಿಗೆ ರಸ್ತೆಗಳು ಬೇಡವಾದರೆ ಬೇಡ, ಅಲ್ಲಿಗೆ ದಾರಿಮಾಡಿ ಏನಾಗಬೇಕು ? ಬುದ್ಧಿ ತಿಳಿಯದ ಜನಗಳನ್ನು ಯಾಕೆ ಸಿಟ್ಟುಗೊಳಿಸಬೇಕು ? ಪ್ರಾಯಶಃ ಈ ಸಂದರ್ಭವನ್ನು ನೋಡಿಯೇ ಯಾರಾದರೂ ಅವರನ್ನು ಪುಸಲಾಯಿಸಿರಬಹುದು."

ಆ ಮಾತಿಗೆ ದೊರೆಸ್ವಾಮಿಯ ಕಿವಿ ನಿಮಿರಿತು. ಅವನೂ ಆ ಸಂಗತಿ ತಿಳಿದಿದ್ದ. ಸರಕಾರದ ಮಾರ್ಗ ವಿಸ್ತರಣದ ಕ್ಷುದ್ರಯೋಜನೆ, ಗುಲಾಲಿ ಟೋಪಿಯವರ ಪಾಲಿಗೆ ವ್ಯಷ್ಟಾನ್ನವಾಗಿತ್ತು ಇದನ್ನು ಕುರಿತು ಆತನು ಪ್ರಧಾನಿಯೊಂದಿಗೆ ತರ್ಕಿಸಿದ್ದ ಅವನು " ಸಮನಾದ ಮಾರ್ಗಗಳಿಲ್ಲದೇ ಅರಣ್ಯ ಸಂಪತ್ತು ವ್ಯರ್ಥವಾಗುತ್ತಿದೆ" ಎಂದು ಉತ್ತರವಿತ್ತಿದ್ದನು ರಾಜಕೀಯ ವೃತ್ತಗಳಲ್ಲಿ ಈ ವಿಷಯದಲ್ಲಿ ಬೇರೆ ಪುಕಾರುಗಳೂ ಹಬ್ಬಿಕೊಂಡಿದ್ದುವು ' ಗೊಂಡಾರಣ್ಯದ ವನಸಂಪತ್ತನ್ನು ಕಡಿದು, ಮಾರಿ, ಕೆಲವರು ತಮ್ಮ ಜೇಬು ತುಂಬಿಸಿಕೊಳ್ಳುತ್ತಿದ್ದಾರೆ. ಅರಣ್ಯ ಮಂತ್ರಿ ಖೇತಕರಿಗೂ ಇನ್ನು ಕೆಲವು ವ್ಯಾಪಾರಿಗಳಿಗೂ ಅದರಲ್ಲಿ ಪಾಲು ಉಂಟು '–ಎಂಬ ಸುದ್ದಿ ಹಬ್ಬಿತ್ತು. ಅಂತೂ ಸಾಧ್ಯವಾದಲ್ಲಿ ಆದಿವಾಸಿಗಳ ಅಸಂತೃಪ್ತಿಯ ಕಾರಣವನ್ನು ನೀಗಿಸುವುದೊಳ್ಳೆಯದೆಂಬ ಅಭಿಪ್ರಾಯ ಅವನಿಗೂ ಆಯಿತು. ಮುಂದೆ ತುಸು ಹೊತ್ತು ಮಾತನಾಡಿ, ಅವರೆಲ್ಲಾ ಮಲಗಿಕೊಂಡರು. ರಾತ್ರಿ ಕಳೆಯಿತು. ಬೆಳಗಿನ ಪಯಣ ನಿಶ್ಚಯವಾಗಿತ್ತು. ಆದರೆ ಮಾರ್ಗದರ್ಶನಕ್ಕೆ ಪಟ್ಟೇದಾರರೇ ಜನವನ್ನು ಕೊಡಬೇಕಾಯಿತು. ಇದಕ್ಕೆಲ್ಲಾ

ನುರಿತವನೆಂದರೆ ಮುಕ್ಕಣ್ಣನೇ ಸುತ್ತಲಿನ ಗ್ರಾಮಗಳೂ, ಮಳೆಗಳೂ ಅವನಿಗೆ ಪರಿಚಯದವು ಎಂಬುದರಿಂದ ಅವನನ್ನೇ ಕಳುಹಿಸಿಕೊಟ್ಟರು ಅವರೆಲ್ಲ ಹೇರು ಹೊರಿಸಿಕೊಂಡು ಬಿಟ್ಟಿಪತ್ತಿ, ಬಿಟ್ಟಿ ಇಳಿದರು ಒಂದೊಂದಾಗಿ ಹಳ್ಳಿಗಳನ್ನು ದಾಟುತ್ತಾ ಹೋದರು ವ್ಯಾಪಾರಕ್ಕಾಗಿ ಬಂದವರು ನಡುವೆ ಎಲ್ಲೂ ನಿಂತು ವ್ಯಾಪಾರ ಮಾಡದೆ ಹೋದುದು ಮುಕ್ಕಣ್ಣನಿಗೂ ಆಶ್ಚರ್ಯವನ್ನು ಹುಟ್ಟಿಸಿತು ಅವರ ಒತ್ತಾಯದಿಂದ ಮೂರು ದಿನಗಳ ತನಕ ಅವರ ಜತೆಗೆ ಮುಕ್ಕಣ್ಣ ಹೋದ ಅನಂತರ ಸಾಹುಕಾರ ಮುಖಂಡ "ಇನ್ನು ನೀನು ಊರಿಗೆ ಹೋಗು ಮುಂದಿನ ದಾರಿ ನಮಗೆ ಚೆನ್ನಾಗಿ ತಿಳಿದದ್ದು" ಎಂದ ನಿಜಕ್ಕೂ ಆ ಹಳ್ಳಿ ಮತ್ತು ಮುಂದಿನ ಹಳ್ಳಿಗಳು ಬಂಡಾಯಕ್ಕೆ ಹೆಸರು ಪಡೆದಿದ್ದುವು ಅಲ್ಲೇ ಒಂದೆರಡು ದರೋಡೆಗಳೂ ಆಗಿದ್ದುವು ಅವರು 'ಹೋಗು' ಎನ್ನುವಾಗ ಸಂಜೆಯು ಆಗಿತ್ತು ಅವರಂತು ಮುಂದು ವರಿದರು ತಾನು 'ಏನುಮಾಡಬೇಕು? ಎಲ್ಲಾದರು ರಂಬಾರರ ಮನೆಯಿದ್ದರೆ ಹುಡುಕಿ ಉಳಿದುಕೊಳ್ಳುತ್ತೇನೆ' ಎಂದುಕೊಂಡ. ಹಾಗೆ ಒಂದು ಮನೆಯನ್ನು ಹುಡುಕಿ ಆಶ್ರಯವನ್ನು ಪಡೆಯುವಾಗ ಕತ್ತಲೂ ಆಯಿತು

ಹೋದುದು ಜಾತಿಯವರ ಮನೆಗೆ, ಆದುದರಿಂದ ಊಟ ಉಪಚಾರವು ದೊರೆಯಿತು. ನಿದ್ದೆಗೆಂದು ಮಲಗಿಕೊಂಡರೆ ಅವನಿಗೆ ಸಮನಾಗಿ ನಿದ್ದೆಯೂ ಬಾರದು ಏನೇನೋ ಅನುಮಾನ ತಾನು ಕರೆದುಕೊಂಡು ಬಂದವರ ವಿಚಾರದಲ್ಲೇ ಆ ಅನುಮಾನ ಆ ಸಾಹುಕಾರ ಮುಖಂಡನಿಗೆ ಉಳಿದವರು, ಸ್ವೈರಿತು ಕೊಡುತ್ತಿದ್ದ ಸಲಾಮುಗಳನ್ನು ಕಂಡು, ಅವರು ಸರಕಾರದವರೇ–ಎಂಬ ಅನುಮಾನ ಅಂಥವರ ಮುಂದೆ ತಾನು ಪುಲೆವಾಸಿಗಳ ಸುದ್ದಿ ಹೇಳಬಾರದಿತ್ತೋ ಎಂಬ ಸಂಕೋಚ. ಅಂತೂ ನಿದ್ರೆಯಿಲ್ಲದೆಯೇ ರಾತ್ರಿ ತಳ್ಳುತ್ತಿದ್ದಾಗ, ನಡುರಾತ್ರಿ ಕಳೆದ ಮೇಲೆ ದೂರದಿಂದ ಹತ್ತೆಂಟು ಬಾರಿ ಗುಂಡು ಹಾರಿಸಿದ ಸದ್ದು ಕೇಳಿಸಿತು ಆಗ ಅವನಿಗೆ ಜೀವದಲ್ಲಿ ಜೀವವಿರಲಿಲ್ಲ ಮನೆಯವರಿಗೂ ಆ ಸದ್ದು ಕೇಳಿಸಿರಬೇಕು ಕೇಳಿಯೂ ಅವರು ಏಳಲಿಲ್ಲ, ಮಾತನಾಡಲಿಲ್ಲ. ತಾನು ಕರದುಕೊಂಡು ಬಂದ ವ್ಯಾಪಾರಿ

ಗಳನ್ನು ಯಾರೋ ತಡೆದು ಹಿಂಸಿಸಿರಬೇಕು–ಎಂಬ ಊಹೆ ಕಟ್ಟಿ ಕೊಂಡ ನಿದ್ದೆಗೆಟ್ಟು, ಬೆಳಕು ಹರಿಯಿತು. ಬೆಳಗಾದ ಮೇಲೆ ಮನೆಯವರನ್ನು ಮಾತನಾಡಿಸಿದ ಅವರು "ಹೌದಪ್ಪ, ಬಯಲಿನ ಆಚೆ ಗುಂಡಿನ ಧ್ವನಿ ಕೇಳಿದ್ದು ನಿಜ ನಮಗೆ ಹೋಗುವುದಕ್ಕೆ ಭಯ ಪೋಲೀಸರು ಯಾರೋ ಬಂದಿರಬೇಕು ಇಲ್ಲಿನ ಸಂಗತಿ ಸ್ವಾರಸ್ಯವಿಲ್ಲ ಹೊರಗಿಂದ ಯಾರಾರೋ ಬಂದು ಆಶ್ರಯ ಕೇಳು ತ್ತಾರೆ. ಕೊಡುವುದೂ ಕಷ್ಟ ಕೊಡದಿದ್ದರೆ ಅವರು ಪೀಡಿಸುತ್ತಾರೆ. ಕೊಟ್ಟರೆ ಹೋದ ಮೇಲೆ ಪೋಲೀಸರು ಬಂದು 'ಯಾರು ಬಂದರು? ಯಾರು ಇದ್ದರು? ಯಾಕೆ ಬಿಟ್ಟಿರಿ?' ಎಂದು ಹಿಂಸಿಸುತ್ತಾರೆ. ನೀನು ರಂಬಾರನಾದುದಕ್ಕೆ ಇರುವುದಕ್ಕೆ ಬಿಟ್ಟೆವು ಇಲ್ಲವಾದರೆ ನಮಗೂ ಧೈರ್ಯವಿರಲಿಲ್ಲ ಒಟ್ಟು—ಇಂದು ಸುಖವಿಲ್ಲ ಯಾರ ಜೀವ ಬಲಿಕೊಂಡರೋ ನಿನ್ನೆ, ಏನೋ ಅನರ್ಥವಾದದ್ದು ನಿಜ ನಾವು ಹೋಗಿದ್ದರೆ ನಮಗೂ ಕೇಡಿತ್ತು ನೀನು ನಿನ್ನ ಊರಿಗೆ ಹೋಗಣ್ಣ ನಾವು ಹುಟ್ಟಿದ ಹಳ್ಳಿ ಬಿಡಲಾರೆವು, ಇಲ್ಲಿ ಇರಲಾರೆವು. ಒಂದು ದಿನವೂ ನಮಗೆ ಭಯ ತಪ್ಪಿದ್ದಿಲ್ಲ ಒಟ್ಟಿಗೆ ಕಲಿಕಾಲ ಬಂದಿದೆ" ಎಂದು ಅಂದರು ಮುಕ್ಕಣ್ಣ ಚಿಂತೆಯಿಂದಲೇ ಆ ಸ್ಥಳವನ್ನು ಬಿಟ್ಟ. ಅವನ ಮನಸ್ಸು ತಳಮಳಗೊಂಡಿತು ಹಿಂದಣ ರಾತ್ರಿ ನಡೆದದ್ದೇ ನೆಂದು ತಿಳಿಯುವ ಆತುರ ತಾಳಿತು 'ಬಂದಿದ್ದೇನೆ, ಬಂದ ಮೇಲೆ ತಿಳಿದೇ ಹೋಗುತ್ತೇನೆ' ಎಂಬ ಹಟವನ್ನು ತೊಟ್ಟಿತು ಆ ಮನೆ ಯನ್ನು ಬಿಟ್ಟು ಮುಂದಣ ಬಯಲು, ಆಚಿನ ಗುಡ್ಡವನ್ನು ದಾಟಿ ಹೋದ ಅಲ್ಲಿ ಹತ್ತೆಂಟು ಮನೆಗಳ ಕೇರಿಯೊಂದು ಸಿಕ್ಕಿತು. ಕೇರಿಯ ಜನಗಳ ಮುಖ ಭಯ ಭೀತಿಯಿಂದ ತುಂಬಿತ್ತು ಅವರೊಡನೆ "ನಿನ್ನೆ ನಡೆದದ್ದು ಏನು?" ಎಂದು ವಿಚಾರಿಸಿದ ದುಃಖದ ಸುದ್ದಿ ಹೊರಟಿತು ಗುಲಾಲಿ ಟೋಪಿಯವರು ಯಾರೋ ಕೆಲವರು ಅಲ್ಲಿಗೆ ಬಂದಿದ್ದ ರೆಂದೂ, ಅವರನ್ನು ಹುಡುಕಿ ಪೋಲೀಸರು ಬಂದಿದ್ದರೆಂದೂ ತಿಳಿ ಯಿತು ಹಾಗೆ ನಾಲ್ಕು ದಿನಗಳ ಹಿಂದೆ ಅಲ್ಲಿಗೆ ಯಾರೋ ಬಂದುದು ನಿಜ ಕೇರಿಯವರು ಅವರಿಗೆ ಆಶ್ರಯ ಕೊಟ್ಟುದೂ ನಿಜ ಅದಕ್ಕೆ ರಾತ್ರಿ ಪೋಲೀಸರು ಕೇರಿಯನ್ನು ನುಗ್ಗಿ, ಕೆಲವರನ್ನು ಹೊಡೆದು,

ಬಡಿದು, ಅಟ್ಟಿಕೊಂಡು ಹೋದರು. ಗುಂಡು ಹೊಡೆದುದು ಅಲ್ಲಲ್ಲ. ತುಸು ದೂರದಲ್ಲಿ. ತಮ್ಮ ಜನಗಳನ್ನು ಕಳೆದುಕೊಂಡ ಕೇರಿಯವರು ಬೆಳಕಾದ ಮೇಲೆಯೂ ಹುಡುಕಿಕೊಂಡು ಹೋಗಲು ಅಂಜುತ್ತಿದ್ದಾರೆ. ಮುಕ್ಕಣ್ಣ ಹತ್ತು ಪ್ರಶ್ನೆಗಳನ್ನು ಕೇಳಿದರೆ ಒಂದಕ್ಕೂ ಸಮನಾದ ಉತ್ತರ ಕೊಡುವ ಧೈರ್ಯ ಅವರಿಗೆ ಇದ್ದಿರಲಿಲ್ಲ ಇವನನ್ನೂ ಅವರು ನಂಬಲಾರರು "ಹೋಗುವ, ಹುಡುಕುವ" ಎಂದು ಹೇಳಿದರೆ ಬರಲಾರರು. ಈತ 'ತಾನು ಕಿಗ್ಗಳ್ಳಿಯವನು ಪಟ್ಟೆದಾರರ ಒಕ್ಕಲು. ಜಾತಿಯಲ್ಲಿ ರಂಬಾರ' ಎಂದೆಲ್ಲ ನುಡಿದ ಮೇಲೆ ಅಂಜಿ, ಅಂಜಿ ಅವನ ಹಿಂದೆ ಹೊರಟರು

ಹಿಂದಣ ರಾತ್ರಿ ಗುಂಡಿನ ದನಿ ಕೇಳಿಸಿದ ದಿಕ್ಕಿಗೆ ಸಾಗಿದರು ಸಾಗುವಾಗಲೂ ಎಷ್ಟು ಭಯ! ಏನು ಕಾಣಲು ಸಿಕ್ಕೀತು—ಎಂದು ಊಹಿಸಬಲ್ಲವರಂತೆಯೇ ಹೋದರು ಎದುರಿಗೊಂದು ಬೆಟ್ಟ, ಅದರ ಕೆಳಭಾಗವೆಲ್ಲಾ ಹೊದರುಗಳಿಂದ ತುಂಬಿತ್ತು. ಮೇಲೆ ತೀರ ದಟ್ಟನಾದ ಕಾಡು ಅಲ್ಲಿಯತನಕ ಹೋಗಬೇಕಾಗಿರಲಿಲ್ಲ ಹೋಗುವ ಮುಂಚೆಯೇ ಹೊದರುಗಳ ನಡು ನಡುವೆ ಗುಂಡಿಗೆ ತುತ್ತಾಗಿ ಬಿದ್ದ ತನ್ನ ಜನಗಳನ್ನು ಕಂಡು ಚೀರಿದರು ಆಚೆ, ಈಚೆ, ಕಣ್ಣು ಹೊರಳಿಸಿ ಹತ್ತೆಂಟು ಮೃತರನ್ನು ಗುರುತಿಸಿದರು ಹೆಚ್ಚಿನವರಿಗೆ ಹಿಂದಿನಿಂದ ಬೆನ್ನಿಗೆ, ಕತ್ತಿಗೆ ಗುಂಡಿನೇಟು ಬಿದ್ದಿತ್ತು ಹಿಂದಣ ರಾತ್ರಿಯ ಬೆಳುದಿಂಗಳು ಇಂಥ ನರಬೇಟೆಗೆ ಅನುಕೂಲವಾಯಿತು. ಕೇರಿಯುವರು ಬಿದ್ದ ಹೆಣಗಳನ್ನು 'ಅಣ್ಣ', 'ತಮ್ಮ' ಎಂದು ಗುರುತಿಸಿ ವಿಕಟವಾಗಿ ಚೀರಿದರು, ಅತ್ತರು ಅವರನ್ನು ಹಿಂಬಾಲಿಸಿ ಬಂದ ನಾಲ್ಕಾರು ಮಡದಿಯಂದಿರು, ತಾಯಂದಿರು ಕೂಡಿಕೊಂಡರು. ಅದರಲ್ಲಿ ಒಬ್ಬಳು ತಾಯಿ—ದಾರಿಯ ಮಗ್ಗುಲು ಕಣಿವೆಯೊಂದರಲ್ಲಿ ಬಿದ್ದ ತನ್ನ ಹದಿನಾರು ವರ್ಷದ ಮಗನನ್ನು ಕಂಡು ಮಾಡಿದ ಚೀತ್ಕಾರ ಮುಕ್ಕಣ್ಣನ ಎದೆಯನ್ನೇ ಬಿರಿಯಿತು. ಅಲ್ಲಿಗೆ ಓಡಿದ. ಇನ್ನೂ ಉಸಿರಾಡುತ್ತಿತ್ತು ಆ ಜೀವ. ತಾಯಿಯನ್ನು ಕಂಡಮೇಲೆಯೇ, ತನ್ನ ಕಣ್ಣಿನ ಹೊಳಪು ಕಳೆದುಕೊಳ್ಳುವೆನೆಂದು ಅದು ಕಾದಿತ್ತು. ಅವರೆಲ್ಲರಿಗೆ ಶವಗಳನ್ನು ಸಾಗಿಸುವುದಕ್ಕೂ ಭಯ, ನೋಡುವುದಕ್ಕೂ

ಭಯವೇ. ಮುಕ್ಕಣ್ಣ ತನ್ನ ಜೀವಮಾನದಲ್ಲೇ ಅಂಥ ನೋಟವನ್ನು ನೋಡಿದವನಲ್ಲ. ಮಗನನ್ನು ಕಳೆದುಕೊಂಡ ಆ ತಾಯಿ ದೇಶಕ್ಕೆ ಬಂದ ಸ್ವರಾಜ್ಯವನ್ನು ಶಪಿಸುತ್ತಿದ್ದ ಆ ಕ್ರೂರ ಮಾತುಗಳು ಅವನ ಎದೆಯಲ್ಲಿಯೂ ಪ್ರತಿಧ್ವನಿಸಿದುವು. ಅವರ ಭಯ ಅವನ ಭಯವಾಯಿತು. ಅಲ್ಲಿ ನಿಂತಿರುವುದಕ್ಕೂ ಅಂಜಿ ಆತ ಓಡತೊಡಗಿದ. ತಾನೆಣಿಸಿಕೊಂಡ ಅರಾಜಕ ದಿನಗಳೇ—ಬಂದುವಲ್ಲ ಎಂಬ ಭೀತಿ ಅವನ ಕೈ ಕಾಲುಗಳನ್ನೆಲ್ಲಾ ನಡುಗಿಸುತ್ತಿದ್ದರೂ ದೆವ್ವದಂತೆ ಓಡುತ್ತಲಿದ್ದ. ಮೆಲುವಾಗಿ ನಡೆದು ಬಂದ ಮೂರು ದಿನಗಳ ಹಾದಿಯು ಒಂದೂವರೆ ದಿನದಲ್ಲೇ ಕಳೆಯಿತು. ಅನ್ನ, ನೀರಿಲ್ಲದೆ, ನಿದ್ರೆ ವಿಶ್ರಾಂತಿಗಳಿಲ್ಲದೆ ಧನಿಯ ಮನೆಯನ್ನು ಸೇರಿ, ಸುದ್ದಿ ತಿಳಿಸುವ ತನಕ ಯಾವಜ್ಜೀವ ತತ್ತರಿಸುತ್ತಿದ್ದ.

ಪಟ್ಟೆದಾರರ ಮುಂದೆ ಕಂಡುದನ್ನು, ಕೇಳಿದುದನ್ನು ಹೇಳಿದ. ಬಂದ ಸಾಹುಕಾರರು ಪೋಲೀಸರೇ ಇರಬೇಕು ಎಂದು ಸ್ಪಷ್ಟಪಡಿಸಿದ. ಕಣ್ಣಲ್ಲಿ ನೀರು ಸುರಿಯುತ್ತಿತ್ತು. 'ನಾಳೆ ಕಿಗ್ಗಳ್ಳಿಯಲ್ಲಿಯೂ ಇಂಥ ನರಬೇಟೆ ನಡೆದರೇನು ಗತಿ ?' ಎಂಬ ಭಯವನ್ನು ಉದ್ಗರಿಸಿದ. ಜಯದೇವ ಧನಿಗಳು "ಪೋಲೀಸರರು ಎಂದೂ ಹಾಗೆ ಮಾಡಲಾರರು. ಆ ವ್ಯಾಪಾರಿಗಳು ಬೇರೆಯೋ! ಇದನ್ನು ಮಾಡಿದವರು ಬೇರೆಯೋ" ಎಂದು ವಾದಿಸಿದರೆ, ಈತ "ಅಲ್ಲ ಧನಿಯೇ, ನಾನು ಇದ್ದ ಮೂರು ದಿನವೂ ಆ ದೊಡ್ಡ ಸಾಹುಕಾರರಿಗೆ ಉಳಿದವರು ಪೋಲೀಸರಂತೆಯೇ ಸಲಾಮು ಕೊಡುತ್ತಿದ್ದರು. ಆ ಬಟ್ಟೆಯ ಮೂಟೆಗಳಲ್ಲಿ ತುಪಾಕಿಗಳೇ ಇದ್ದಿರಬೇಕು" ಎಂದ.

"ಇರಲಾರದು, ಜನ ಹೇಳಿದ್ದನ್ನು ನಾವು ನಂಬುವುದು ಹೇಗೆ? ಆ ಕೇರಿಯವರು ಗುಲಾಲಿ ಟೋಪಿಗಳಿಗೆ ಆಶ್ರಯ ಕೊಟ್ಟದ್ದಿದ್ದರೆ ಪೋಲೀಸರಾದರೂ ಏನು ಮಾಡಬೇಕು ?"

"ಏನು ದೊರೆ, ನೀವು ಹಾಗನ್ನುತ್ತೀರಾ? ನಾನು ಕಂಡುದು ಸುಳ್ಳೇ. ನನ್ನ ಮುಂದೆಯೇ ಜೀವ ಬಿಟ್ಟ ಒಬ್ಬ ಹುಡುಗ, ಹತ್ತು ಹದಿನೈದು ವರ್ಷಗಳ ಮಗು. ಅವನ ತಾಯಿಯ ಗೋಳು ಕೇಳಿ ನನ್ನ ಕರುಳೇ ಕತ್ತರಿಸಿತು. ಬೆಳುದಿಂಗಳ ರಾತ್ರಿಯಲ್ಲಿ ಆ ಹಳ್ಳಿಯವರನ್ನು ಬೆದರಿಸಿ, ಮನೆ ಬಿಟ್ಟು ಹೊರಡಿಸಿ, ಬೆಟ್ಟಕ್ಕೆ ಅಟ್ಟಿ,

ಗುಂಡು ಹಾರಿಸುವುದೆಂದರೆ ಏನು ನ್ಯಾಯ ? ಏನು ನೀತಿ ?”

“ಏನೋ ಅಪ್ಪ, ಅದರ ತಲೆಬುಡವೇ ನನಗೆ ಆಗುವುದಿಲ್ಲ” ಎನ್ನಬೇಕಾಯಿತು ಜಯದೇವರು

ಹದಿನೈದು ದಿನಗಳು ಕಳೆದ ಮೇಲೆ ಚಿಕ್ಕ ಧನಿ ವಾಸುದೇವರು ಮುಕ್ಕಣ್ಣನನ್ನು ಕರೆದು ಕಿವಿ ಮಾತಿನಲ್ಲಿ ಎಂಬಷ್ಟು ಮೆಲುವಾಗಿ “ಹೌದೋ ಮುಕ್ಕಣ್ಣ, ಆ ದಿನ ಗುಂಡಿನ ಕಥೆ ಹೇಳಿದೆಯಲ್ಲ, ಅದು ನಡೆದುದು ಯಾವ ಹಳ್ಳಿಯಲ್ಲಿ ಎಂದ ?” ಎಂದು ಕೇಳಿದರು

“ಸೋಮನ ಹಳ್ಳಿಯಿಂದ ಎರಡು ಹರದಾರಿ ಆಚಿನದು. ಹಳ್ಳಿಯ ಹೆಸರು ನೆನಪಿಗೆ ಬಾರದು—ಅಲ್ಲೊಂದು ದೊಡ್ಡ ದೇವಸ್ಥಾನ ಇದೆಯಲ್ಲ, ಪುರಾತನದ್ದು ”

“ಚಂಗನ ಹಳ್ಳಿಯೋ ?”

“ಹೌದೆಂದು ಕಾಣುತ್ತದೆ”

“ಹಾಗಾದರೆ ಸರಿ”

“ಏನು ಸರಿ ?”

“ಇವತ್ತು ಪೇಪರಿನಲ್ಲಿ ಬಂದಿದೆ—ಚಂಗನ ಹಳ್ಳಿಗೆ ಒಂದೆರಡು ವಾರಗಳ ಕೆಳಗೆ ಡಿ ಐ ಜಿ ದೊರೆಸ್ವಾಮಿಯವರು ಹೋಗಿದ್ದರೆಂದೂ, ಅವರ ದಳವನ್ನು ಗುಲಾಲಿ ಟೋಪಿಯವರು ಇದಿರಿಸಿದರೆಂದೂ, ಆಗ ಪ್ರತಿಭಟಿಸಬೇಕಾಗಿ ಬಂದಿತೆಂದೂ, ಆರು ಮಂದಿ ಗುಲಾಲಿ ಟೋಪಿಗಳು ಗುಂಡಿನ ಬಾಯಿಗೆ ಬಲಿಯಾದರೆಂದೂ ವರ್ತಮಾನ ಬಂದಿದೆ. ನೀನು ಹೇಳಿದ ಹಾಗೆ ಆ ದಿನ ಬಂದವರು ಪೋಲೀಸಿನವರೇ ನಿಜ, ನನಗೂ ಆ ಅನುಮಾನ ಬಂದಿತ್ತು ಒಳ್ಳೆಯ ಕೆಲಸ ಮಾಡಿದರು. ತಿಂಗಳ ಹಿಂದೆ ಅದೇ ಚಂಗನಹಳ್ಳಿಯಲ್ಲಿ ಒಬ್ಬ ದೇಸಾಯರ ಮನೆಯನ್ನು ದರೋಡೆ ಮಾಡಿದ ಸುದ್ದಿ ಬಂದಿತ್ತು ಅದಕ್ಕೇನೇ ಇವರು ಹೋಗಿರಬೇಕು ಗುಲಾಲಿ ಟೋಪಿಯವರಿಗೆ ಆ ಊರಿನ ಕೆಲವು ಪುಂಡರ ಬೆಂಬಲ ಇದ್ದಿತ್ತೋ ಏನೋ” ಎಂದರು

ಮುಕ್ಕಣ್ಣನಿಗೆ ಧನಿಗಳ ಮಾತು ಕೇಳಿ ವಿಸ್ಮಯವಾಯಿತು. ‘ಪೇಪರಿನಲ್ಲಿ ಬಂದ ಸುದ್ದಿ ಸತ್ಯವಿರಲಾರದು ತಾನು ಕಂಡದ್ದು ಸುಳ್ಳಾಗಲಾರದು’ ಎಂದೆನಿಸಿ “ಏನು ಧನಿಯೇ, ಪೇಪರಿನವರು ಬರೆ

ವದ್ದು ನೀವು ನಂಬುವುದೆ ? ಆ ಜನಗಳನ್ನೂ, ಮನೆಗಳನ್ನೂ ನಾನು ನೋಡಿದೆನಲ್ಲ-ಎಲ್ಲವೂ ಬಡವರ ಗುಡಿಸಲುಗಳು. ಲಂಗೋಟಿಗೆ ಗತಿಯಿಲ್ಲದವರು ಅವರು ಯಾರಾದರು ಹೊರಗಿನವರು ಬಂದಿರಬಹುದು, ರಾತ್ರಿ ಮಲಗಿರುವುದಕ್ಕೆ ಜಾಗ ಕೇಳಿರಬಹುದು. ಜಾಗ ಕೊಟ್ಟರು ನನಗೂ ಒಬ್ಬ ರಂಬಾರ ಊಟ ಹಾಕಿದ, ರಾತ್ರಿ ಮಲಗಲು ಜಾಗ ಕೊಟ್ಟ ಅಷ್ಟಕ್ಕೆ ಅವರನ್ನು ಹೆದರಿಸಿ, ಗದರಿಸಿ ಹೊಡೆದು ಬಡಿದು, ಕಾಡಿಗೆ ಅಟ್ಟಿ, ಗುಂಡಿನಿಂದ ಶಿಕಾರಿ ಮಾಡುವುದೆಂದರೆ ಏನು ಅರ್ಥ ? ಸತ್ತವರನ್ನು ನಾನು ಕಣ್ಣಾರೆ ಕಂಡಿದ್ದೇನಲ್ಲ ಮೈ ಮೇಲೆ ಬಟ್ಟೆ ಇಲ್ಲದ ಆರೆಂಟು ಯೌವನಸ್ಥರನ್ನು ಹೀಗೆ ಬಲಿ ಹಾಕಿದರು ಅವರಲ್ಲಿ ಒಬ್ಬನಂತು ಎಳಯ ಮಗು ಒಬ್ಬನ ಹತ್ತಿರವಾದರೂ ಒಂದು ಕತ್ತಿ, ದೊಣ್ಣೆ ಇರಬೇಡವೇ ನನಗೆ ಆ ದಿನ-ಅಲ್ಲಿರಬೇಕು, ಹೆಣಗಳನ್ನು ಏನು ಮಾಡುತ್ತಾರೆ, ಪೋಲೀಸರು ತಿರುಗಿ ಬಂದಾರೆಯೋ ? ನಾನೇ ಕರೆದು ತಂದ ಜನಗಳಾದರ ' ಏನು ಕತೆ ಇದು ?' ಎಂದು ಕೇಳುವ ಮನಸ್ಸಾಗಿತ್ತು ಆದರೆ ಜನಗಳ ಗೋಳು, ಚೀರಾಟ, ಚೆಲ್ಲಿದ ರಕ್ತ ಇವನ್ನೆಲ್ಲ ಕಂಡು ಧೈರ್ಯ ಉಡುಗಿತು ಅಲ್ಲಿಂದ ಓಟಕಿತ್ತನು ನಿಮ್ಮಲ್ಲಿಯ ತನಕವೂ ದಾರಿಯಲ್ಲಿ ತಂಗಲಿಲ್ಲ. ನಾನೆಲ್ಲಾದರೂ ಹಾಗೆ ನಿಂತು ಕೇಳಿದ್ದಾದರೆ ನನ್ನ ಹೆಣವೂ ಹೋಗುತ್ತಿತ್ತೋ ಏನೋ ?"

ಅಂತು ಧನಿ, ಒಕ್ಕಲುಗಳೊಡನೆ ಈ ವಿಷಯದಲ್ಲಿ ತುಂಬ ಹೊತ್ತು ಚರ್ಚೆ ನಡೆಯಿತು ನಿಜದ ಸಂಗತಿಯೇನೆಂದು ಧನಿಯೂ ಹೇಳುವುದು ಸಾಧ್ಯವಿಲ್ಲ, ಮುಕ್ಕಣ್ಣನ ಮಾತನ್ನು ಅಲ್ಲಗಳೆಯುವುದಕ್ಕೂ ಸಾಹಸವಾಗಲಿಲ್ಲ ಕೊನೆಗೆ ಅವರು " ನಮಗೇಕೆ ಆ ಸುದ್ದಿ ? ಅಂತೂ ಕಾಲ ಚೆನ್ನಾಗಿಲ್ಲ ಯಾರನ್ನೂ ನಂಬುವ ಹಾಗಿಲ್ಲ ಮನೆಗೆ ಬಂದವರ ಹತ್ತಿರ ಮನಸ್ಸು ಬಿಚ್ಚಿ ಮಾತನಾಡುವ ಹಾಗಿಲ್ಲ ನೀನಾದರೂ ಯಾರ ಮುಂದೆಯೂ ಈ ಸುದ್ದಿಯನ್ನು ಹೇಳಬೇಡ" ಎಂದು ಬೋಧಿಸಿದರು

ಈ ಯಾವತ್ತು ವಿಚಾರಗಳಲ್ಲಿ ತನ್ನ ಧನಿಗಳು ಸಹ ಭಯ ಭೀತರಾಗಿದ್ದಾರೆ ಎಂದು ಮುಕ್ಕಣ್ಣನಿಗೂ ಹೊಳೆಯಿತು ಆತ

"ಒಟ್ಟು ಕಲಿಕಾಲ ! ಇನ್ನಿನ್ನು ಒಳ್ಳೆಯ ದಿನಗಳು ಬರಲಾರವು. ಆ ಮಹಾರಾಯ ವಿಕ್ರಮ ದೊರೆಯನ್ನು ಓಡಿಸಿದ್ದೇ ಇದಕ್ಕೆ ಮೂಲ. ಅದಕ್ಕಾಗಿ ಕೆಲವರು ಬಂಡಾಯ ಮಾಡುತ್ತಿದ್ದಾರೋ ಏನೋ" ಎಂದ.

"ನಿನಗೇನಾದರೇನು ? ನಮಗೆ ಬೇಡದ ಸುದ್ದಿಯಿದು" ಎಂದರು ಧನಿಗಳು

# ಅಧ್ಯಾಯ ೩

ಸ್ವಾತಂತ್ರ್ಯಯುಗದ ಮೂರು ವರ್ಷಗಳೇ ಮುಗಿಯುತ್ತ ಬಂದಿವೆ. ಜನತೆಯಲ್ಲಿ ಗಣ್ಯರೆನಿಸುವವರ ಮನಸ್ಸಿಗೆ ಸಮಾಧಾನ ಬಾರದಾಗಿದೆ ದೇಶವಾದಿಗಳ ಸಂಗಡದಲ್ಲೂ ಅಸಮಾಧಾನ ಹೆಚ್ಚಿದೆ. 'ಅಧಿಕಾರದಲ್ಲಿದ್ದವರು ತಮ್ಮ ಮುಷ್ಟಿಯನ್ನು ಬಲಪಡಿಸಿಕೊಂಡು, ತಮಗೆ ಬೇಕಾದವರಿಗೆ ಬೇಕಾದ ಸ್ಥಾನಮಾನ ಕೊಟ್ಟು, ಸ್ವಶಕ್ತಿಯನ್ನು ಬೆಳೆಯಿಸಿಕೊಳ್ಳುತ್ತಿದ್ದಾರೆ ಅಧಿಕಾರದ ಅವಕಾಶವಿಲ್ಲದಾಗ ಆ ಸಂಸ್ಥೆಯನ್ನು ಪೋಷಿಸಿ ಬೆಳೆಯಿಸಿದವರಿಗೆ ಇಂದು ಎಡೆಯಿಲ್ಲ. ಸಂದರ್ಭಸಾಧಕರಾದ ಹಲವು ಹೊಸಬರು ಹಳದಿ ಟೋಪಿ ಧರಿಸಿ, ಉಜ್ವಲ ದೇಶಪ್ರೇಮಿಗಳಂತೆ ನಟಿಸುತ್ತಿದ್ದಾರೆ ಸಂಸ್ಥೆಯಲ್ಲಿ ವಾಮನರಾಯನ ಅಧಿಕಾರ ವ್ಯಾಪ್ತಿಯು ಹೆಚ್ಚಿ ಅವನೆಂದಂತೆ ಕುಣಿಯುವ ಜನ ಬಹಳ ಅವನಿಗೆ ತಿಳಿದೋ ತಿಳಿಯದೆಯೋ ಮಂತ್ರಿವರ್ಗದ ಕೆಲವರು ಸ್ವಂತ ಆಸ್ತಿ, ಮನೆಗಳನ್ನು ಬೆಳೆಯಿಸುತ್ತಿದ್ದಾರೆ. ತಂತಮ್ಮ ಜನಗಳಿಗೆ ಕೆಲಸ ಕೊಡಿಸುತ್ತಿದ್ದಾರೆ. ರಾಜ್ಯದ ಬೊಕ್ಕಸ ಸೂರೆಯಾಗುತ್ತಿದೆ. ಜನತೆಯ ಕಷ್ಟಪರಂಪರೆ ಇದ್ದಂತೆಯೇ ಇದೆ.' ಎಂಬ ದೂರುಗಳು ಕೇಳಿಬರುತ್ತಿವೆ ವಾಮನರಾಯನ ಆಶ್ರಯದಲ್ಲಿ ಹುಟ್ಟಿಬೆಳೆದ ನಾಲ್ಕಾರು ಪತ್ರಿಕೆಗಳು ನಿತ್ಯವೂ ಅವನ ಹೊಗಳಿಕೆ, ಚಿತ್ರ, ಕಾರ್ಯಕಲಾಪಗಳ ವರ್ಣನೆ ಕೊಡುತ್ತಿದ್ದರೆ, ಉಳಿದುವು

ಅವನು ಮಾಡಿದ ಗಳಿಲ್ಲವನ್ನು ತೆಗಳುತ್ತಿವೆ.

ಅವನ ಮಂತ್ರಿಮಂಡಳದ ವರ್ತನೆಯಿಂದ ಬಹು ಜನಕ್ಕೆ ಅತೃಪ್ತಿ ಬಂದಿದೆಯೆಂಬುದು ನಿಜವಾದರೂ ಅವನು ಹೋದಲ್ಲೆಲ್ಲಾ ಸಾವಿರಾರು ಜನ ಕಲೆಯುತ್ತಾರೆ, ಸತ್ಕಾರವೆಸಗುತ್ತಾರೆ, ಮಾನಪತ್ರ ಕೊಡುತ್ತಾರೆ, ಉಪಹಾರಾದಿಗಳಿಂದ ಗೌರವಿಸುತ್ತಾರೆ ಇದು ಮಾತ್ರ ಏಕೆಂದು ಯಾರಿಗೂ ತಿಳಿಯದು 'ಜನತೆಯ ಬೆಂಬಲ ನನಗಿದೆ, ಕೆಲವೇ ಅಸಂತೃಪ್ತ ನಾಗರಿಕರು ನನ್ನನ್ನು ಟೀಕಿಸುತ್ತಿದ್ದಾರೆ' ಎಂಬುದು ವಾಮನರಾಯನ ನಂಬಿಕೆ ವರಿಷ್ಟರು ಅವನನ್ನೇ ನಂಬಿದ್ದಾರೆ ಅಲ್ಲದೆ–ತೀರ ಎದುರಿಗಿದ್ದು ಅವನನ್ನು ಟೀಕಿಸುವ ಜನರು ಸಹ ನಾಲ್ಕು ದಿನ ಹಾಗೆ ಮಾಡಿ, ಐದನೆಯ ದಿನ ಮೌನವಾಗಿರುವುದನ್ನು ಕಂಡಾಗ ತನ್ನ ಇದಿರಾಳಿಗಳನ್ನು ಈ ಐಂದ್ರಜಾಲಕ ಯಾವುದೋ ವಿಧದಿಂದ ಒಲಿಸಿ ಬಾಯಿಕಟ್ಟಿಸುತ್ತಿದ್ದಾನೆ' ಎನ್ನುತ್ತಿದ್ದಾರೆ. 'ಯಾವುದೋ ವಿಧದಿಂದ' ಎಂದರೆ 'ಎಂಥ ನಾಯಿಗೆ ಎಷ್ಟು ಎಂಜಲು ಕೊಟ್ಟರೆ ಹಿತ' ಎಂಬುದು ಅವನಿಗೆ ಗೊತ್ತಿದೆ ಎಂಬುದೇ ಆ ಮಾತಿನ ಮರ್ಮ ಅವನ ಹೊಸ ಯೋಜನೆಗಳಿಂದ ನಾಡಿಗೆ ಪ್ರಯೋಜನವಿಲ್ಲವೆಂದು ಹೇಳುವುದಾದರೂ ಹೇಗೆ? ಮೂರು ಕೋಟಿ ರೂಪಾಯಿಗಳು ಈಗಾಗಲೇ ಕರಗಿದೆ. ಇದ್ದ ಒಂದೂವರೆ ಕೋಟಿ ರೂಪಾಯಿ ಹೋಗಿ ತಿರುಗಿ ಅಷ್ಟೇ ಸಾಲವಾಗಿದೆ. ಇದರಿಂದ ಲೆಕ್ಕಾಚಾರ ಬಲ್ಲವರು ಗಾಬರಿಗೊಂಡಿದ್ದಾರೆ. ವ್ಯಯವಾದ ಹಣಕ್ಕೆ ಪ್ರತಿಯಾಗಿ ಸಾಕಷ್ಟು ಫಲಕಾಣಿಸುತ್ತಲಿಲ್ಲ ಎಂಬುದು ಅವರ ವಾದ.

ಆದರೆ 'ಇದು ಆಡಳಿತೆಯ ಪಾರಂಭ, ನಮ್ಮ ಹೊಸ ಯೋಜನೆನೆಗಳ ಪಾರಂಭ ಈಗಾಗಲೇ ಐನೂರು ಮೈಲುಗಳಷ್ಟು ಹೊಸದಾರಿಗಳಾಗಿವೆ. ಎರಡೆರಡು ನೀರ್ಕಟ್ಟೆಗಳ ಕೆಲಸ ತೊಡಗಿದೆ. ಇನ್ನು ಮೂರು ವರ್ಷಗಳಲ್ಲಿ ಅವು ಮುಗಿದು ನಾಡಿನ ಉದ್ದಕ್ಕೂ ವಿದ್ಯುತ್ತಿನ ಪೂರೈಕೆಯಾಗುತ್ತದೆ' ಎಂದು ಆತ ಹೇಳುತ್ತಿದ್ದಾನೆ. ಆ ಕೆಲಸಗಳು ತೊಡಗಿದ್ದು ನಿಜ, ಹೊಸ ದಾರಿಗಳಾಗುತ್ತಿದ್ದುದು ನಿಜ. ಗೊಂಡಾರಣ್ಯದ ಪರ್ವತಾವಳಿಗಳಲ್ಲಿ ಮಾರ್ಗಗಳ ನಿರ್ಮಾಣವಾಗುತ್ತಿದೆ. ಅವೇ ಹೊಸದಾರಿಗಳಿಂದಾಗಿ ನಾಡಿನ, ಈತನಕ ಕಾದಿಟ್ಟ ಅರಣ್ಯ

ಸಂಪತ್ತು, ವ್ಯಾಪಾರಕ್ಕೆ, ಸೂರೆಗೆ, ಸುಲಿಗೆಗೆ ತೆರವಾಗಿ ರಾಜಾದಾಯ ಹೆಚ್ಚುತ್ತಿದ್ದುದೂ ನಿಜ, ಕಳ್ಳವ್ಯಾಪಾರದಿಂದ ಹಲವರು ಶ್ರೀಮಂತ ರಾಗುತ್ತಿದ್ದುದೂ ನಿಜ ಇದರ ಒಂದು ಘನ ಪರಿಣಾಮ ಅರಣ್ಯ ವಾಸಿಗಳಮೇಲೆಯೂ ಉಂಟಾಗಿದೆ ಅವರ ಮುಚ್ಚುಮರೆಯ ಬಾಳು ಬಹಿರಂಗವಾಗತೊಡಗಿದೆ , ಹೀಗೆಯೇ ಕಾಡು ಸವರಿದಲ್ಲಿ ಅವರ ಜೀಸಾಯಕ್ಕ ವಿಘ್ನವಿದೆ, ಕಾಡು ಇಲ್ಲದಂತಾಗಿ ಅವರ ಬದುಕು ಅಸಾಧ್ಯವಾದೀತು ಎಚ್ಚರವಿಲ್ಲದೆ ಕಡಿಯುತ್ತಿರುವ ಕಾಡುಗಳಿಂದಾಗಿ ಸರಕಾರಕ್ಕೆ ದೊರೆಯುತ್ತಿರುವ ಒಂದು ರೂಪಾಯಿಗೆ ಪ್ರತಿಯಾಗಿ ಹತ್ತರಂತೆ ಕಳ್ಳಕಾಕರ ಕಿಸಿಗೆ ಹೋಗುತ್ತಿದೆ ಇಂಥವರ ಬೆಂಬಲ ವನ್ನು ಪಡೆದು ವಾಮನರಾಯ ತನ್ನ ವರ್ಚಸ್ಸನ್ನು ಬೆಳೆಯಿಸಿ ಕೊಳ್ಳುತ್ತಿದ್ದಾನೆ

ಇವನ್ನೆಲ್ಲ ಕಂಡು ಕಂಗಾಲುಗೊಂಡವರಲ್ಲಿ ತೀರ ಮೊದಲಿಗ ಹಳೆಯಹುಲಿ ಅರುಣಾಚಲಯ್ಯನವರು ಅವರು ರಾಜಕೀಯ ಜೀವ ನಕ್ಕೆ ತೊಡಗಿದ್ದು ದೇಶವಾದಿಯಾಗಿ. ಪುನಸ್ಸಾರೆ ಒಪ್ಪುತ್ತಿರುವ ಧ್ಯೇಯ ವಾದರೂ ಆ ಪಂಗಡದ್ದೇನೇ ಆದರೆ ಈಗಿನ ದೇಶವಾದಿಗಳನ್ನು ಒಪ್ಪ ಲಾರರು ಸುಮಾರು ೬೦ ವರ್ಷದ ಆ ಮುದುಕ ಹುಟ್ಟು ಮೇಧಾವಿ ಯಲ್ಲ, ಕುಟಿಲನಲ್ಲ, ದುರಭಿಲಾಷಿಯೂ ಅಲ್ಲ ವಿಧಿ ಅವರಲ್ಲಿರಿಸಿದ ಒಂದೇ ಒಂದು ಗುಣವೆಂದರೆ ಪ್ರಾಮಾಣಿಕತೆ ಜನ ಒಳಿತಾಗಬೇಕು, ದೇಶದ ಸಂಪತ್ತು ಸೂರೆಯಾಗಬಾರದು, ಜನರು ತೆರುತ್ತಿರುವ ಕಂದಾಯ, ತೆರಿಗೆಗಳು ಅಪವ್ಯಯವಾಗಬಾರದು ಎಂಬ ಚಿಂತೆಗಳು ಅವರ ರಾಜಕೀಯ ವಿರಕ್ತಿಯನ್ನು ಕಲುಕಿಸುತ್ತಿವೆ ಈ ಮೂರು ವರ್ಷಗಳಿಂದ ನಡೆಯಿಸುತ್ತಿರುವ ವಿದ್ಯಮಾನಗಳನ್ನು ಕಂಡು ಅವರು ದುಃಖಪಡುತ್ತಿದ್ದಾರೆ ತಮ್ಮ, ಹೋದ ಅಧ್ಯಕ್ಷಪದಕ್ಕಾಗಿ ಚಿಂತಿಸು ತ್ತಿದ್ದಿಲ್ಲ. ಪ್ರಧಾನಿತನದ ಸಾಮರ್ಥ್ಯ ತಮಗಿಲ್ಲವೆಂದು ಬಲ್ಲರು. ಹಾಗಿ ದ್ದರೂ ತೀರಾ ವಿರಕ್ತರಾಗದೆ, ತಮ್ಮ ಕಿವಿಗಳಮೇಲೆ ಬೀಳುತ್ತಿರುವ ದೂರುಗಳನ್ನೆಲ್ಲ ಕೇಳಿ, ನೋಡಿ, ಪರಿಶೀಲಿಸಿ ಆಗಾಗ ವಾಮನ ರಾಯನಿಗೆ ಸಲಹೆಯ ಪತ್ರವನ್ನು ಬರೆಯುತ್ತಿದ್ದಾರೆ. ಪ್ರಯೋಜನ ವಿಲ್ಲವೆಂದು ತಿಳಿದೂ ತಿಳಿದೂ ಬರೆಯುತ್ತಾರೆ. ಒಮ್ಮೊಮ್ಮೆ ಉದ್ವೇಗ

ಗೊಂಡು ದೇಶವಾದಿ ವರಿಷ್ಟರಿಗೂ ಬರೆಯುತ್ತಾರೆ

"ನೋಡಿ, ಶೀಲವತಿನದಿಯ ಮೇಲಿನ ಅಣೆಕಟ್ಟಿನಲ್ಲಿ ಕೊಂಡಾಯಿತು ಎನ್ನುವ ಇಷ್ಟು ಲಕ್ಷ ಹಣಕ್ಕೆ ತಕ್ಕ ಸಿಮೆಂಟು ಬಂದಿಲ್ಲ -ಎಂದು ದೂರು ಕೇಳುತ್ತೇನೆ"

"ಮಂತ್ರಿ–ಇಂಥವರು ಇಷ್ಟಿಷ್ಟು ಹಣ ತೆಗೆದುಕೊಂಡು ಇಂಥವರಿಗೆ ಇಂಥ ಗುತ್ತಿಗೆ ಕೊಟ್ಟರಂತ ನಿಜವೇ ?–ವಿಚಾರಿಸಿ"

"ಗೊಂಡಾರಣ್ಯದ ಗದ್ದಲಕ್ಕೆ, ಆದಿವಾಸಿಗಳ ಅಶಾಂತತೆಗೆ, ಅವರ ಜೀವನ ಸರ್ವಸ್ವವಾದ ಕಾಡುಗಳನ್ನು ಕಡಿಯುತ್ತಿರುವುದು ಮುಖ್ಯಕಾರಣ ಅಲ್ಲಿಯ ಮಾರ್ಗಗಳ ಕೆಲಸ ನಿಲ್ಲಿಸಿಬಿಟ್ಟರೆ ಗುಲಾಲಿ ಪಡೆಯುವರು ಈ ಸನ್ನಿವೇಶವನ್ನು ದುರುಪಯೋಗ ಮಾಡುವುದು ನಿಂತೀತು"

"ಸರಕಾರದ ಖಜಾನೆ ಸೂರೆಯಾಗಿದೆ ನೀವು ವ್ಯಯಿಸುತ್ತಿರುವ ಹಣವಲ್ಲಿ ಐವತ್ತರಷ್ಟು ಪ್ರಯೋಜನಕ್ಕೆ ಬರುತ್ತಲಿಲ್ಲ ಪ್ರತಿಯೊಂದು ಕಾಮಗಾರಿಯ ಅಂದಾಜುಪಟ್ಟಿಯು ಬದಲಾಗುತ್ತಿದೆ, ಹೆಚ್ಚುತ್ತಿದೆ ಎಣಿಕ ಮೀರಿ ಹಣ ಪೋಲಾಗುತ್ತಿದೆ ನಿಮ್ಮ ತಜ್ಞರ ವಿಷಯದಲ್ಲೇ ಜನಕ್ಕೆ ಸಂದೇಹ ಬರತೊಡಗಿದೆ ಇಂಥವುಗಳ ತಥ್ಯವನ್ನು ವಿಚಾರಿಸಲು ಒಂದು ಕಮಿಟಿಯನ್ನು ನೇಮಕಮಾಡಿ" ಎಂಬಿವೇ ಮೊದಲಾದ ಹತ್ತೆಂಟು ಪತ್ರಗಳನ್ನು ಅವನಿಗೆ ಬರೆದರು. ಸ್ವಂತ ಮಾನ ಬಿಗಿರಿಸಿ ವಾಮನರಾಯನ ಭೇಟಿಮಾಡಿ, ಬಾಯಾರೆ ಹೇಳಿಯೂ ಹೇಳಿದರು ಅವಾವುದಕ್ಕೂ ಅವನ ಪ್ರತಿಧ್ವನಿ ಚೆನ್ನಾಗಿರಲಿಲ್ಲ. ಬದಲು 'ಇವೆಲ್ಲಾ ನಿರಾಧಾರವಾದ ಸುದ್ದಿಗಳು' ಎಂದು ಆತ ಮೂದಲಿಸಿ ಮಾತನಾಡಿದ ಆಗ ಅರುಣಾಚಲಯ್ಯನವರಿಗೆ–'ವಾಮನರಾಯ ಸಹ ಈ ಕೊಳ್ಳೆಯಲ್ಲೊಂದು ಪಾಲಿಗೆ ಕೈಯೊಡ್ಡಿರಬಹುದೇ'–ಎಂಬ ಅನುಮಾನ ಉಂಟಾಯಿತು ಪತ್ರಗಳಾಗಲಿ, ಭೇಟಿಗಳಾಗಲಿ ಸಫಲಿಸಲಿಲ್ಲ ತಮ್ಮಂತೆಯೇ ನಿರಾಶೆ, ಸಂಶಯಗಳಿಗೆ ಗುರಿಯಾದವರನ್ನು ಕಟ್ಟಿಕೊಂಡು ಇನ್ನೊಂದು ಪಂಗಡವನ್ನು ಕಟ್ಟಿ, ನಾಯಕನಾಗಿ ಜನರ ಮುಂದೆ ಹೋಗಿ ನಿಲ್ಲುವ ಧೈರ್ಯ ಮಾಡಬೇಕಾಯಿತು ವರಿಷ್ಟರಿಗೆ ಕೊಟ್ಟ ದೂರುಗಳು ಫಲಿಸಲಿಲ್ಲವೆಂದ

ಮೇಲೆ ಪ್ರಾಮಾಣಿಕನಾದ ತಮಗೆ ಅದೊಂದೇ ಮಾರ್ಗ ಉಳಿದುದು ತೋರಿತು. ಆಗ-ತಾವೀವರೆಗೆ ದುಡಿದ ಮಾತೃಸಂಸ್ಥೆಯ ಸಂಪರ್ಕವನ್ನು ಸಂಪೂರ್ಣ ಕಳೆದುಕೊಂಡರು.

ದೇಶದ ರಾಜಕೀಯವನ್ನು ಕಂಡು ಸುಮ್ಮನಿರಲು ಮನಸ್ಸು ಬಾರದು ಅದನ್ನಿದಿರಿಸಲು ತಾವೇ ಒಂದು ಪಂಗಡ ಕಟ್ಟಿಕೊಳ್ಳುವುದು ಎಷ್ಟು ಸಾಧ್ಯವೋ, ಯೋಗ್ಯವೋ, ಅದೂ ಹೊಳೆಯದು ಇತ್ತ ದೇಶವಾದಿಗಳ ನಡತೆಯಿಂದಾಗಿ ಶ್ರಮವಾದಿಗಳ ಪಕ್ಷ ಬಲಿಯುತ್ತಿದೆ. ಅವರ ಮಾರ್ಗ ಅಹಿಂಸಾ ಮಾರ್ಗಿಯಾದ ಅರುಣಾಚಲಯ್ಯನವರಿಗೆ ಎಂದೂ ಒಪ್ಪದು ಹೀಗಾಗಿ ಮಧ್ಯಮ ಪಕ್ಷವೊಂದು ಬೇಕೆಂಬ ಕನಸು ಬೆಳೆಯಿತು

ವಾಮನರಾಯನಿಗೂ ಶ್ರಮವಾದಿಗಳ ಏಳಿಗೆ ಸಹಿಸದು ಅವರ ಗುರಿ 'ರಾಷ್ಟ್ರಸ್ವಾಮ್ಯ' ತಾನೇ ಆ ಕಾರ್ಯಕ್ಕೆ ಧುಮುಕಿದರೆ ಜನ ತನ್ನನ್ನು ಒಲಿಯುತ್ತಾರೆಂದು ಪ್ರಚಾರಕ್ಕೆ ಬೇಕಷ್ಟೆ ಅಂತಹ ನಾಟಕ ಹೂಡಿದ ದೇಶದ ಮೋಟಾರು ಸಾರಿಗೆಯ ರಾಷ್ಟ್ರೀಕರಣ ಮಾಡಲು ಹೊರಟ. ಅನೇಕರು ಅದಕ್ಕೂ ಗೋಣಾಗಿದರು ಚತುರರಾದ ಕೆಲವರು ತಂತಮ್ಮ ಹರಕು, ಮುರುಕು ಮೋಟಾರುಗಳನ್ನು ಸರಕಾರಕ್ಕೆ ಮಾರಿ ಲಾಭ ಗಳಿಸಿ ಇನ್ನೂ ಹೆಚ್ಚಿನ ಲಾಭದಾಯಕ ಉದ್ಯೋಗಗಳಿಗೆ ಕೈಯಿಕ್ಕಿದರು ಕೊಂಡ ಮೋಟಾರುಗಳ ಉಪಯೋಗ ಸರಕಾರಕ್ಕಿಲ್ಲ. ಹೊಸ ಮೋಟಾರು ವಾಹನಗಳನ್ನು ಮನ ಬಂದ ಬೆಲೆಗೆ ಕೊಂಡು, ಸಾರಿಗೆಯ ಮಂತ್ರಿ ಸಜ್ಜನರಾಯ ಕೆಲವು ಲಕ್ಷ ರೂಪಾಯಿಗಳನ್ನು ಗಳಿಸಿದ ವಾಮನರಾಯ, ಸ್ವತಃ ಬಂಡವಳುಗಾರರ ಬೆಂಬಲದಿಂದಲೇ ಈ ತನಕ ಆಟ ಆಡಿದನಾದರೂ, ಈ ನಾಟಕವನ್ನೇಕೆ ಹೂಡಿದ ಎಂದು ಅವನ ಸಿಕಟವರ್ತಿಗಳಿಗೂ ಹೊಳೆಯಲಿಲ್ಲ.

"ಏನು ನಿಮ್ಮ ಧೋರಣೆ? ಅಂತಿಮದಲ್ಲಿ ರಾಷ್ಟ್ರಸ್ವಾಮ್ಯವೇ" ಎಂದು ಚುರುಕಿನ ಕಾಂಚನಮಾಲೆ ಕೇಳಿದಳು.

"ನನಗೆ ರಾಷ್ಟ್ರಸ್ವಾಮ್ಯದಲ್ಲಿ ವಿಶ್ವಾಸವಿಲ್ಲ. ಆದರೆ ಸಾರಿಗೆಯ ರಾಷ್ಟ್ರೀಕರಣದಿಂದ ಪ್ರಯೋಜನವಿದೆ"

"ಪ್ರಯೋಜನವಿದ್ದರೆ ಎಲ್ಲದರಲ್ಲಿಯೂ ಇದೆ. ಇದೇ ಮುಖ್ಯ

ವೇನು? ಸರಕಾರವೇ ಅರಣ್ಯ ಸಂಪತ್ತನ್ನು ಮಾರಾಟ ಮಾಡಿದರೆ ಇದಕ್ಕೂ ಹೆಚ್ಚಿನ ಲಾಭವಿದೆಯಲ್ಲ ಅದನ್ನು ಮಾಡದೆ ಇದಕ್ಕೇಕೆ ಅವಸರ?"

"ಏಕಿರಬಹುದೆಂದು ನೀವೇ ಹೇಳಿ?"

ಕಾಂಚನಮಾಲೆ ನಕ್ಕಳು "ನೀವು ದೂರದರ್ಶಿಗಳು ಆದರೆ ನಿಮಗಿಂತಲೂ ಶ್ರಮಗಾರ ಸಂಗಡದವರು ಚತುರರು" ಎಂದಳು

"ಅವರಿಂದೇನಾದೀತು? ಅವರ ಮೇಲಿನ ನಿರ್ಬಂಧಗಳನ್ನು ಕಳಚಿಹಾಕುತ್ತೇನೆ ಧಂಗ ನಡೆಯಿಸುವ ಅವರ ಶಕ್ತಿ ಇಂದು ನಷ್ಟ ವಾಗಿದೆ ಅವರ ಮುಂದಾಳುಗಳು ಎಲ್ಲಿಯೇ ಇರಲಿ–ಅವರಿಗೆ ಜಂಬಲ ಕೊಟ್ಟ ಹಳ್ಳಿಗಾಡಿನವರು, ಗುಡ್ಡಗಾಡಿನವರು ಬೇಕಷ್ಟು ದಂಡ ತೆತ್ತಿದ್ದಾರೆ ಇನ್ನು ಆ ಭೀತಿಯಿಲ್ಲ"

ವಾಮನರಾಯ ಹೇಳಿದಂತೆಯೇ ಮಾಡಿದ, ಶ್ರಮವಾದಿಗಳ ಮೇಲೆ ಹೊರಿಸಿದ ಅಡ್ಡಿ, ಆತಂಕಗಳನ್ನು ಕಿತ್ತು ಹಾಕಿದ ಅವರ ಕೂಗು ತಣಿಯಿತೆಂದು ತಿಳಿದ ಜನರ ರಾಜಕೀಯಕ್ಕೆ ನಾರಿಗೆಯ ಸ್ವಾಮ್ಯ ಅವಶ್ಯ ಎಂದು ಅವನ ತಿಳಿವು ನಾಳೆ ದಿನ ಹೊಸ ಚುನಾವಣೆ ಕಾಲ ಬಂದಾಗ ಮೋಟರು ಸಂಪರ್ಕ ತಾವೇ ಬೆಳೆಸಿದರೆ ಅದರಿಂದ ಸುಲಭ ಕೀರ್ತಿ, ಅನುಕೂಲತೆಗಳೆರಡೂ ಉಂಟು ಇತ್ತ ಮಾನವತಿ ನದಿಯ ಮುರಿದ ಸೇತುವೆ ದುರಸ್ತಿಯಾಯಿತು ಸಣ್ಣ ಪುಟ್ಟ ನದಿಗಳಿಗೆ ಸಾರ, ಸೇತುವೆ ಹಾಕುವ ಕೆಲಸ ನಡೆದಿದೆ ಹಳ್ಳಿಯ ಜನಗಳ ಮುಂದೆ 'ರಸ್ತೆ ಇಲ್ಲದ ಕಗ್ಗಾಡಿನಲ್ಲಿ ಹಾದಿಯ ಸೌಕರ್ಯ ಕಲ್ಪಿಸಿದ್ದೇವೆ' ಎಂಬ ಪ್ರಚಾರ ನಡೆದಿದೆ ಆ ಬಗ್ಗೆ ಎಷ್ಟು ಹಣ ವೆಚ್ಚವಾದರೂ ಚಿಂತೆಯಿಲ್ಲ ಬೆಟ್ಟದ ಮೂಲೆಯಲ್ಲಿರುವ ಕಾಡುಗಳು, ಮೆಂಗನೀಸ್ ಗನಿಗಳು ತೆರದಿವೆ ಇದರಿಂದ ರಾಜ್ಯಕ್ಕೆ ಲಾಭವಿದೆ. ತನ್ನ ಜನಕ್ಕೆ ಲಾಭವಿದೆ

ಇನ್ನೇನು? ಆರು ತಿಂಗಳಲ್ಲಿ ಸಾರ್ವತ್ರಿಕ ಚುನಾವಣೆ ನಡೆಯಲಿದೆ. ನಿಜವಾದ ಪ್ರಜಾರಾಜ್ಯ ಬರಲಿದೆ ದೇಶದ ಪ್ರಾಯಸ್ಥರಿಗೆಲ್ಲ ಮತದಾನದ ಅಧಿಕಾರ ಬರಲಿಕ್ಕಿದೆ ಅಂಥವರ ಪಟ್ಟಿಯನ್ನು ತಯಾರಿಸುವುದರ ಕೆಲಸವೂ ನಡೆದಿದೆ ಅಲ್ಲಿಯೂ ಆತ ಮೂಕನಾಗಿಲ್ಲ–

ಸಂಬಂಧಿಸಿದ ಅಧಿಕಾರಿಗಳಿಗೆ ಬುದ್ಧಿ ಹೇಳುತ್ತಿದ್ದಾನೆ. ತನಗೆ ಪ್ರತಿಕೂಲವಾಗಿ ಕಾಣುವ ಕ್ಷೇತ್ರಗಳಲ್ಲಿ ಮತದಾರರ ಹೆಸರುಗಳನ್ನೇ ತಪ್ಪಿಸುವ ಚಾತುರ್ಯ ಬೋಧಿಸಿದ್ದಾನೆ ಇಷ್ಟರ ತನಕ ಅನಭಿಷಿಕ್ತ ದೊರೆಯಾದ ತಾನು ಅಭಿಷಿಕ್ತ ದೊರೆಯೆನಿಸಿಕೊಳ್ಳುವ ಕಾರ್ಯ ಕಷ್ಟದ್ದಲ್ಲ ಎಂದು ಅವನ ತಿಳಿವು ಅವನ ಉಜ್ವಲ ಭಾಷಣಗಳು ವರದಿಯಾಗದ ದಿನವಿಲ್ಲ "ಜನಗಳೇ, ಕಾರ್ಯ ಪ್ರವರ್ತರಾಗಿ ದೇಶದ ಅಭಿವೃದ್ಧಿ ಸಾಧಿಸಿರಿ, ಮಾತಿನಲ್ಲಿ ಸಮಯ ಕಳೆಯ ಬೇಡಿ" ಎಂದು ಉಪದೇಶ ಕೊಡುತ್ತಿದ್ದಾನೆ ತಾನು ದಿನಕ್ಕೆ ೩, ೪ ತಾಸುಗಳನ್ನಾದರೂ ಮಾತಿನಲ್ಲಿ ಕಳೆಯುತ್ತಾನೆ

ತಾನೆಷ್ಟು ಉದಾರಿ ಎಂದು ತೋರಿಸುವುದಕ್ಕೆ, ತನ್ನ ಪ್ರತಿಕಕ್ಷಿ ಸೇತುರಾಯನ ತಲೆ ತೋರಿಸಿಕೊಟ್ಟವರಿಗೆ ಸಾವಿರ ರೂಪಾಯಿಗಳ ಬಹುಮಾನ ಎಂದು ಪ್ರಕಟಿಸಿದ ಅವನೇ, ಆ ಆಜ್ಞೆಯನ್ನು ಹಿಂದೆಗೆದು "ಎಲ್ಲರೂ ನಾಡಿನ ಮೇಲ್ಮೆಗಾಗಿ ದುಡಿಯೋಣ ಬಡವರ ಏಳಿಗೆ ಆಗದೆ ನಾಡಿನ ಏಳಿಗೆ ಆಗದು ಅದನ್ನು ಕ್ರಮಶಃ ಸಾಧಿಸುವುದು ಸಾಧ್ಯ ಒಂದು ದಿನದ ಕ್ರಾಂತಿ ಅದಕ್ಕೆ ಚಿಕಿತ್ಸೆಯಲ್ಲ" ಎಂದು ಆವೇಶಪೂರ್ಣ ಭಾಷಣ ಮಾಡಿದನು

ಚುನಾವಣೆಯ ಕಾಲ ಬಂತೆಂದರೆ ರಾಜಕೀಯದಲ್ಲಿ ಉತ್ಸಾಹವುಳ್ಳ ಎಲ್ಲರಿಗೂ ಎಚ್ಚರವಾಗುತ್ತದೆ ದೇಶವಾದಿಗಳ ಪಾಲಿಗೆ ಹಿಂದಿನವರು ಕಟ್ಟಿಕೊಂಡು ಬಂದ ದೊಡ್ಡ ಸಂಸ್ಥೆಯುಂಟು ತಮ್ಮ ಹೆಸರು ದೊಡ್ಡದಿಲ್ಲದಿದ್ದರೂ ಭಾರತದ ದೊಡ್ಡ ಹೆಸರುಗಳನ್ನು ಜಪಿಸುವುದಕ್ಕೆ ಅವಕಾಶವಿದೆ ಅರುಣಾಚಲಯ್ಯನವರಂತಹ ಅತೃಪ್ತರು ಏನು ಮಾಡಬೇಕು? ತಾವು ಪಂಗಡ ಕಟ್ಟಿ, ಚುನಾವಣೆಯಲ್ಲಿ ಭಾಗವಹಿಸಿದರೆ ಗೊಂಡಾರಣ್ಯದ ರಾಜಕೀಯದಲ್ಲಿ ಸುಬುದ್ಧಿ ಹುಟ್ಟೀತೇ ಎಂದು ಆಶೆ ಮಾಡುವುದು ಸ್ವಾಭಾವಿಕ ಅಂತಹ ಕೆಲವರು ಅರುಣಾಚಲಯ್ಯನವರ ಸುತ್ತ ಕಲೆತರು ಅವರ ಶಕ್ತಿ ಏನೇ ಇರಲಿ, ಹಂಬಲ ದೊಡ್ಡದಿತ್ತು ನಾಗಲಾಂಬೆ ಸಿಟ್ಟಿನಿಂದ ಕಟ್ಟಿದ ಜನವಾದಿ ಪಂಗಡದ ನಾಯಕತ್ವವನ್ನು ಅರುಣಾಚಲಯ್ಯನವರಿಗೆ ಒಪ್ಪಿಸಿದಳು. ಆತನ ಹೆಸರಿನಿಂದಾಗಿ ಅದು ಬೆಳೆದೀತು ಎಂದೆಣಿಸಿ ತಾನು ಕಿರಿಯ ಸ್ಥಾನ ಒಪ್ಪಿಕೊಂಡಳು. ಅವರ

ಪಂಗಡದಲ್ಲಿ 'ಜ್ವಾಲೆ' ಸಂಪಾದಕ ತಿರುಮೂರ್ತಿ ಪ್ರಮುಖ ಪಾತ್ರ ವಹಿಸತೊಡಗಿದ. ಜನರ ಅಸಂತೃಪ್ತಿಯ ಮುಖವಾದ 'ಜ್ವಾಲೆ' ಹೆಚ್ಚು ಹೆಚ್ಚಾಗಿ ಪ್ರಚಾರವಾಗ ತೊಡಗಿತು ಅತ್ತ ಶ್ರಮವಾದಿಗಳ ಗುಂಪು ಒಮ್ಮೆಗೇ ಚಿಗುರಿಕೊಂಡು ಗಂಟಲ ಕಹಳೆಯನ್ನು ಊದ ತೊಡಗಿತು ಅವರದು ಗುಲಾಲಿ ಟೋಪಿಯಾದರೆ, ಜನವಾದಿಗಳು ತಮ್ಮ ಪಕ್ಷದ ಸಂಕೇತವಾಗಿ ಕಂದು ಬಣ್ಣದ ಟೋಪಿಯನ್ನೂ, ಬಾವುಟ ವನ್ನೂ, ಆರಿಸಿಕೊಂಡರು ಮುಂದಿನ ಚುನಾವಣೆ ಕಂದು, ಹಳದಿ, ಗುಲಾಲಿಸ್ಪರ್ಧೆಯೆಂದು ಸ್ಪಷ್ಟವಾಯಿತು ಹಳದಿ ಪಂಗಡದಲ್ಲಿ ಅಧಿಕಾ ರದ ರುಚಿ, ಲಾಭದ ರುಚಿ ನೋಡಿದವರಿದ್ದಾರೆ. ಹಾಗಾಗಿ ಒಂದೊಂದು ಸ್ಥಾನಕ್ಕೆ ಹತ್ತು ಹತ್ತು ಮಂದಿ ಉಮೇದುವಾರರು ನಿಂತಿದ್ದಾರೆ. ಹೀಗಾಗಿ ದೇಶವಾದಿಗಳಿಗೆ ಆರಿಸುವುದಾರನ್ನು ಬಿಡುವುದಾರನ್ನು ಎಂಬ ಚಿಂತೆ ಗುಲಾಲಿ ಪಂಗಡದವರು, ನಿಶ್ಚಿತಕಾಲದ ತನಕ ಹೆಸರು ಬಡ ಬಡಿಸಿದ ಚತುರರು ಹೊಸ ಪಂಗಡವಾದ ಜನವಾದಿಗಳಲ್ಲಿ 'ಚುನಾವಣೆಗೆ ಬನ್ನಿರಿ' ಎಂದು ಬೇಡಿದರೂ ಜನ ಸಿಗುವುದು ಕಷ್ಟ

ಅರುಣಾಚಲಯ್ಯ, ತಿರುಮೂರ್ತಿ, ನಾಗಲಾಂಬೆಯರು ನಾಡ ನ್ನೆಲ್ಲಾ ಸುತ್ತಾಡಿ ಬಂದರು ನಾಡಿನ ಪ್ರಮುಖರನ್ನು ಕೇಳಿದರೆ: 'ನಮ್ಮ ತನುಮನವೆಲ್ಲ ನಿಮ್ಮ ಹಿಂದಿದೆ ಧನ ಸಹಾಯ ಮಾಡು ತ್ತೇವೆ ಆದರೆ ನಾವೇ ಮುಂದೆ ಬೀಳಲಾರೆವು ಇದು ರಾಜಕೀಯ– ಎಷ್ಟೆಂದರೂ ಜಾತಿ, ಕೋಮುಗಳ ಮಾತು ಬರುತ್ತದೆ. ಏಕನಾಮಿ ಗಳು, ದ್ವಿನಾಮಿಗಳು ಜನರಿಗೆ ಬೇಡವಾಗಿದ್ದಾರೆ. ಈ ನಾಡಿನಲ್ಲಿ ಎಲ್ಲ ಪ್ರಶ್ನೆಗಳಿಗೂ ಕೊನೆಗೆ ಬರುವ ಮುಖ ಅದೇನೇ. ಯಾಕೆ ಆ ಹೊಲಸು, ನಿಷ್ಠುರ?' ಎನ್ನುತ್ತಾರೆ ಗೊಂಡಾರಣ್ಯದ ಅನ್ನ, ನೀರನ್ನುಂಡು ಬೆಳೆದ ಅರುಣಾಚಲಯ್ಯನವರಿಗೂ ಈ ಪರಿಸ್ಥಿತಿ ತಿಳಿಯ ದ್ದಲ್ಲ ಚುನಾವಣೆ ಎಂದರೆ ಅಂತಃಕಲಹ, ಬೇಕಾದ ವಿಷಯಗಳನ್ನು ಬಿಟ್ಟು ಬೇಡವಾದುದಕ್ಕೆ ಅಲ್ಲಿ ಪ್ರಾಧಾನ್ಯ. ಹಾಗೆಂದು ಯೋಗ್ಯರು ಅಂಜಿ ಹಿಂದೆ ಕುಳಿತರೆ, ಅಯೋಗ್ಯರ ದರ್ಬಾರೇ ನಡೆಯಬೇಕು; ಅದಕ್ಕಾಗಿ ತಾವೇ ತಮ್ಮ ತಲೆಯನ್ನು ದಂಡತೆರಬೇಕೆಂದು ತೋರುತ್ತಿದೆ

ವಾಮನರಾಯನು ಗುಲಾಲಿ ಪಡೆಯ ಮೇಲಿನ ನಿರ್ಬಂಧ ಕಳಚಿ, ಯುದ್ಧ ವಿರಾಮ ಸಾರಿದ ಮರುದಿನವೇ, ವಿಕ್ರಮನಗರದ ಕಿರಿಯ ಸಂದೊಂದರಲ್ಲಿರುವ ಸೇತುರಾಯನ ಮನೆಯ ಮೇಲೆ, ಗುಲಾಲಿ ಬಾವುಟ ಹಾರತೊಡಗಿತು ಆ ಮರುದಿನವೇ ನಗರದ ಮೈದಾನಿನಲ್ಲಿ ಅವನ ಸಾರ್ವಜನಿಕ ಭಾಷಣ ಏರ್ಪಟ್ಟಿದೆ. ಭಾಷಣ ಕೇಳುವುದಕ್ಕೆ ಕಲೆತ ಹೆಚ್ಚಿನ ಮಂದಿ ಶ್ರಮಗಾರರು, ತರುಣರು, ವಿದ್ಯಾರ್ಥಿಗಳಾಗಿದ್ದರು. ಧ್ವನಿವರ್ಧಕದಿಂದ ಸೂಸುತ್ತಿರುವ ಅವನ ಆವೇಶಪೂರ್ಣ ನುಡಿಗಳನ್ನು ಕೇಳುವುದಕ್ಕೆ ದೂರದ ಸಂದುಗೊಂದುಗಳಲ್ಲಿ ನೂರಾರು ಕಿವಿಗಳು ನಿಮಿರಿ ನಿಂತಿವೆ

ನೀಳವೂ, ತೆಳ್ಳಗೂ ಆದ ಶರೀರ ಸೇತುರಾಯನದು ಬಿಳುಪು ಮೈ ಬಣ್ಣ, ಹೊಳಪು ಕಣ್ಣುಗಳು ಆವೇಶಕ್ಕೆ ತಕ್ಕ ಕಂಠ ನಾಲಗೆ ನಾದರೂ ನಾಲಗೆ ಮಿದುಳುಗಳೆರಡೂ ದುರ್ಬಲವಾದವುಗಳಲ್ಲ ಆತ ಅನಾಯಾಸವಾಗಿ ಎರಡು ತಾಸುಗಳ ಕಾಲ ಮಾತನಾಡಬಲ್ಲ ಬೇಕಾದಲ್ಲಿ ಕೃತಕ ಆವೇಶಗಳನ್ನು ತಂದುಕೊಳ್ಳ ಬಲ್ಲ ಇಂದೇ ಅವನ ಚುನಾವಣೆಯ ಪ್ರಥಮ ಭಾಷಣವೆಂದರೂ ಸಲ್ಲುತ್ತದೆ ನಾಡಿನಲ್ಲಿ ಆಗಬೇಕಾದ ಕೆಲಸಗಳು ಅಸಂಖ್ಯಾತ ಆದರೂ ನೂರರಲ್ಲಿ ಒಂದು ಇಲ್ಲ ಅದೂ, ವಾಮನರಾಯನ ಆಡಳಿತೆಯಲ್ಲಿ ಸ್ನೇಹಿತರೇ ಹೇಳಬಹುದಾದಷ್ಟು ಕೊರತೆಗಳು ತುಂಬಿರುವಾಗ, ವೈರಿಯಾದ ಸೇತುರಾಯನ ಪಾಲಿಗೆ ಬತ್ತಳಿಕೆಯ ತುಂಬ ಬಾಣಗಳೇ ತನ್ನವರನ್ನು ನರಬೇಟೆಯಾಡಿದ ವಾಮನರಾಯನ ವಿಷಯದಲ್ಲಿ ಆತ ದಾಕ್ಷಿಣ್ಯ ತಾಳಬೇಕಾದ್ದಿಲ್ಲ ತನ್ನ ಜನಗಳ ಹಿಂಸಾಮಯ ಕೃತ್ಯಗಳಿಗೆ, ಅನ್ಯಾಯಗಳಿಗೆ 'ಶಾಂತಿ' 'ಸತ್ಯಾಗ್ರಹ,' 'ಪ್ರತಿಕ್ರಿಯೆ' ಮೊದಲಾದ ಬೆಡಗಿನ ಪದಗಳನ್ನು ಉಪಯೋಗಿಸಿ, ತನ್ನಿಂದ ಪ್ರೇರಿತವಾದ ಕೃತಿಗಳಿಗೆ ಜನತೆಯ ಮುಖವಾಡ ಕೊಟ್ಟು, ಮಾತನಾಡುವುದಕ್ಕೆ ಅವನು ನಿಸ್ಸೀಮ ಹೀಗಾಗಿ ಉಪನ್ಯಾಸದ ಅರ್ಧಭಾಗವೆಲ್ಲ ಪೋಲೀಸು ಅತ್ಯಾಚಾರಗಳನ್ನು ಬಣ್ಣಿಸುವುದರಲ್ಲಿ, ಆದರ ಒಪಾನು ಷತೆಯನ್ನು ಖಂಡಿಸುವುದರಲ್ಲಿ, ಜನಗಳನ್ನು ಉದ್ರೇಕಗೊಳಿಸುವುದರಲ್ಲಿ ಕಳೆಗಿತು ಇನು ಕಾಲಾಂಶ ಸಮಯ. ಜನಜೀವನದ ಬಡತನ

ಕ್ಕಾಗಿ ಮರುಗುವುದರಲ್ಲಿಯೇ ಹೋಯಿತು ಉಳಿದ ಸೇಳಿ-ವಾಮನ ರಾಯನ ಮಂತ್ರಿಮಂಡಳದ ಸ್ವಾರ್ಥ, ಲಂಚಗೂಳಿತನ, ಅನ್ಯಾಯ ಮೊದಲಾದವುಗಳನ್ನು ಬಣ್ಣಿಸುವುದರಲ್ಲಿ ಹೋಯಿತು. ತಮ್ಮಲ್ಲಿ ಹುದುಗಿದ ಅತೃಪ್ತಿಗೆ ಅಂಬಿನ ರೂಪಕೊಟ್ಟು ಇರಿಯ ಬಲ್ಲ ಅವನ ವಾಕ್ಸರಣಿಯನ್ನು ಜನರು ಮೆಚ್ಚಿ ಕರತಾಡನ ಮಾಡುತ್ತಿದ್ದಾರೆ. ಮೇಲಿಂದ ಮೇಲೆ 'ಸೈತಾನಿ ಸರಕಾರ' 'ಬಂಡವಾಳ ಶಾಹಿಗಳ ರಾಜ್ಯ', 'ಶ್ರಮಗಾರರ ಸೂರೆ' ಎಂಬ ಪದಪುಂಖಗಳನ್ನು ಉರುಳಿ ಸುತ್ತಿದ್ದಾಗ, ಸಾಮಾನ್ಯರ ಮನಸ್ಸಿನಲ್ಲಿ ಗೂಂಡಾರಾಜ್ಯವನ್ನು ಉಳಿ ಸಲು ಶಕ್ತಿಯುಳ್ಳ ವೀರಾಗ್ರೇಸನಿದ್ದರೆ ಅದು ಸೇತುರಾಯನೊಬ್ಬನೇ ಎಂದು ಕಾಣಬೇಕು ಎಂಥವರೂ 'ಭಲೆ' ಎನ್ನುವ ಭಾಷಣ ಅದು. ಆದರಲ್ಲಿ ಜನರ ನಿಲುಕಿಗೆ ಕಾಣ ಸಿಗದ ಅಂಶವೆಂದರೆ-ಗುಲಾಲಿ ಪಡೆ ಯವರ ರೀತಿ, ನೀತಿ, ಕಾರ್ಯ, ಕೈವಾಡಗಳು.

ಹೀಗೆ ಪ್ರತಿ ದಿನವೂ ಎಂಬಂತೆ, ವಿಕ್ರಮ ನಗರದಲ್ಲಿ, ಇತರ ಮುಖ್ಯ ನಗರಗಳಲ್ಲಿ ಕ್ರಾಂತಿವಾದಿಗಳ ಸಭೆಗಳು ನಡೆಯತೊಡಗಿದವು ಸೇತುರಾಯನಷ್ಟೇ ಭಾಷಣ ಮಾಡಿದರೂ ಬಹು ಮಟ್ಟಿನ ಪತ್ರಿಕೆಗಳು ಅವುಗಳ ಸಾರವನ್ನು ಸಪ್ಪೆಗೊಳಿಸಿ ಪ್ರಕಟಿಸಿದುವು. ಕೆಲವು ಪತ್ರಿಕೆ ಯವರು ದೇಶದಲ್ಲಿ ನಡೆದ ಕೊಲೆ, ಸುಲಿಗೆಗಳ ಪ್ರಕರಣಗಳನ್ನು ನೆನಪಿಗೆ ತಂದುಕೊಟ್ಟು "ಇದರಲ್ಲಿ ಗುಲಾಲಿ ಪಡೆಯುವರ ಕೈವಾಡ ಎಷ್ಟಿದೆ ಎಂದು ತಿಳಿಸುತ್ತೀರಾ?" ಎಂದೂ ಕೇಳಿದರು ವಾಮನ ರಾಯನಿಗೆ ದಿನ ನಿತ್ಯ ಇಂತಹ ಭಾಷಣಗಳ ವರದಿ ಸಿಗುತ್ತಿತ್ತು. ಅವನ ಬೆಂಬಲದ ಪತ್ರಿಕೆಗಳಿಗೆ ಅವಕ್ಕೆಲ್ಲಾ ಉತ್ತರ ಕೊಡುವುದೇ ಕೆಲಸ ಸೇತುರಾಯನ ಕಠೋರವಾಣಿಯಲ್ಲಿ ಸತ್ಯವಿದ್ದಷ್ಟೇ ಸುಳ್ಳೂ ಸೇರಿತ್ತು ಅವನು ಬಳಸುತ್ತಿದ್ದ ಭಾಷೆ ಎಂದೂ ಸಾಧುವಾಗಿರಲಿಲ್ಲ. ಆದರೆ ವಾಮನರಾಯನನ್ನು ಕೆಣಕುವುದಕ್ಕೆ ಹೊರಟ ಸೇತುರಾಯ ಒಂದು ದಿನ ಉತ್ಸಾಹ ಹೆಚ್ಚಿ ಕಾರ್ಯದಿಂದಲೂ ಕೆಣಕಿದ

ತಾನು ಮರೆಯಲ್ಲಿ ನಿಂತು, ರಾಷ್ಟ್ರೀಕರಣಗೊಂಡ ಬಸ್ ನೌಕರ ರಿಂದ ನಾಡಿನ ಆದ್ಯಂತವಾಗಿ ಸಂಚು ಹೂಡುವ ಉಪಾಯ ಮಾಡಿದ. ಹೊಸ ಬಸ್ಸುಗಳು ಹಾದಿಗಳ ಮೇಲೆ ಬಂದು ಆರು ತಿಂಗಳೂ ಆಗಿರ

ಲಿಲ್ಲ. ಈ ಉದ್ಯಮದಿಂದ ಸರಕಾರಕ್ಕೆ ಲಾಭವೋ, ಹಾನಿಯೋ ಎರಡೂ ತಿಳಿಯದು. ಅಷ್ಟರಲ್ಲಿಯೆ ಕೆಲಸಗಾರರು ಸೇರಿ-ಹೆಚ್ಚಿನ ವೇತನ, ಹೆಚ್ಚಿನ ಬತ್ತೆ, ಬಡತಿ, ಕಡಿಮೆ ಕೆಲಸ, ಯುದ್ಧ ಕಾಲದಲ್ಲಿ ಹಳೆಯ ಬಸ್ ಮಾಲಿಕರು ಕೊಡಲು ನಿರಾಕರಿಸಿದ ಲಾಭಾಂಶವನ್ನು ಸರಕಾರ ಕೊಡಬೇಕೆಂದು ಬೇಡಿಕೆ-ಇವನ್ನೆಲ್ಲ ಮುಂದಿಟ್ಟರು ಅವರ ಒಬ್ಬ ಮುಂದಾಳು ಪ್ರಧಾನಿಯೊಡನೆ ಈ ವಿಚಾರವನ್ನು ಚರ್ಚಿಸಲು ಅವಕಾಶವನ್ನು ಬೇಡಿದ ವಾಮನರಾಯ "ನಿಮ್ಮ ಹಾಲಾ ಹವಾಲಿ ಏನಿದ್ದರೂ ಮಾಮೂಲು ದಾರಿಯಿಂದ ಅರ್ಜಿ ಸಲಿಸಿ" ಎಂದು ತಿಳಿಸಿ ಭೇಟಿಯನ್ನು ನಿರಾಕರಿಸಿದ

ಕಾಳಗಕ್ಕೆ ಅಷ್ಟೇ ನೆಪಬೇಕಿತ್ತು ಸಾರ್ವತ್ರಿಕ ಮುಷ್ಕರ ತೊಡಗಿತು ಪ್ರಯಾಣಿಕರ ಹಕ್ಕು ಬಾಧ್ಯತೆಗಳು ಮೂಲೆ ಪಾಲಾದುವು. ಅವರನ್ನು ಬೀದಿಯಲ್ಲಿ ತಳ್ಳಿ ತಾವು ಸುಖಸಾಧಿಸಬಹುದು— ಎಂದು ಸಂಪುಗಾರರು ಇತರ ಕಲಸಗಾರರ, ಜನತೆಯ, ಬೆಂಬಲ ಬೇಡಿದರು ಆ ಬೆಂಬಲ ದೊರೆಯಿತೋ ಇಲ್ಲವೋ-ಸಾರಿಗೆ ನಿಂತು ಪ್ರವಾಸಿಗಳ ಗೋಳನ್ನು ಮಾತ್ರ ಹೆಚ್ಚಿಸಿತು ಇದಕ್ಕೆಲ್ಲ ಬಗ್ಗುವ ಮೂರ್ತಿ ವಾಮನರಾಯನೆ ಆತ ಸೈನಿಕರ ಬಲದಿಂದ ಖಾಸಗಿ ಡ್ರೈವರುಗಳ ಸಹಾಯದಿಂದ ಬಸ್ ಚಲಾವಣೆ ತೊಡಗಿಸಿದ ಅದಕ್ಕೆ ಪ್ರತಿಭಟ ಬಂದಿತು ಸಂಪುಗಾರರು ಹಲವು ವಾಹನಗಳನ್ನು ಸುಟ್ಟರು, ಕೆಲವರ ಜೀವಹಾನಿಯಾಯಿತು ಶಾಂತಿಯುತ ಮುಷ್ಕರ ಶಾಂತಿಯನ್ನು, ಬಿಟ್ಟು ಉಳಿದೆಲ್ಲ ದಾರಿಗಳನ್ನೂ ಹಿಡಿಯಿತು

ವಾಮನರಾಯನ ಮನಸ್ಸಿನಲ್ಲಿ-ರಾಷ್ಟ್ರೀಕರಣ ಮಾಡುವಾಗ, ಸಾರಿಗೆ ತನ್ನ ಹತೋಟಿಯಲ್ಲಿದ್ದರೆ ಪ್ರತಿ ಸ್ಪರ್ಧಿಗಳಿಗೆ ಅನಾನುಕೂಲ ಮಾಡಬಹುದು ಎಂಬ ಆಶೆಯಿತ್ತು ಸಾರಿಗೆಯವರು ತನ್ನ ಮೇಲೆಯೇ ಮುನಿದು ಬಿದ್ದಾರು, ತಾನೇ ಮಣಿಯ ಬೇಕಾದೀತು-ಎಂಬ ಯೋಚನೆ ಹೊಳೆದಿರಲಿಲ್ಲ. ಆರಂಭದಲ್ಲಿಯೇ ಆ ಸೂಚನೆಯನ್ನು ಕೊಟ್ಟವಳು ಕಾಂಚನಮಾಲೆ-ಈಗ ಅವಳನ್ನೇ ಕರೆದು ಆತ ತನ್ನ ತಲೆಬೇನೆಗೆ ಮದ್ದು ಕೇಳಬೇಕಾಯಿತು

"ರಾಷ್ಟ್ರಸ್ವಾಮ್ಯ ಇರುವಲ್ಲಿ ಮುಷ್ಕರ ನ್ಯಾಯವಲ್ಲ. ರಸ್ತೆ

ದೇಶದಲ್ಲಿ ಆ ಹಕ್ಕು ಇಲ್ಲವೇ ಇಲ್ಲ" ಎಂದಳು ಅವಳು. ಅಂಥ ಹುಕುಂ ಹೊರಡಿಸಿ ಸಾರಿಗೆಯನ್ನು ಅದಕ್ಕೆ ಒಳಪಡಿಸಿ ಮುಷ್ಕರವನ್ನು ನ್ಯಾಯ ಬಾಹಿರ ಎಂದು ಸಾರಿದರು. ಆದರೂ ಉದ್ರೇಕಗೊಂಡ ಕೆಲಸಗಾರರು ಮರಳಿ ಕೆಲಸಕ್ಕೆ ಬರಲಿಲ್ಲ. ಅವರ ಮುಂದಾಳುಗಳನ್ನು ಸೆರೆಯಲ್ಲಿರಿಸ ಬೇಕಾಯಿತು. ಜನಗಳಿಗಂತು ಬಸ್ಸು ಸಾರಿಗೆಯನ್ನು ರಾಷ್ಟ್ರೀಕರಣ ಮಾಡಿದ್ದೇ ಅನ್ಯಾಯವೆಂದು ತೋರಿತು

ಸೈನಿಕರನ್ನು ಕರೆದು ತಂದು ಅವರ ಸಹಾಯದಿಂದ ಬಸ್ ನಡೆ ಯಿಸುವುದಾಗಲಿ, ನಿತ್ಯ ಶಾಂತಿ ಕಾಪಾಡುವುದಾಗಲಿ ಅಸಾಧ್ಯವೆಂದು ತಿಳಿದ ಕಾಂಚನಮಾಲೆ, ಈ ಬೆಂಕಿ ನಂದಿಸುವುದಕ್ಕೆ ಬೇರೆ ಉಪಾಯ ಸೂಚಿಸಿದಳು. 'ಈಗಿನದು ತಾತ್ಕಾಲಿಕ ಸರಕಾರ, ನಾಳೆ ಬರುವುದು ಜನತೆ ಆರಿಸುವ ಸರಕಾರ ಈಗಾಗಲೇ ಒಂದು ಕಮಿಟಿ ನೇಮಿಸಿ ಮೋಟರು ಕೆಲಸಗಾರರ ಬೇಡಿಕೆಗಳು ಎಷ್ಟು ಸಾಧ್ಯ, ಎಷ್ಟು ಅಸಾಧ್ಯ ಎಂಬುದನ್ನು ವರದಿ ಮಾಡಲು ಹೇಳುತ್ತೇವೆ" ಎಂದು ಪ್ರಕಟಣೆ ಹೊರಡಿಸಿದಳು ಸೇತುರಾಯನ ಮೈದಾನು ಭಾಷಣಕ್ಕೆ ಪ್ರತಿಯಾಗಿ ಇವಳೂ ಭಾಷಣ ಮಾಡಿದಳು ಭಾಷಣದಲ್ಲಿ ಆವೇಶಕ್ಕೆ ಎಡೆಕೊಡದೆ, ಹಾಸ್ಯದಿಂದ, ಸದಸದ್ವಿವೇಕವನ್ನು ಬೋಧಿಸಿದಳು ವಾಮನರಾಯ ಭೇಟಿ ನಿರಾಕರಿಸಿದ ಮುಖಂಡರನ್ನು ತನ್ನ ಬಳಿಗ ಕರೆಯಿಸಿಕೊಂಡು "ನೀವು ಬೇರೆ, ನಾವು ಬೇರೆ ಎಂದು ತಿಳಿಯಬೇಡಿ ನಮ್ಮ ಸ್ಥಿತಿ ಯನ್ನು ಉತ್ತಮಗೊಳಿಸುವುದಕ್ಕೆ ಸಾಧ್ಯವಾದ ಪ್ರಯತ್ನ ಮಾಡು ತ್ತೇವೆ" ಎಂದು ಒಳ್ಳೆಯ ಮಾತನ್ನೇ ಹೇಳಿದಳು ಬಂದವರು 'ನೋಡುವ' ಎನ್ನಬೇಕಾಯಿತು. ಮತ್ತೂ ಹಟ ಹಿಡಿಯುವುದಕ್ಕೆ ಅವರವರಿಗೆ ಸ್ವಂತ ಸಂಸಾರವಿದೆ ಈಗಾಗಲೇ ಹದಿನೈದು ದಿನಗಳ ಉಪವಾಸ ಸಾಕಾಗಿತ್ತು ಹೀಗಾಗಿ ಅವರೆಲ್ಲ ಚಕಾರವೆತ್ತದೆ ಕೆಲಸಕ್ಕೆ ಮರಳಿದರು ಇದರಿಂದ ಕಾಂಚನಮಾಲೆಯ ಕಿರೀಟಕ್ಕೊಂದು ತುರಾಯಿ ಸಿಕ್ಕಿತು

ವಾಮನರಾಯನಿಗೆ ಈ ನೆಪದಿಂದ ತನ್ನ ಪ್ರತಿಕಕ್ಷಿಗಳಾದ ಗುಲಾಲಿ ದಳದವರನ್ನು ಇನ್ನೊಮ್ಮೆ ಸೆರೆಯಲ್ಲಿಡುವ ಚಪಲ ಆದರೆ ಅವರೊ ಬ್ಬರೂ ಒಂದು ದಿನವೂ ಶ್ರಮಗಾರರ ಜತೆಯಲ್ಲಿ ಕಾಣಿಸಲಿಲ್ಲ

ರಂಗದಲ್ಲಿ ಎದುರಿಗೆ ಬೀಳಲೇ ಇಲ್ಲ. ಅವರ ಪ್ರೇರಣೆ ಇಲ್ಲದೆ ಇಂತಹ ಮುಷ್ಕರ ಅಸಾಧ್ಯವೆಂದು ತಿಳಿದಿತ್ತಾದರೂ, ಅದನ್ನು ಸಾಧಿಸುವುದು ಕಷ್ಟ

ಈ ಸಂಪಿನ ವೇಳೆಯಲ್ಲಿ ಅರುಣಾಚಲಯ್ಯನವರ ಮನಸ್ಸು ಎಲ್ಲರಿಗಿಂತಲೂ ಹೆಚ್ಚಾಗಿ ಕಳವಳಕ್ಕೊಳಗಾಗಿತ್ತು ಅದರಲ್ಲಿ ಭಾಗಿಗಳಾದ ಕೆಲವು ನೌಕರರು ಅವನಿಗೆ ಪರಿಚಿತರು, ವಿಶ್ವಾಸಿಗಳು ಅವರಿಂದಲೇ ಆ ಮುಷ್ಕರಕ್ಕೂ, ಸೇತುರಾಯನಿಗೂ ಇದ್ದ ಅದೃಶ್ಯ ಸಂಬಂಧದ ಅರಿವು ಉಂಟಾಗಿತ್ತು ಅದಕ್ಕೇನೇ ಭಯ ತನ್ನ ಪಾಲಿಗೆ-ಆಚೆ ಕಡಲು, ಈಚೆ ಹುಲಿ-ಇದ್ದಂತೆ ಕಾಣಿಸುತ್ತಿತ್ತು ಒಂದುಕಡೆ ದೇಶವಾದಿಗಳ ಭಯ, ಇನ್ನೊಂದುಕಡೆ ಹಿಂಸಾತ್ಮಕವಾದ ರಾಜತಂತ್ರ ಅದರಿಂದ ಎಷ್ಟೋ ಬೆಲೆಬಾಳುವ ಮೋಟಾರು ವಾಹನಗಳು ಧ್ವಂಸವಾಗಿ ದೇಶಕ್ಕೆ ನಷ್ಟವಾಯಿತು ಹಿಂದೆಯೂ ಆದಿವಾಸಿಗಳನ್ನು ಗುಲಾಮ ಪಡೆಯುವರು ಕೆರಳಿಸಿ, ಹಿಂಸೆಯ ದಾರಿಯನ್ನು ಹಿಡಿಸಿದ್ದು ಇನ್ನೊಂದು ಸಾಕ್ಷಿ ಅಂಥ ಒಬ್ಬಿಬ್ಬರು ವೈರಿಗಳನ್ನು ಮುಂದಣ ಚುನಾವಣೆಯಲ್ಲಿ ಇದಿರಿಸಬೇಕಾದ ಪ್ರಸಂಗ ಅವರಿಗೆ ಬಂದಿದೆ ಅದಕ್ಕಾಗಿ ಮಧ್ಯವರ್ತಿ ಮಾರ್ಗವೊಂದನ್ನು ಕಂಡುಹಿಡಿಯಬೇಕಾಗಿದೆ ತಮ್ಮ ಗೆಳೆಯರೊಡನೆ ಅದನ್ನು ಕುರಿತು ಚರ್ಚಿಸುವುದಕ್ಕೆ ಅವರು ಹೊರಟರು

ಅವರ ನಿಕಟವರ್ತಿ ಗೆಳೆಯರು ಕೆಲವರೇ, ಅವರಲ್ಲಿ ಮುಖ್ಯರಾದವರು ನಾಲ್ಕಾರು ಮಂದಿ ಮಾತ್ರ ನಾಗಲಾಂಬೆ, ತಿರುಮೂರ್ತಿ, ಖಂಡೇರಾಯ ಮೊದಲಾದವರು ಅವರಲ್ಲಿ ಹೆಚ್ಚಿನವರು ವಕೀಲಿ ವೃತ್ತಿಯವರು, ಶ್ರೀಮಂತರಂತೂ ಅಲ್ಲ ಅರುಣಾಚಲಯ್ಯನಲ್ಲಿ ತುಂಬ ಶ್ರದ್ಧೆ, ವಿಶ್ವಾಸವುಳ್ಳವರು ಅವರೆಲ್ಲರ ವಾದ-ತಮ್ಮ ಚುನಾವಣೆಯ ಘೋಷಣೆ-ತುಂಬ ಆಕರ್ಷಕವಾಗಿರಬೇಕು ಎಂಬುದಾಗಿತ್ತು ತಿರುಮೂರ್ತಿ ಪತ್ರಿಕಾ ಲೇಖಕ ಸಣ್ಣಪುಟ್ಟ ಮಾತುಗಳನ್ನು ಬರೆದೇ ಗೊತ್ತಿಲ್ಲದವ. ತೀರ ದೊಡ್ಡ ಆದರ್ಶವನ್ನು ಇರಿಸುವುದರಲ್ಲೇ ಅವನ ವಿಶ್ವಾಸ, 'ಜನ ಒಲಿಯಬೇಕಾದರೆ ಅದೇ ಬೇಕು' ಎನ್ನುತ್ತಾನೆ ಅರುಣಾಚಲಯ್ಯನ ವಾದ ಸರಣಿ ಹೀಗೆ, "ನಾವೆಷ್ಟು ದೊಡ್ಡ ಮಾತ

ನಾಡಬಹುದು. ಆದರೆ ಆಡಿದಂತೆ ಮಾಡುವುದಕ್ಕೆ ಇರುವ ಇತಿಮಿತಿಗಳನ್ನು ತಿಳಿದು, ಜನರ ಮುಂದಕ್ಕೆ ಆದರ್ಶ ಇಡುವುದು ಒಳ್ಳೆಯದು. ಚುನಾವಣೆಗೆ ನಿಂತೊಡನೆಯೇ ಸರಕಾರ ನಡೆಯಿಸುವ ಬಲ ನಮಗೆ ಸಿಗುವುದು ಅಸಂಭವ ಮೊದಲು ನಾವು ಪ್ರಬಲನಾದ ವಿರೋಧಿ ಸಂಗಡ ನಿರ್ಮಾಣಮಾಡಿದ್ದಾದರೆ ನಾಕು" ಅವರಲ್ಲಿ ಹೀಗೆ ಮಾತುಕತೆಗಳು ನಡೆದು, ಸೌಮ್ಯವಾದ ಒಂದು ಘೋಷಣೆಯನ್ನು ಹೊರಡಿಸಿದರು "ನಾವು ಜನಕ್ಕೆ ಸುವರ್ಣವೃಷ್ಟಿ ತರುತ್ತೇವೆ ಎಂಬ ಭರವಸೆ ಕೊಡುವಂತಿಲ್ಲ, ಇಲ್ಲದ ಆಶೆ ಹುಟ್ಟಿಸುವುದಿಲ್ಲ ನಮ್ಮ ಪಕ್ಷ ಬಹುಮತವಾಗಿ ಆರಿಸಿಬಂದರೆ–ಸಾರ್ವಜನಿಕ ಸಂಪತ್ತು ಅನಾಪ್ತಯವಾಗದಂತೆ, ಕೆಲವೇ ಜನಗಳ ಸೊತ್ತಾಗದಂತೆ ನೋಡುವುದು ನಮ್ಮ ಧೋರಣೆ ಪ್ರತಿವರ್ಷವೂ ಕ್ರಮಗತವಾಗಿ, ನಿಶ್ಚಯವಾಗಿ ವಿದ್ಯೆಯ ಪ್ರಸಾರ, ಉದ್ಯೋಗ ನಿರ್ಮಾಣ, ಜೀವನ ಭದ್ರತೆಗಳನ್ನು ಒದಗಿಸಲು ಪ್ರಯತ್ನಿಸುತ್ತೇವೆ ಬಡವರ ಮೇಲಿನ ತೆರಿಗೆಯ ಭಾರನನ್ನು ಇಳಿಸಿ, ವಿಷಮ ಶ್ರೀಮಂತಿಕೆಯನ್ನು ಹೆಜ್ಜೆ ಹೆಜ್ಜೆಯಾಗಿ ತಗ್ಗಿಸಿ, ಸರ್ವ ಸಮಾಜ ಹಿತ ಸಾಧಿಸುತ್ತೇವೆ ಯಾವುದೇ ಒಂದು ಪಂಗಡವು ದೇಶದ ಒಟ್ಟು ಹಿತವನ್ನು ತಡೆದು ಹಿಡಿಯುವುದಕ್ಕೆ ಬಿಡುವುದಿಲ್ಲ" ಎಂದು ಸ್ಥೂಲವಾಗಿ ತಿಳಿಸಿ ಅದನ್ನು ಸಾಧಿಸುವುದು ಹೇಗೆಂಬ ವಿಚಾರದಲ್ಲಿ ನಾಲ್ಕು ಮಾತುಗಳನ್ನು ಸೇರಿಸಿದರು: "ಅಧಿಕಾರ ಸೂತ್ರ ಕೈಗೆ ಬಂದ ಬಳಿಕ ಕ್ರಮಗತವಾದ ಶಾಸನಗಳಿಂದಲೂ, ಇಂಥ ಶಾಸನಗಳಿಗೆ ಜನ ಒಲಿಯುವಂತೆ ಮಾಡುವುದರಿಂದಲೂ, ಪ್ರಾಮಾಣಿಕ ದುಡಿಮೆಯಿಂದಲೂ, ಈಗಣ ಸರಕಾರದಲ್ಲಿ ತುಂಬಿರುವ ಕಶ್ಮಲ, ಜಡತೆಗಳನ್ನು ಹೋಗಲಾಡಿಸುವುದರಿಂದಲೂ, ಸಮಾಜ ವಿಘಾತಕ ಪ್ರವೃತ್ತಿಗಳನ್ನು ಧೈರ್ಯದಿಂದ ವಿರೋಧಿಸುವುದರಿಂದಲೂ ಇಷ್ಟು ಮಾಡಬಹುದು"

ತಿರುಮೂರ್ತಿಗೆ ಈ ಮಾತುಗಳಲ್ಲಿ ಕಾರ ಸಾಲದೆನಿಸುತ್ತದೆ. ಆದರೆ ಅವನಲ್ಲಿ ದೊಡ್ಡದೊಂದು ಗುಣವಿದೆ–"ಇಷ್ಟು ಸಾಕೆಂದು ಅರುಣಾಚಲಯ್ಯನವರು ಹೇಳಿದರೆ 'ಆಗಲಿ! ಒಪ್ಪುತ್ತೇನೆ' ಎಂಬ ವಿಧೇಯತೆ ಇತ್ತು ಘೋಷಣೆ ಸಿದ್ಧವಾಯಿತು ಅದನ್ನು ಮುದ್ರಿಸಿ, ಪ್ರಕಟಿಸಿ, ಹಂಚಿ ಅದರ ಜತೆಗೆ ತಾವೂ ಗ್ರಾಮಾಂತರಗಳನ್ನು ಸುತ್ತಿ ಜನಗಳ

ಬೆಂಬಲ, ವಿಶ್ವಾಸಗಳನ್ನು ಪಡೆಯುವ ಕೆಲಸ ಮಾತ್ರ ಸುಲಭವಲ್ಲ ವೆಂದು ಅವರಿಗೂ ತಿಳಿದಿತ್ತು. ಅದು ಎಷ್ಟು ಶ್ರಮದ ಕೆಲಸವೋ ಅಷ್ಟೇ ಹಣದ ಕೆಲಸವೂ ಹೌದು. ನಾಗಲಾಂಬೆ ಒಬ್ಬಳನ್ನು ಬಿಟ್ಟರೆ ಉಳಿದವರು ಯಾರೂ ಶ್ರೀಮಂತರಿರಲಿಲ್ಲ. ಆಕೆ ತನ್ನ ಹಣದ ಚೀಲ ವನ್ನು ಅರುಣಾಚಲಯ್ಯನವರಿಗೆ ಧಾರೆಯೆರೆದರೂ ಅದು ಸಾಲದು ಒಂದು ಸಂಸ್ಥಾನದಲ್ಲೆಲ್ಲಾ ಪ್ರಚಾರ ನಡೆಸಿ, ಪ್ರಚಾರದೊಂದಿಗೆ ಸಂಸ್ಥೆ ಯನ್ನು ಕಟ್ಟಿ ಬೆಳೆಯಿಸುವುದಕ್ಕೆ ಎಷ್ಟು ಹಣವಿದ್ದರೂ ಸ್ವಲ್ಪವೇ. “ದೇವರಿದ್ದಾನೆ, ನೋಡುವ” ಎಂದು ಅರುಣಾಚಲಯ್ಯ ತಮ್ಮ ಮಿತ್ರ ರೊಂದಿಗೆ ಕಲೆತು, ಆಶೆಯಲ್ಲಿ ಆಶೆಮಾಡಿಕೊಂಡು ಶ್ರಮಿಸತೊಡ ಗಿದ್ದಂತು ನಿಜ.

ಈ ಸಾರ್ವತ್ರಿಕ ಚುನಾವಣೆಯ ಉಕ್ಕು, ಉಬ್ಬರ, ಪ್ರಚಾರ, ಗದ್ದಲಗಳೆಲ್ಲಾ ರಾಜಧಾನಿಯಾದ ವಿಕ್ರಮನಗರದಲ್ಲೂ ಅಥವಾ ಇನ್ನಿ ತರ ಮುಖ್ಯ ಪಟ್ಟಣಗಳಲ್ಲೂ ಕಾಣಿಸಿ ಜನಜೀವನದ ಗಾಳಿಯಲ್ಲಿ ಧೂಳೆ ಬ್ಬಿಸಬಹುದಾದರೂ, ಗೊಂಡಾರಣ್ಯದ ಸಂದು ಮೂಲೆಗಳಲ್ಲಿ, ಹಳ್ಳಿ ಪಳ್ಳಿಗಳಲ್ಲಿ ಬೇಕಾದ ಆವೇಶ, ಉತ್ಸಾಹಗಳನ್ನು ತುಂಬಿಸುವುದು ಕಷ್ಟದ ಮಾತೇ. ಅದರಲ್ಲಿಯೂ ಅರಣ್ಯದ ಆದಿವಾಸಿಗಳಿಗೆ ಯಾವ ಗಾಳಿಯೂ ಬೀಸಿರಲಿಲ್ಲ ಇತ್ತೀಚೆಗಷ್ಟೆ ಸರಕಾರದ ಅವಿಚಾರಿ ಧೋರಣೆಯಿಂದಾಗಿ ಅವರ ಕಣ್ಣು ಹೊರಗಿನ ಪ್ರಪಂಚಕ್ಕೆ ತೆರದುದು ಗೊಂಡಾರಣ್ಯದಲ್ಲಿ ರಸ್ತೆಗಳನ್ನು ಕಡಿದದ್ದೆಂಬುದು–ತಮ್ಮ ಭಾವೀ ಜೀವ ನಕ್ಕೆ ವಿಘ್ನ, ಅದರಿಂದ ಕಾಡು ಬರಿದಾದೀತು, ಬೇಟೆ ಕಷ್ಟವಾದೀತು, ಬೇಸಾಯಕ್ಕೆ ನಷ್ಟವಾದೀತು–ಎಂಬ ಭಯವು ಉತ್ಪನ್ನವಾಯಿತು ಅದನ್ನು ತಿಳಿದ ಕೆಲವೇ ಕೆಲವರು ಗುಲಾಲಿ ಟೋಪಿಯವರಿಗೆ ಮರು ಳಾಗಿ ಅವರಿಗೆ ಬೆಂಬಲ ತೆತ್ತದ್ದೂ ನಿಜ. ಕೊಟ್ಟ ಬಂಬಲಕ್ಕೆ ಪ್ರತಿ ಯಾಗಿ ನಾಲ್ಕುಪಾಲು ದಂಡವನ್ನು ತೆತ್ತರು. ಧೈರ್ಯ ಹೋಯಿತು, ತಮ್ಮನ್ನು ಕೆಣಕಬಲ್ಲ ಸರಕಾರ ಬಂದಿದೆ—ಎಂಬ ಭಯವಾಯಿತು. ಭಯದಿಂದ ಕೈಗಿಲ್ಲದ ತ್ರಾಣ ಮನಸ್ಸಿನಲ್ಲಿಯೇ ಮೂಡಿ, ಅದರಲ್ಲೇ ಕುದಿದು ನಿರಾಶೆಗೊಂಡಿತು. ಇಂತಹ ನಿರಾಶೆಗೊಂಡ ಅಜ್ಞಾನಿಗಳ ಸಂಖ್ಯೆ ಅರಣ್ಯಗಳಲ್ಲಿ ಸಾಕಷ್ಟು ವಾಸಿಸಿತ್ತು. ಚುನಾವಣೆಯೆಂಬದು

ಸಂಖ್ಯಾಬಲವಷ್ಟೆ

ಗೊಂಡಾರಣ್ಯದ ಹೆಚ್ಚಿನ ಜನವಸತಿಯಿರುವುದು ವನಶ್ರೀ, ಶೀಲನತಿ, ಮಾನವತಿ ಮೊದಲಾದ ನದಿತೀರದ ಬಯಲುಗಳಲ್ಲಿ. ಅಲ್ಲಿನ ರೈತರು ಕ್ಷಾಮ ಕಂಡವರಲ್ಲ. ಆದರೆ ಯುದ್ಧೋತ್ತರ ಬೆಲೆಗಳಿಂದ ಕಂಗಾಲಾದವರು ತಮಗೆ ಏನು ಬೇಕೆಂದು ಅವರು ತಿಳಿಯರು, ಅವರ ಬಗ್ಗೆ ಹೇಳುವವರೂ ಇಲ್ಲ. ಅಂಥವರ ಬಳಿಗೆ ಆಗಾಗ ಸರಕಾರೀ ಅಧಿಕಾರಿಗಳೂ, ದೇಶವಾದಿ ಪ್ರಚಾರಕರೂ, ಬರತೊಡಗಿ "ನಾಡು ಬಹುವಾಗಿ ಸುಧಾರಿಸುತ್ತಿದೆ. ಎಷ್ಟೋ ಕೆಲಸ ಆಗಿದೆ, ಇನ್ನೆಷ್ಟೋ ಆಗುತ್ತಿದ" ಎಂದು ಸೌಕರ್ಯ, ಸಂಪದಗಳ ಕುರಿತು ಬಾಯಿ ತುಂಬ ಬಣ್ಣಿಸುತ್ತಿದ್ದರು. ಅವರಲ್ಲಿಗೆ ನಾಗರಿಕರ ಚುನಾವಣೆಯಗಾಳಿ ಬೀಸ ತೊಡಗಿದಾಗ "ಇವರಿಗೆಲ್ಲ ಈಗ ಎಚ್ಚರವಾಗಿದೆ. ಚುನಾವಣೆಗೆ ಮೊದಲು ನಮ್ಮ ಹಳ್ಳಿ ಇತ್ತೆಂದೇ ಗೊತ್ತಿರಲಿಲ್ಲ. ಈ ತನಕ ನಮ್ಮನ್ನು ಕಸವೆಂದು ತಿಳಿದವರು, ಈಗ, 'ನೀವೇ ದೇವರು' 'ನೀವೇ ದೇಶ' ಎಂದೆನ್ನುತ್ತಿದ್ದಾರೆ" ಎಂದು ತಿಳಿಯ ತೊಡಗಿದರು. ಇಂಥ ಸಮಯ ಸಾಧಕ ನಂಟರುಗಳನ್ನು ಕಂಡು ಜನಕ್ಕೆ ವಿಶ್ವಾಸ ಹುಟ್ಟುವ ಮೊದಲು ಅನುಮಾನ ಮೂಡುತ್ತದೆ

ಈ ವೇಳೆಯಲ್ಲಿ ಮಲೆನಾಡಿನ ಮೂಲೆಯಾದ ಕಿಗ್ಗಳ್ಳಿಯಂತಹ ಹಳ್ಳಿಯ ವಿದ್ಯಮಾನಗಳನ್ನು ಕುರಿತು ಒಂದೆರಡು ಮಾತು ಅಪ್ರಾಸಂಗಿಕವಲ್ಲ ಪಟ್ಟೆದಾರರಾದ ಜಯದೇವ, ವಾಮದೇವರು, ಅವರ ಆಳು ಮುಕ್ಕಣ್ಣ, ಅವನ ಮಗ ಮಾನಪ್ಪ ಇಂಥವರೆಲ್ಲ ಗೊಂಡಾರಣ್ಯದ ಜನ ಸಮೂಹದಲ್ಲಿ ತೀರ ಸಾಮಾನ್ಯರು ಅನ್ನದ ಪರೀಕ್ಷೆಯನ್ನು ಅಗುಳಿನಿಂದ ತಿಳಿಯುವಂತೆ, ಈ ಪರಿಚಿತರ ಮನೋವೃತ್ತಿಯಿಂದ ಸಾಮಾನ್ಯರ ಮನೋವೃತ್ತಿಯನ್ನು ತಿಳಿಯಬಹುದು. ಅವರ ಮೇಲೆಲ್ಲ ಹಿಂದೆ ನಡೆದ ಕೆಲವು ಘಟನೆಗಳು ತಮ್ಮ ಪ್ರಭಾವವನ್ನು ಬೀರಿದ್ದುವು ಮುಕ್ಕಣ್ಣ ನೋಡಿದ ನರಬೇಟೆಯ ಚಿತ್ರ ಅವನ ಮೂಕ ಬಾಯಿ, ಮನಸ್ಸುಗಳನ್ನು ಹಲವು ಬಾರಿ ಕೆಣಕಿದ್ದವು. ಎಂಥ ನೆಪದಿಂದಲೂ ಆ ತೆರನ ಅನ್ಯಾಯಗಳು ಸರಕಾರದ ವಿಷಯದಲ್ಲಿ ಅವನಿಗೆ ಜಿಗುಪ್ಸೆ ತಂದುಕೊಟ್ಟವೆ.

ಅವನ ಮಗ ಇನ್ನೊಂದೇ ಜಾತಿ. ಆತ|ಧನಿಗಳ ಮನೆಯಲ್ಲಿ, ವಿಕ್ರಮನಗರದಲ್ಲಿ ನಾಲ್ಕುದಿನ ತಿರುಗಿದವ,|ಹೆತ್ತಕ್ಷರ ಓದುಬಲ್ಲವ. ಅವನಿಗೆ ಯೌವನ, ಮೂವತ್ತರ ವಯಸ್ಸು ಅಂಥ ವಿದ್ಯಾವಂತ ನಲ್ಲವಾದರೂ ಕೇಳಿದ ಸುದ್ದಿಗಳಿಗೆ ಕಿವಿ ನಿಮಿರಿಸಿ, ಅವೆಲ್ಲ ನಿಜವೆಂದು ನಂಬಿ, ಅಷ್ಟರಮಟ್ಟಿಗೆ ತಲೆಯನ್ನು ಕೆಡಿಸಿಕೊಂಡವನು ಆತ ಕಿಗ್ಗಳ್ಳಿಗೆ ಒಮ್ಮೊಮ್ಮೆ ಬಂದರೆ, ರಾಜಕೀಯದ ಉಪನ್ಯಾಸ ತೊಡಗುತ್ತಾನೆ· "ಅಪ್ಪಾ, ಹೀಗೆ ನಡೆದರೆ ದೇಶ ನರಿ, ನಾಯಿ ತಿಂದು ಹಾಳಾಗುತ್ತದೆ" ಎಂದು ಹೇಳುತ್ತಾನೆ ಮುಕ್ಕಣ್ಣನಿಗೆ ಗೊತ್ತಿಲ್ಲದ ಹತ್ತೆಂಟು ಹೆಸರು ಅವನಿಗೆಗೊತ್ತು ಯಾವ ಸಾಹುಕಾರರು ಎಷ್ಟು ತಿಂದರು, ಯಾವ ಯಾವ ಮಂತ್ರಿಗಳು ಎಷ್ಟು ಗಿಟ್ಟಿಸಿದರು, ಸರಕಾರದ ಎಷ್ಟು ಕೋಟಿ ಹಣ ಹೇಗೆ ಕರಗಿತು ಎಂದು–ಬಲ್ಲವರಿಗಿಂತಲೂ ಧೃಢನಂಬಿಕೆಯಿಂದ ಆಡುತ್ತಿರುವಾಗ–ಮುಕ್ಕಣ್ಣ ನಂಬಲಾರ, ಬಿಡಲಾರ. ನಂಬಿಕೆಗೆ ಪ್ರೀತಿ ಕಾರಣವಾದರೆ ಮಗನ ಮಾತನ್ನು ತಂದೆ ಒಪ್ಪಬೇಕು. ರಾಜ ನನ್ನು ಕಿತ್ತಾಗಲೇ, 'ಮುಂದೆ ಅರಾಜಕತೆಯುಂಟಾಗುತ್ತದೆ' ಎಂದು ಹೇಳಿದ ಮುಕ್ಕಣ್ಣನ ಮಾತುಗಳಿಗೆ ಇವೆಲ್ಲ ಒಪ್ಪುವ'ಸಾಕ್ಷಿಗಳಾಗುತ್ತವೆ. ಈ ಮಾತುಗಳ ಬೆನ್ನಿಗೆ ಮಾನಪ್ಪ ತೀರ್ಮಾನವಾಗಿ "ಇವರಿಗೆಲ್ಲ ಬುದ್ಧಿ ಕಲಿಸಲು ಗುಲಾಲಿ ಟೋಪಿಯವರೇ ಬೇಕು" ಎಂದು ಹೇಳಿದರೆ "ಹೌದೋ, ಏನೋ" ಎಂದೂ ಅನಿಸುತ್ತದೆ–ಅವನಿಗೂ ಒಮ್ಮೊಮ್ಮೆ

ಮಾನಪ್ಪ ವಿಕ್ರಮನಗರಕ್ಕೆ ಹೋಗಿ ಬರುತ್ತಿದ್ದುದು ಹೆಚ್ಚಿದಂತೆ, ಇಂತಹ ಸುದ್ದಿಗಳೂ, ಗುಲಾಲಿ ಟೋಪಿಯವರ ಮೇಲಿನ ಅಭಿ ಮಾನವೂ ಅವರ ನಾಯಕನಾದ ಸೇತುರಾಯನ ಕುರಿತಾದ ಬಣ್ಣನೆ ಗಳೂ ಹೆಚ್ಚಾದುವು ಅದರ ಪ್ರಭಾವ ಮುಕ್ಕಣ್ಣನ ಮೇಲೆಯೂ ಉಂಟಾಗತೊಡಗಿತು ಸೇತುರಾಯ, ದೈವವೇ ದುಷ್ಟ ಶಿಕ್ಷಣಕ್ಕಾಗಿ ಅವತರಿಸಿ ಬಂದ ರಾಮನಂತೆ ಕಾಣಿಸಿದ, ಪ್ರಧಾನಿ ವಾಮನರಾಯ ದಶಕಂಠನಂತೆ ಕಾಣಿಸಿದ ಆದರೆ ಅದನ್ನೆಲ್ಲ ಧನಿಗಳ ಮುಂದೆ ಹೇಳ ಲಾರ ಧನಿಗಳೇ ಅವನ ಮುಂದೆ ಹೇಳುತ್ತಾರೆ: "ಮೊನ್ನೆ ಚನ್ನ ಗಾವಿ ದೇಸಾಯರ ಮನೆಯನ್ನು ಗುಲಾಲಿ ಟೋಪಿಯವರು ಲೂಟಿ ಮಾಡಿದರಂತೆ ಇದ್ದ ಚಿನ್ನ, ದುಡ್ಡು ದೋಚಿಕೊಂಡು ಹೋದದ್ದಲ್ಲದೆ

ಎದುರಿಗೆ ಬಂದ ಅವರ ಹೆಂಡತಿಯನ್ನೂ, ಮೂರುವರ್ಷದ ಒಂದು ಮಗು ವನ್ನೂ ಕೊಂದರಂತೆ" ಎಂದರು ಒಮ್ಮೆ ಇದು ತೀರ ಈಚೆ ನಡೆದ ಕತೆ ಗುಲಾಲಿ ಟೋಪಿಯವರ ವಿಷಯದಲ್ಲಿ ಧನಿಗಳ ಬಾಯಿಂದ ಬರುತ್ತಿದ್ದ ಮಾತುಗಳೂ, ಅವನ ಮಗನ ಬಾಯಿಂದ ಬರುತ್ತಿದ್ದ ಸುದ್ದಿ ಗಳಿಗೂ ಅರ್ಥಾರ್ಥ-ಸಂಬಂಧವಿಲ್ಲ ಧನಿಗಳ ಸುದ್ದಿಯೇ ಸುಳ್ಳೆಂದು ತಿಳಿಯುತ್ತಾನೆ 'ಬಹು ಹಿಂದೆ ಕಂಪೆನಿ ಸರಕಾರ ಇದ್ದಾಗ ಹಾಗಾಗಿದ್ದಿರಬಹುದೇನೋ! ಈಗ ಹಾಗೆಂದಾದರೂ ಆದೀತೇ,' ಎಂದು ಯೋಚಿಸುತ್ತಾನೆ ಅಂಥ ಸುದ್ದಿಗಳು ಬೇಕಷ್ಟು ಇವೆ ಅವನ್ನು ನಂಬಲು ಮನಸ್ಸು ಹಿಂಜರಿಯುತ್ತದೆ ಸುದ್ದಿ ನಿಜವಿದ್ದರೂ, ಮಗ ಹೇಳುವ ಮಾತು ನಿಜವಾದರೆ, ಅದು ಗುಲಾಲಿ ಟೋಪಿಯವರ ಕೆಲಸವಲ್ಲ.

ಮುಂದೊಂದು ದಿವಸ ಮಾನಪ್ಪ ವಿಕ್ರಮನಗರದಿಂದ ಒಂದು ತಿಂಗಳ ವಿಶ್ರಾಂತಿಗೆ ಮನೆಗೆ ಬಂದ ಅವನಿಗೆ ಮದುವೆಯಾಗಿದೆ, ಹೆಂಡತಿ ಮಕ್ಕಳಿದ್ದಾರ "ಇರಲಿ, ನಾಲ್ಕು ದಿನ ಊರಲ್ಲಿ ಸುಖವಾಗಿ" ಎಂದು ಯೋಚಿಸಿ ಅವನ ಬದಲು ತಾನು ನಗರಕ್ಕೆ ಹೋಗುತ್ತೇನೆಂದು ಧನಿಗಳಿಗೆ ಹೇಳಿದ ಹೊರಡುವ ದಿನ ಬಂದಾಗ ಧನಿಗಳು ಯೋಚನೆಗೆ ಈಡಾದರು. 'ಚೆನ್ನಗಾವಿ ದೂರದ ಹಳ್ಳಿಯಲ್ಲ ನಾಳೆ ಇಲ್ಲಿಯೂ ಅಂಥ ಉಪಟಳವಾದರ ಏನುಗತಿ?' ಎಂದು ಯೋಚಿಸಿ ಇನ್ನೊಮ್ಮೆ ಸಂಸಾರ ಸಮೇತರಾಗಿ ತಾವೇ ನಗರಕ್ಕೆ ಹೋಗುವ ನಿರ್ಧಾರ ಮಾಡಿದರು ಹೊರಡುವ ದಿನವೂ-ನಿಶ್ಚಯವಾಯಿತು ಆ ಕಾಲ ಬಂದಾಗ ಮುಕ್ಕಣ್ಣನನ್ನು ಕರೆದು "ಏನೇ ಆಗಲಿ, ಸದ್ಯ ನಾವಿಬ್ಬರೂ ಹೋಗಿ ಸಂಸಾರವನ್ನು ಅಲ್ಲಿ ಬಿಟ್ಟು, ಅನಂತರ ಒಬ್ಬೊಬ್ಬರೇ ಇಲ್ಲಿ ಬಂದು ಇರುತ್ತೇವೆ ನಮಗ ತೀರ ಧೈರ್ಯ ಕಟ್ಟಿದೆ ನೀನು ಇಲ್ಲಿಯ ಮನೆಯ ಕಾವಲಿಗೆ ಬೇಕು ನೀನಿದ್ದರೆ ನಮಗೆ ಧೈರ್ಯ ನಿನ್ನ ಮಗ ತಿಂಗಳು ಕಳೆದು ನಗರಕ್ಕೆ ಬಂದರೂ ಸಾಕು ಅಂಥ ಕಷ್ಟ ಕಾಲ ಬಂದರ ಕರಣಿಕರಿದ್ದಾರ, ದೊಂಡಾರಿದ್ದಾರೆ, ನಾಲ್ಕುಜನ ಒಕ್ಕಲೂ ಬಂದಾರು" ಎಂದರು

"ಅಯ್ಯನಿಗ ದೇಸಾಯಿ ಮನೆಯ ನೆನಪು ಬಂತೇ?"

"ಹೌದು ಮುಕ್ಕಣ್ಣಾ, ಅವರ ಮನೆಯ ಸುತ್ತಲೂ ಒಕ್ಕಲು

ಮನೆಯಿದ್ದೂ ಹಾಗಾಯಿತು ಇಲ್ಲೋ, ಪೋಲೀಸುಠಾಣೆಯೂ ದೂರ ಆಸ್ಪತ್ರೆಗೆ ಐವತ್ತು ಮೈಲು ಬಸ್ಸಿನ ಗಡಿಗೆ ಹದಿನಾರು ಮೈಲು"

ಧನಿಯ ಮಾತಿಗೆ ಮುಕ್ಕಣ್ಣ ಒಡಂಬಟ್ಟು ಮನೆಯ ಕಾವಲಿಗೆ ಕುಳಿತಿರಬೇಕಾಯಿತು ಆ ಕೆಲಸವನ್ನು ತಂದೆಗೇ ಹೇಳಿದ್ದನ್ನು ಕಂಡು ಮಾನಪ್ಪ "ಧನಿಗಳೇ, ನನ್ನ ಮೇಲೆ ನಂಬಿಗೆ ಸಾಲದು" ಎಂದು ಅಂದ. ಮುಕ್ಕಣ್ಣನಿಗೆ ಆ ಮಾತು ಅರ್ಥವಾಗದೆ "ಹೌದೋ, ನೀನು ಸಣ್ಣವ. ಪೇಟೆಯ ಮನೆಗೆ ಸಾಕು ಇದು ಹಳ್ಳಿ, ದೊಡ್ಡಮನೆ ಅದರಲ್ಲಿಯೂ ನಮ್ಮ ಧನಿಗಳಿಗೆ ಇತ್ತೀಚಿಗೆ ತುಂಬ ಭಯ ನಾಲ್ಕು ಕಾಸು ಇದ್ದವರು ಭಯಪಡಬೇಕಾದ್ದು ಸಹಜವೇ ಅದೂ, ಚನ್ನಗಾವಿ ದೇಸಾಯಿಯವರ ಕತೆ ಕೇಳಿದಮೇಲೆ ಅವರು ತುಂಬ ಹೆದರಿದ್ದಾರೆ"

ಆದಕ್ಕೆ ಮಾನಪ್ಪ "ಅಪ್ಪಾ, ಅಲ್ಲಿ ದರೋಡೆ, ಕೊಲೆ ಆದದ್ದು ನಿಜ ಆದರೆ ಅದರ ಗುಟ್ಟು ಬೇರಂತೆ ಅದನ್ನೆಲ್ಲಾ ಸರಕಾರದವರೇ ಮಾಡಿಸಿ, ಗುಲಾಲಿ ಟೋಪಿಯವರ ಹೆಸರುಹಾಕಿ, ಜನರಲ್ಲಿ ಅಪಕೀರ್ತಿ ಬರುವಹಾಗೆ ಉಪಾಯ ಮಾಡುತ್ತಿದ್ದಾರೆ ಮುಂದಿನ ಚುನಾವಣೆ ಬಂತಲ್ಲ!" ಎಂದ

ಆ ಗುಟುಕು ಮುಕ್ಕಣ್ಣನಿಗೂ ಕುಡಿಯಲಿಕ್ಕಾಗಲಿಲ್ಲ "ಏನು ಮರುಳು ಮಾತು!" ಎಂದ

"ಮರುಳುಮಾತೇಕೆ? ಚಂಗನಹಳ್ಳಿಯ ಸುದ್ದಿ ನೀನೇ ಕಂಡಿದ್ದೆಯಲ್ಲ" ಎಂದ ಮಗ ಮುಕ್ಕಣ್ಣನ ವಾದ ಸಾಗಲಿಲ್ಲ.

ಇತ್ತ ಧನಿಗಳು ಸಂಸಾರ ಸಮೇತರಾಗಿ ಹೋದ ಮೇಲೆ ಮನೆಯಲ್ಲಿ ಉಳಿದವರು–ಅಡಿಗೆಯವರು, ಕೆಲಸದವರು. ಧನಿಗಳ ಬೆನ್ನಿಗೆ ಕರಣಿಕರೂ ತಮ್ಮ ಸಂಸಾರವನ್ನು ತವರಿಗೆ ಕಳುಹಿಸಿ, ತಾವೊಬ್ಬರೇ ಪಟ್ಟೆದಾರರ ಮನೆಯ ಜಗಲಿಯಲ್ಲಿ ಕಾವಲು ಕುಳಿತರು ರಾತ್ರಿ ಕಾವಲಿಗೆ ಇನ್ನೂ ನಾಲ್ಕು ಗಂಡಾಳು ಬರುತ್ತಿದ್ದರು ಮುಕ್ಕಣ್ಣ ದಿನವೆಲ್ಲ ಅಲ್ಲೇ ಇರುವ. ಮಾನಪ್ಪ ಮಾತ್ರ ತಂದೆ ಮನೆಯಲ್ಲಿ ಇರುತ್ತಿದ್ದ. ಒಂದು ವಾರದಲ್ಲಿ ವಾಮದೇವರು ಒಬ್ಬರೇ ಮರಳಿ ಬಂದರು. ಮನೆಯನ್ನು ತೀರ ಬಿಟ್ಟಿರುವುದಕ್ಕೂ ಅಧೈರ್ಯ. ಬರುವಾಗ ಅಣ್ಣ ಜಯದೇವರು "ತುಂಬ ಎಚ್ಚರವಾಗಿರಿ. ಅಪಾಯ ಬಂದರೆ ಎದುರಿನ

ಗುಡ್ಡದಲ್ಲಿ ಬಣವೆ ಹೊತ್ತಿಸಿ ದೊಂಡಾಲರಿಗೆ ಸಂಕೇತ ಕೊಡಿ" ಎಂದು ಹೇಳಿದ್ದರು ಅವರು ವಹಿಸಿದ ಎಚ್ಚರಗಳೆಲ್ಲ ಸರಿಯೆ ಆದರೆ ಕೆಟ್ಟ ಗಳಿಗೆ ಬಂದ ಕಾಲದಲ್ಲಿ ಯಾವುದೂ ಅವರನ್ನು ಕಾಯಲಿಲ್ಲ ಅಮಾವಾಸ್ಯೆ ರಾತ್ರಿಯೊಂದು ಬಂದಿತು ಸುತ್ತಣ ನುಲೆಯನ್ನು, ಕಿಗ್ಗಳ್ಳಿಯನ್ನು ಕತ್ತಲು ಆವರಿಸಿತು ಮನೆಯ ಜಗಲಿಯ ಮೇಲೆ, ರಾತ್ರಿ ಹತ್ತು ಗಂಟೆಯ ತನಕ ಚಿಕ್ಕ ಧನಿಗಳು ಕರಣಿಕರೊಡನೆ ತಾಂಬೂಲ ಮೆಲ್ಲುತ್ತ, ಮಾತನಾಡುತ್ತ ಕುಳಿತಿದ್ದರು ತುಸು ದೂರದಲ್ಲಿ ಮುಕ್ಕಣ್ಣ ತಾನು ಎಲೆ ಅಡಿಕೆ ಜಗಿಯುತ್ತಾ, ಏನಾದರು ಸುದ್ದಿ ಹೇಳುತ್ತಾ ಕುಳಿತಿದ್ದ ಹದಿನೆರಡು ಗಂಟೆಗಿಂತ ಮೊದಲು ಅವನು ಮಲಗುವುದೆಂಬುದು ಇಲ್ಲ. ಮಾತಿನ ಎಡೆಯಲ್ಲಿ, ತಂಬುಲ ತುಪ್ಪುವುದಕ್ಕೆಂದು ಆತ ಅಂಗಳಕ್ಕೆ ಇಳಿದು ಈಚಿನ ತೆಂಗಿನ ಏರಿಗೆ ಬಂದಾಗ ಯಾರೋ ಅವನನ್ನು ತಬ್ಬಿ ಹಿಡಿದು, ಬಾಯಿಗೆ ಅರಿವೆ ಒತ್ತಿ, ಗೋಣಿಯ ಮುಸುಕು ಹಾಕಿ, ಹೊತ್ತು ಸಾಗಿಸಿದರು ಒಮ್ಮೆ ಚೀರಿದ ಮುಂದೆ ಸುದ್ದಿಯಿಲ್ಲ. ಏನು ಸದ್ದೆಂದು ಗಾಬರಿಯಿಂದ ವಾಸುದೇವರು ಎದ್ದು ಮೂಲೆಯಲ್ಲಿರಿಸಿದ ಬಂದೂಕನ್ನು ತರಲು ಹೋಗುವುದರೊಳಗೆ, ಒಂದೇ ಬಾರಿಗೆ ಆರೆಂಟು ಕೋವಿಗಳ ಗುಂಡು ಕೇಳಿಸಿತು ಒಂದೇಟು ಅವರ ಕಾಲಿಗೂ ತಗಲಿ ಅವರು ನೆಲಕ್ಕುರುಳಿದರು ಕರಣಿಕರು ಚೀರಿದರು, ಕಿರಿಚಿದರು ಕಾವಲಿನ ಆಳುಗಳು ದೊಣ್ಣೆಗೆ ಕೈಯಿಕ್ಕುವ ಮೊದಲೇ ಏಟು ತಿಂದು ಮಲಗಿದರು.

ಮುಂದೆ ಯಾರು? ಏನು? ಎಂಬುದೆಲ್ಲ ಅರ್ಧಮರ್ಧ ಊಹೆ. ಹತ್ತಿಪ್ಪತ್ತು ಮಂದಿ ದರೋಡೆಖೋರರು ಮುಖಕ್ಕೆ ಮಸಿ ಸವರಿಕೊಂಡು ಆಯುಧಪಾಣಿಗಳಾಗಿ ಹೊಕ್ಕರು, ತಡೆದವರನ್ನು ಹೊಡೆದು ಕೆಡೆದರು, ಬಿದ್ದವರನ್ನು ಕಟ್ಟಿ, ಬಾಯಿಗೆ ಅರಿವೆ ತುಂಬಿ, ತಮ್ಮ ಕೆಲಸ ಸಾಗಿಸಿದರು. ಒಬ್ಬಿಬ್ಬರ ಚೀರಾಟ ಕೇಳಿಸಿತೋ ಇಲ್ಲವೋ,– ಹೊರಗಿನಿಂದ ಯಾರೂ ಸಹಾಯಕ್ಕೆ ಬರಲಿಲ್ಲ ಬೆಳಗಾಗುವುದರೊಳಗೆ ಬಂದವರು ಹೋಗಿದ್ದರು, ಮನೆಯ ಸಂದುಗೊಂದುಗಳು ಅಗೆಯಲ್ಪಟ್ಟಿದ್ದುವು; ಪೆಟ್ಟಿಗೆಗಳು, ಸಂದೂಕಗಳು ಎಲ್ಲ ಮುರಿದು ಬಿದ್ದಿದ್ದುವು. ಮನೆಯ ಕೋವಿಗಳೆಲ್ಲವೂ ಮಾಯ. ಗುಂಡಿನ ದನಿ

ಕೇಳಿ, ಸೂಡಿ ಹಿಡಿದು ರಕ್ಷಣೆಗೆ ಮೊದಲು ಧಾವಿಸಿ ಬಂದವರೆಂದರ, ಹೊಂಡಾಲರು ಸಂಕೇತದ ಬಣಬೆ ಉರಿಯದಿದ್ದರೂ, ಆರೆಂಟು ಬಾರಿ ಗುಂಡಿನ ಧ್ವನಿ ಕೇಳಿಸಿ ಅವರು ಎಚ್ಚರಗೊಂಡರು ಅಲ್ಲಿಂದ ಜನರನ್ನು ಕೂಡಿಸಿಕೊಂಡು. ಕತ್ತಿ, ಕೋವಿ ಹಿಡಿದುಕೊಂಡು, ಸೂಡಿ ಹಿಡಿದು ಬಟ್ಟವನ್ನೇರಿದು ಬರುವಾಗ ಬೆಳಗಿನ ಜಾವವಾಗಿತ್ತು. ಬರುವುದರೊಳಗೆ ಆಗುವ ಅನರ್ಥವೆಲ್ಲ ನಡೆದುಹೋಗಿತ್ತು ಕಾವಲಿನ ಆಳುಗಳಲ್ಲಿ ಒಬ್ಬ ನತ್ತೇಹೋಗಿದ್ದ ಮೂವರಿಗೆ ಸಾಕಷ್ಟು ಗಾಯವಾಗಿತ್ತು. ವಾಸುದೇವರು ಉರುಳಿಬಿದ್ದಿದ್ದರು ಹಿಂಗಾಲಿನ ಮಾಂಸ ಖಂಡ ಕತ್ತರಿಸಿತ್ತು ಪುಣ್ಯಕ್ಕೆ ಎಲುಬು ತುಂಡಾಗಲಿಲ್ಲ ಅವರೆಲ್ಲರ ಗಾಯಗಳಿಗೆ ಉಪಚಾರಗಳಾದುವು, ಕಟ್ಟಿದವರನ್ನು ಬಿಗಿಸಿದರು "ಮುಕ್ಕಣ್ಣನೆಲ್ಲ? ಕರಣಿಕರೆಲ್ಲಿ" ಎಂದು ಹುಡುಕ ತೊಡಗಿದರು ಅಲ್ಲಿಂದ ಅವನ ಮನೆಗೆ ಜನ ಹೋಯಿತು ಮಾನಪ್ಪ, ಅವನ ಹೆಂಡತಿ ಮಕ್ಕಳು ಎಲ್ಲರೂ ಓಡಿಬಂದರು "ಗುಂಡಿನ ಸದ್ದು ಕೇಳಿಸಲಿಲ್ಲವೆ?" ಎಂದು ಮಾನಪ್ಪನನ್ನು ಪ್ರಶ್ನಿಸಿದರೆ "ಕೇಳಿದ್ದರೆ ಓಡಿಬರುತ್ತಿರಲಿಲ್ಲವೇ" ಎಂದ.

ಬೆಳಕು ಹರಿದಮೇಲೆ ಊರ ಜನರು ಕಲೆತರು ಪೋಲೀಸು ಠಾಣೆಗೆ ಸುದ್ದಿ ಹೋಯಿತು ಗಾಯಗೊಂಡವರನ್ನು ಗಾಡಿಯಲ್ಲಿ ಹಾಕಿ ಆಸ್ಪತ್ರೆಗೆ ಸಾಗಿಸುವ ಕೆಲಸ ನಡೆಯಿತು ವಾಸುದೇವರು ತಮ್ಮ ಗಾಯ ಸಾಮಾನ್ಯವೆಂದು ಅಲಕ್ಷಿಸಿ, ಮದ್ದಿನ ಲೇಪ ಹಚ್ಚಿ, ಬಟ್ಟೆ ಸುತ್ತಿಕೊಂಡು ಅಲ್ಲಿಯೇ ಕುಳಿತರು, ಮುಕ್ಕಣ್ಣ ಮತ್ತು ಕರಣಿಕರ ಶೋಧೆಗೆ ಜನಗಳನ್ನು ಅಟ್ಟಿದರು ಆಳುಗಳು ಗುಡ್ಡ, ತೋಟ, ತೋಡು, ಹೊಲ, ಬೆಟ್ಟಗಳನ್ನು ಹುಡುಕಾಡತೊಡಗಿದರು ಬಹು ಹೊತ್ತು ಹುಡುಕಿದಮೇಲೆ—ಒಂದು ಕಣಿಯಲ್ಲಿ, ಬಾಯಿಗೆ ಅರಿವೆ ತುಂಬಿಸಿ, ಕೈಕಾಲು ಬಿಗಿದ ಕರಣಿಕರ ಶರೀರ ದೊರೆಯಿತು ಅವರನ್ನು ಬಿಡಿಸಿ, ಹೊತ್ತು ತರುವಾಗ ಪೂರ್ಣ ಸ್ಮೃತಿಯು ಇದ್ದಿರಲಿಲ್ಲ ತಂದು ಕಣ್ಣಿಗೆ ನೀರೆರೆಚಿ, ಬಾಯಿಗೆ ನೀರು ಸುರಿಸಿ ಉಪಚರಿಸಿದಾಗ "ಧನಿಗಳೆಲ್ಲಿ, ಮುಕ್ಕಣ್ಣನೆಲ್ಲಿ?" ಎಂದು ಕೇಳಿದರು. ನಂಜೆಯ ತನಕ ಮುಕ್ಕಣ್ಣನ ಸಲುವಾಗಿ ಹುಡುಕಾಟ ನಡಯಿತು ಮಾನಪ್ಪನ

ಹೆಂಡತಿ ಮಕ್ಕಳು ಅವನಿಗಾಗಿ ಅಳುತ್ತಿದ್ದರು. ಇನ್ನೂ ಸತ್ತು ಬಿದ್ದ ಒಬ್ಬ ಆಳಿನ ಶವವು ರಕ್ತದಲ್ಲಿ ತೊಳಲಾಡುತ್ತಿತ್ತು. ಪೋಲೀಸರು ಬರುವತನಕ ಅದು ಅಲ್ಲಿಯೆ ಬಿದ್ದಿರಬೇಕು. ಎಲ್ಲರಿಗೂ ಧೈರ್ಯ, ಸಮಾಧಾನ ಹೇಳುವ ಕೆಲಸ ವಾಮದೇವರೊಬ್ಬರಿಗೇ.

ಕತ್ತಲು ಹರಿಯುವ ವೇಳೆಗೆ ಕಾಲು ಕುಂಟುತ್ತಾ ಸಮೀಪದ ಕಾಡೊಂದರ ಮೂಲೆಯೊಂದರಿಂದ, ಕಂಗಾಲನಾದ ಮುಕ್ಕಣ್ಣ ತಾನಾಗಿಯೇ ಜೀವ ಎಳೆದುಕೊಂಡು ಬಂದ. ಆತ ನುಗ್ಗುನುರಿಯಾಗಿದ್ದ ಬಂಧನಕ್ಕೊಳಗಾದಾಗ ಎಷ್ಟೆಲ್ಲ ಉರುಳಾಡಿದನೋ! ಅವನ ಬಾಯಿಗೆ ಚಂಡು ತುರುಕಿಸಿ, ಹೊತ್ತು, ಕಾಡಿನ ಮೂಲೆಯಲ್ಲಿ ಎಸೆದಿದ್ದರು. ಬಾಯಿಗೆ ತುಂಬಿದ ಅರಿವೆಯಲ್ಲೋ, ಇನ್ನೇತರಲ್ಲೋ ಅಮಲು ಪದಾರ್ಥವಿದ್ದುದರಿಂದ ಅವನ ಪ್ರಜ್ಞೆ ಕಳೆದು ಹೋರಾಟ ಶಾಂತವಾಯಿತು. ಅಮಲು ಕಳೆದು ಎಚ್ಚರ ಬರುವಾಗ ಬಹು ಹೊತ್ತು ಸಂದಿತ್ತು. ಹಾಗೆ ಎಚ್ಚರಗೊಂಡು, ಹಿಂದಣ ರಾತ್ರಿಯ ನೆನಪು ತಂದುಕೊಂಡು, ದಿಕ್ಕು ತಿಳಿದು, ದಾರಿ ಹುಡುಕಿ, ಬೆಟ್ಟ ಇಳಿದು ಬರುವಾಗ ಭೀತಪ್ರೇತನಾಗಿ ಮರಳಿದ.

ಬರುವಾಗ ದಾರಿಯುದ್ದಕ್ಕೂ ಮನಸ್ಸಿನಲ್ಲಿ ಕೊಲೆ, ಸುಲಿಗೆ, ದರೋಡೆಗಳ ಕನಸು ಕಟ್ಟಿಸಿಕೊಂಡು ಬಂದ ಏನೇನು ಕಾಣುವೆನೆಂದುಕೊಂಡು ಬಂದನೋ ಅದನ್ನೆಲ್ಲಾ ಕಂಡ. ಧನಿಗಳ ಗಾಯಗೊಂಡ ಕಾಲು, ಕರಣಿಕರ ಪೆಟ್ಟು ಮುಖ, ಸಾಲದುದಕ್ಕೆ ರಕ್ತದಲ್ಲಿ ಇನ್ನೂ ಬಿದ್ದಿರುವ ತನ್ನೊಬ್ಬ ಗೆಳೆಯನ ಶವವೊಂದನ್ನು ಕಂಡದ್ದಾಯಿತು. ಮನೆಯ ಮೂಲೆ ಮೂಲೆಗೂ ಹೋಗಿ ನೋಡಿದ: "ಧನಿಯೇ, ನಾನು ಇದ್ದೂ ವ್ಯರ್ಥವಾಯಿತಲ್ಲ" ಎಂದು ಬೊಬ್ಬಿಟ್ಟು ಅಳತೊಡಗಿದ. "ಹೋಗಲಿ ಮುಕ್ಕಣ್ಣ, ನಿನ್ನ ಜೀವವನ್ನಾದರೂ ಇಟ್ಟರಲ್ಲ; ಪಾಪ ಕೆಂಚ ಒಬ್ಬ ಹೋಗಿಯೇ ಹೋದ. ಉಳಿದ ಮೂವರು ಬದುಕಿಯಾರು. ಆದರೆ ಆಸ್ಪತ್ರೆಗೆ ಸೇರುವಾಗ ಎಷ್ಟು ಹೊತ್ತಾಗುತ್ತದೋ. ಗಾಡಿ, ಮೋಟಾರುಗಳು ಅನ್ನುವಾಗ ಏನೆಲ್ಲ ಆಗುತ್ತದೋ" ಎಂದು ಧನಿಗಳು ಹಲುಬಿದರು. ಆ ರಾತ್ರಿಯೇ ಪೋಲೀಸು ಪಡೆಯೊಂದು ಅಲ್ಲಿಗೆ ಬಂತು. ಇನ್ನು ಅವರ ಊಟ,

ಉಪಚಾರ, ತನಖಿ, ಹೇಳಿಕೆ, ಕೇಳಿಕೆ, ಬೇಕಾದ ಬೇಡವಾದ ಪ್ರಶ್ನೋತ್ತರಗಳು ನಡೆದು, ಶವವನ್ನು ಸಾಗಿಸಿ ಪೀಠಿಕೆಯ ಪ್ರಕರಣ ಮುಗಿಯುವಾಗ ಒಂದು ರಾತ್ರಿಯೆಲ್ಲ ಕಳೆಯಿತು. ಈ ಘಟನೆಯ ಪರಿಣಾಮವಾಗಿ ಒಂದು ಜೀವ ಹೋದುದಲ್ಲದೆ ಮೂರು ಜೀವಗಳಿಗೆ ಅಪಾಯವಾಯಿತು ಹತ್ತಿಪ್ಪತ್ತು ಸಾವಿರ ರೂಪಾಯಿಗಳ ಚಿನ್ನ, ನಗದು ಹಣ ಕಣ್ಮರೆಯಾಯಿತು

ದರೋಡೆಯ ಸುದ್ದಿ ನಗರಕ್ಕೆ ಮುಟ್ಟಿ, ಅಣ್ಣ ಜಯದೇವರು ಗುಲಾಲಿ ಪಡೆಯುವರನ್ನು ಶಪಿಸುತ್ತಾ ಮನೆಗೆ ಬಂದರು ಅಣ್ಣ ತಮ್ಮಂದಿರಿಬ್ಬರ ಮನಸ್ಸಿನಲ್ಲೂ, ಕರಣಿಕರ ಮನಸ್ಸಿನಲ್ಲೂ ಇದು ಸಾಮಾನ್ಯ ದರೋಡೆಕಾರರ ಕೆಲಸವಲ್ಲವೆಂದು, ಗುಲಾಲಿ ಟೋಪಿ ಯವರದೇ ಕೆಲಸವೆಂದು ನಂಬಿಕೆ ನಟ್ಟುಹೋಗಿತ್ತು. "ಆ ಪುಣ್ಯಕ್ಕೆ ಹೆಂಗಸರು ಮಕ್ಕಳನ್ನು ಸಾಗಿಸಿದ್ದು ಎಷ್ಟೋ ಒಳಿತಾಯಿತು" ಎಂಬ ಸಮಾಧಾನ ಮುಕ್ಕಣ್ಣನ ಪಾಲಿಗೆ ಆದ ಹಾನಿಗಿಂತ ಹೆಚ್ಚಾಗಿ, ಇದೇ ರೀತಿ ಅನ್ಯಾಯ ನಡೆದಲ್ಲಿ ಮುಂದಿನ ಬಾಳ್ವೆ ಹೇಗೆ ಎನ್ನುವ ಭಯ ನಟ್ಟಿತು ಹಿಂದಿನ ಕತೆಗಳು ಕಿವಿಯಾರೆ ಕೇಳಿದ ಸುದ್ದಿಗಳು. ಈಗ ಹಾಗಲ್ಲ, ಪ್ರತ್ಯಕ್ಷ ಕಂಡು ಅನುಭವಿಸಿದ್ದು ಅದನ್ನು ನೆನೆದು ಒಮ್ಮೆ ತನ್ನ ಮಗನ ಮುಂದೆ "ಇದನ್ನೂ ಸರಕಾರ ಮಾಡಿಸಿದ್ದು ಎನ್ನು ತ್ತೀಯಾ" ಎಂದು ಕೇಳಿದ "ನನಗೆ ಹಾಗೆಯೇ ಅನುಮಾನ" ಎಂದ ಮಾನಪ್ಪ ತನ್ನ ಧನಿಗಳ ಮನಸ್ಸಿನಲ್ಲಿರುವ ಸಂಶಯವನ್ನು ಬಲ್ಲ ಮುಕ್ಕಣನ ಮನಸ್ಸು ಮಾತ್ರ ಪರಿವರ್ತನೆಗೊಂಡಿತ್ತು ಅದೇ ಅನುಮಾನ ಬಲವಾಯಿತು. ಅದನ್ನು ಮಗನ ಮುಂದೆ ಹೇಳದಿದ್ದರೂ, ಒಂದು ಕಾರಣದಿಂದಾಗಿ ಅವನಲ್ಲಿ ಹೊಸ ಅಭಿಪ್ರಾಯ ಹುಟ್ಟಿತು. ಆತನನ್ನು ಎಳೆದೊಯ್ದ ರಾತ್ರಿ ಅವನಿಗೆ ಅರ್ಧ ಪ್ರಜ್ಞಾವಸ್ಥೆ ಕವಿದಾಗ, ಅಹುದೋ ಅಲ್ಲವೋ ಎಂಬಷ್ಟು ಮೆಲುವಾಗಿ ಆಡಿದ ಒಂದು ಮಾತು ಅವನ ಕಿವಿಗೆ ಬಿದ್ದಿತ್ತು: "ಆ ಮುದುಕನನ್ನು ಕೊಲ್ಲಬೇಡಿ. ಮಾನಪ್ಪನ ಅಪ್ಪ ಅವನು" ಎಂದ ಮಾತದು. ಅದನ್ನು ಕನಸೇ, ಭ್ರಮೆಯೋ ಎಂದು ಮೇಲಿಂದ ಮೇಲೆ ನೆನೆದಾಗ, ಆ ಮಾತು ಕಿವಿಗೆ ಬಿದ್ದಾಗ ತನಗೆ ಪ್ರಜ್ಞೆಯಿದ್ದಿತು–ಎಂದೆನಿಸುತ್ತಿತ್ತು. ಅದರಿಂದ ಅವ

ಮನಸ್ಸಿನಲ್ಲಿ ಸಂಶಯ ಊರಿತು—ಮಗ ಊರಿಗೆ ಬಂದುದು, ಅವನ ಗುಲಾಲಿ ಪಡೆಯ ಅಭಿಮಾನ—ಇವುಗಳನ್ನು ಕುರಿತಾದ ಸಂಶಯ ಹೆಚ್ಚಿತು. ಆದರೆ ಅದನ್ನು ನುಡಿಯಲಾರ, ನೆನೆಯಲಾರ.

ಮುಂದಿನ ತಿಂಗಳಿನಲ್ಲಿ ಅವರಿಗೆ ಬೇಕಷ್ಟು ತಾಪತ್ರಯ. ಪೋಲೀಸು ಠಾಣೆಗೆ, ಕೋರ್ಟಿಗೆ, ನಗರಕ್ಕೆ ಹಲವುಬಾರಿ ಓಡಾಡಬೇಕಾಯಿತು. ಈ ಘಟನೆಯನ್ನು ಕುರಿತು ಮಗನೊಡನೆ ಒಂದು ಮಾತನ್ನೂ ಆಡಲಾರ ಆದರೆ ಮಗ, ಮೇಲಿಂದ ಮೇಲೆ ಕುತೂಹಲದಿಂದ ಅವನನ್ನು ಪ್ರಶ್ನಿಸುತ್ತಾನೆ "ಯಾರೆಲ್ಲ ಹೋಗಿದ್ದರಂತೆ? ಏನು ಹೇಳಿದರು? ಪೋಲೀಸರು ನಿನ್ನನ್ನು ಏನು ಕೇಳಿದರು? ನೀನೇನು ಹೇಳಿದೆ? ಧನಿಗಳು ಏನೆಂದು ಹೇಳಿದರು?" ಇಂಥ ಪ್ರಶ್ನೆಗಳು ಬಂದಾಗ, ಆತ ನ್ಯೆಮುರೆತು "ನಿನಗೇಕೆ? ನಿನಗೆ ಧನಿಯರ ಮೇಲಿರುವ ಪ್ರೀತಿ ಎಷ್ಟೆಂದು ಗೊತ್ತು ಆ ರಾತ್ರಿ ಅಷ್ಟು ಗುಂಡು ಹಾರಿಸಿದರು ಅಲ್ಲಿ ಗರ್ನಾಲು ಹೊಡೆದರ ಇಲ್ಲಿ ಕೇಳಿಸಬೇಕು. ಆದರೆ ನಿನಗೆ ಯಾವುದೂ ಕೇಳಿಸಲಿಲ್ಲ ನೀನು ಕುಡಿದು ಮಲಗಿದ್ದೀಯಾ?" ಎಂದ ನಿಜಕ್ಕೂ ಆ ದಿನ ಮಾನಪ್ಪನಿಗೆ ಗುಂಡು ಕೇಳಿಸಿತ್ತು ಆತ ನಿದ್ರೆ ನಟಿಸಿದ್ದ ಅವನ ಹೆಂಡತಿ ಎಚ್ಚರಗೊಂಡು "ಏನೋ ಗದ್ದಲ ಆಯಿತಲ್ಲಾ" ಎಂದರೆ 'ನಿನಗೆ ಕನಸರಿಕ" ಎಂದು ತಿರುಗಿ ಮಲಗಿಕೊಂಡ ಬೆಳಗಿನಜಾವ ದೊಂಡಾಲರು ಬಂದು ಕರೆದಾಗ ಎದ್ದು ಹೊರಟ. ಈ ತಂದೆಯ ಮಾತಿಗೆ ಸಮನಾದ ಪ್ರತ್ಯುತ್ತರ ಹೇಳಲಾರದೆ "ಆ ದಿನ ತುಸು ಕುಡಿದು ಮಲಗಿದ್ದು ಹೌದು" ಎಂದ

ಇದಾವುದೂ ಮುಕ್ಕಣ್ಣನಿಗ ಸಮಾಧಾನ ಕೊಡಲಿಲ್ಲ. ಮಾನಪ್ಪ ತಿರುಗಿ ಧನಿಗಳ ಮನೆಗೆ ಹೋಗುವ ಸರದಿ ಬಂದಾಗ ಇವನೇ ಅವರೊಡನೆ "ಅಯ್ಯಾ, ಅವನನ್ನು ಒಯ್ದು ಪ್ರಯೋಜನವಿಲ್ಲ. ಆ ದಿನ ಇಲ್ಲಿ ಕುಡಿದು ಗೊರಕೆಹೊಡೆಯುತ್ತ ಬಿದ್ದ ಹಾಗೆ ಅಲ್ಲೂ ಬಿದ್ದಾನು. ಅವನು ಕುಡಿಯುತ್ತಾನೆಂದು ನನಗೂ ಗೊತ್ತಿರಲಿಲ್ಲ" ಎಂದು ಸ್ಪಷ್ಟವಾಗಿ ಹೇಳಿದ ಅದರಿಂದ ವಿಕ್ರಮ ನಗರದ ಅವರ ಮನೆಯ ಕಾವಲಿಗೆ ಬದಲು ಜನವನ್ನು ಗೊತ್ತುಮಾಡಿ ಕಳುಹಿಸಬೇಕಾಯಿತು.

ಈ ಪ್ರಕರಣದಿಂದ ಪಟ್ಟೆದಾರರ ಚಿಂತೆಗೆ ಕೊನೆ ಮೊದಲಿಲ್ಲ. ಆದ ಹಾನಿ ಬೇರೆ, ಪ್ರಕರಣವನ್ನು ತುಬ್ಬು ಮಾಡಲಾರದೆ ಹೋದ ಪೋಲೀಸರನ್ನು ಕುರಿತು, ಸರಕಾರವನ್ನು ಕುರಿತು ಜಿಗುಪ್ಸೆ ಬೇರೆ. ಪೋಲೀಸರು ಅವರಲ್ಲಿಗೆ ಬಂದು ಹೋದುದಕ್ಕೆ ಲೆಕ್ಕವಿಲ್ಲ, ಅವರಿಗೆ ಮಾಡಿದ ಉಪಚಾರಕ್ಕೂ ಮಿತಿಯಿಲ್ಲ. ಆದರೆ ಬಂದು, ಉಂಡು, ತಿಂದು, ತೇಗಿ, ಊರಿನ ನಾಲ್ಕು ಜನಗಳನ್ನು ಹೆದರಿಸಿ ಸಂಪಾದನೆಯ ದಾರಿ ಹುಡುಕುತ್ತಿದ್ದುದನ್ನು ಕಂಡು ಇನ್ನಷ್ಟು ಬೇಸರವಾಯಿತು.

ಇನ್ನೊಂದು ತಿಂಗಳಲ್ಲಿ ಅವರ ಬೇಸರಕ್ಕೆ ಬೇರೆಯೇ ಮುಖ ಬಂದಿತು. ನಗರಕ್ಕೆ ಹೋದ ಜಯದೇವರು ಅಲ್ಲಿನ ಸಭೆಯೊಂದರಲ್ಲಿ ಅರುಣಾಚಲಯ್ಯನವರ ಹೃದಯಸ್ಪರ್ಶಿ ಉಪನ್ಯಾಸವನ್ನು ಕೇಳಿದರು. ಇವರ ಮನಸ್ಸು ಕಲುಕಿತು ಇವರು ಕಿಗ್ಗಳ್ಳಿಯ ಪಟ್ಟೆದಾರರೆಂಬುದನ್ನು ತಿಳಿದು, ಯಾರೋ ಅರುಣಾಚಲಯ್ಯನವರಿಗೆ ಅವರ ಗುರುತು ಮಾಡಿ ಕೊಟ್ಟರು. ಮುಂದಿನ ಚುನಾವಣೆಗೆ ಸ್ಪರ್ಧಿಗಳನ್ನು ಹುಡುಕುತ್ತಿದ್ದ ಅರುಣಾಚಲಯ್ಯನವರು ಅವರೊಡನೆ "ನಿಮ್ಮಂತಹವರ್ಚಸ್ವೀ ಜನರು ನಮ್ಮ ಪಂಗಡದಲ್ಲಿ ಇರಬೇಕು ನಮ್ಮ ಸರಕಾರದ ವಿಚಾರ ನಿಮಗೆ ತಿಳಿದಿದೆ. ನಿಮ್ಮಲ್ಲಾದ ಅನ್ಯಾಯದ ಕತೆಯನ್ನು ಕೇಳಿದೆ ನಿಮ್ಮಂತಹವರು ಸೊಂಟ ಕಟ್ಟದಿದ್ದರೆ, ರಾಜಕೀಯವನ್ನು ಸುಧಾರಿಸಲು ಪ್ರಯತ್ನಿಸದಿದ್ದರೆ, ಈ ರೋಗಕ್ಕೆ ಚಿಕಿತ್ಸೆಯಿಲ್ಲ" ಎಂದರು. ಅವರ ಸವಿನುಡಿ, ತಾವು ಅನುಭವಿಸಿದ ಕಷ್ಟಗಳು, ನಾಡಿನ ಸ್ಥಿತಿ–ಇವೆಲ್ಲವನ್ನು ನೆನೆದಾಗ ಜಯದೇವರಿಗೆ ಚುನಾವಣೆಯಲ್ಲಿ ಸ್ಪರ್ಧಿಸುವ ಹುಚ್ಚು ಹಿಡಿಯಿತು.

ಅನಂತರ ಗೊಂಡಾರಣ್ಯದಲ್ಲಿ ಬೀಸಿದ ಬಿರುಗಾಳಿಯಿಂದಾಗಿ ಸತ್ತ ತರಗೆಲೆಗಳೂ, ಬದುಕಿದ ಚಿಗುರೆಲೆಗಳೂ ಒಮ್ಮೆಗೇ ಅಲುಗಾಡ ತೊಡಗಿದವು. ನಿದ್ರೆಯಲ್ಲಿದ್ದ ಗೊಂಡಾರಣ್ಯ ಚುನಾವಣೆಯ ಸ್ವಪ್ನದಿಂದ ಕೇಕರಿಸಿ ನಿಂತಿತು. ಅರುಣಾಚಲಯ್ಯನವರ ಜನವಾದಿ ಪಂಗಡ ನಾಲ್ಕು ತಿಂಗಳ ಕೂಸಾದರೂ ದೇಶವಾದಿಗಳ ಎದುರಿಗೆ ಪ್ರತಿ ಕೇಂದ್ರಕ್ಕೂ ಸ್ಪರ್ಧಿಗಳನ್ನು ನಿಲ್ಲಿಸಿತು. ಸೇತುರಾಯನ ಪಡೆಯವರು ಹಾಗೆಯೇ ವಿಶಾಲವಾದ ಕಾಳಗದಲ್ಲಿ ಧುಮುಕಿದರು. ದಿನ ಸರಿದಂತೆ ಗಾಡಿಗಳು ಹೆಗಲಾಗ ತೊಡಗಿದವು. ದೊಂಡಾಲರ ಸೀಮೆಯಿಂದ

ಜಯದೇವರು ಜನವಾದಿ ಪ್ರತಿನಿಧಿಯಾದರು. ದೇಶವಾದಿ ಮಂತ್ರಿಯೊಬ್ಬ ಅವರಿಗೆ ಪ್ರತಿಸ್ಪರ್ಧಿಯಾದ ಸಾಲದುದಕ್ಕೆ ಶ್ರಮವಾದಿಗಳ ಒಬ್ಬ ಮುಖಂಡ ಅವರೆದುರಿಗೆ ನಿಂತ

ಮುಕ್ಕಣ್ಣ, ಕರಣಿಕರು ಧನಿಗಳಿಗಾಗಿ ಓಡಾಡ ತೊಡಗಿದರೆ, ತಂದೆಗೆದುರಾಗಿ ಮಾನಪ್ಪ ಗುಲಾಲಿ ಟೋಪಿ ಧರಿಸಿದ ಶ್ರಮಗಾರ ಮುಖಂಡನ ಸಲುವಾಗಿ ಅವೇ ಗ್ರಾಮಗಳಲ್ಲಿ ಬೊಬ್ಬಿಡುತ್ತ ಹೊರಟಾಗ, ಮುಕ್ಕಣ್ಣನ ಒಡಲು ಜರ್ಝರಿತವಾಯಿತು ಮಗನ ಮೇಲಿನ ಕೋಪ ಹೆಚ್ಚಿತು ತನ್ನ ಧನಿ ಮನೆಯ ಸುಲಿಗೆಗೆ ಅವನೂ ಸೇರಿದವನು ಎಂಬ ಅನುಮಾನ ಬಲವಾಯಿತು ಆತ ಬಹಿರಂಗವಾಗಿ "ನನ್ನ ಮಗನ ಮಾತನ್ನು ಕೇಳುವವರು ನನ್ನ ಬಂಧುಗಳಲ್ಲ" ಎಂದು ರೇಗಾಡಿದರೆ, ಮಾನಪ್ಪ "ನಮ್ಮಪ್ಪನಿಗೆ ಮುದಿ ಭ್ರಾಂತು, ಪಟ್ಟೆದಾರರ ಎಂಜಲು ತಿಂದ ರೂಢಿ ಆದರೆ ಧನಿಕರ, ಜಮೀನ್ದಾರರ ನಾಶವಾಗದೆ ಬಡವರ ಏಳಿಗೆ ಇಲ್ಲ" ಎಂಬ ಉಪನ್ಯಾಸವನ್ನು, ತಂದೆ ಹೋದಲ್ಲೆಲ್ಲ ಮಾಡತೊಡಗಿದ. ಆ ಗ್ರಾಮಗಳವುಟ್ಟಿಗೆ ತನ್ನ ಆಟ ನಡೆಯದೆಂದೂ ಧನಿಗಳ ಮಾತು ಮೀರುವವರಿಲ್ಲ ಎಂದೂ–ತಿಳಿದಿತ್ತಾದರೂ, ತಂದೆಯ ದೆಸೆಯಿಂದ ತನಗುಂಟಾದ ಆದಿವಾಸಿಗಳ ಸಂಪರ್ಕದ ಲಾಭವನ್ನು ಸಂಗಡದ ಶ್ರೇಯಸ್ಸಿಗಾಗಿ ವ್ಯಯಿಸ ತೊಡಗಿದ ಅವರಿಗೆ ಸೇರಿದ ಮುಲೆಗಳಿಗೆ ಆಗಾಗ ಹೋಗಿ ಬರುತ್ತ, ತಂದೆ ಹೇಳುತ್ತಿರುವ ಪಕ್ಷವೇ ತನ್ನದು, ಎಂಬ ಸುಳ್ಳನ್ನು ಸಾರಿ, ಜನಗಳ ಅಜ್ಞಾನವನ್ನು ವಂಚಿಸುವುದಕ್ಕೂ ಹೇಸಲಿಲ್ಲ.

## ಅಧ್ಯಾಯ ೪

ಕಣ್ಣಿದ್ದೂ ಕಾಣಲಾರದವರಿಗೆ ಗೊಂಡಾರಣ್ಯದ ಮಹಾ ಚುನಾವಣೆ ಶಾಂತವಾಗಿಯೆ ನಡೆಯಿತು–ರಕ್ತಪಾತವಿರಲಿಲ್ಲ; ಕೊಲೆಗಳಾಗಲಿಲ್ಲ. ಅನ್ಯಾಯಗಳೆಷ್ಟೋ ನಡೆದಿರಬಹುದಾದರೂ ಪ್ರತ್ಯಕ್ಷ

ಹಿಂಸೆ ಎಲ್ಲಿಯೂ ಕಾಣಿಸದಿದ್ದುದರಿಂದ ಅದು ಶಾಂತಿಯುತವಾಗಿ ನಡೆಯಿತೆಂದೇ ಹೇಳಬೇಕು ಅದರಲ್ಲಿಯೂ ವಾಮನರಾಯನಂತಹ ಮುಖಂಡರು ವಿಜಯದ ಉನ್ಮಾದದಲ್ಲಿ "ಸತ್ಯಕ್ಕೆ, ಅಹಿಂಸೆಗೆ ಅರ್ಥಾತ್ ದೇಶವಾದೀ ಸಂಗಡಕ್ಕೇ ಜಯವಾಯಿತು" ಎನ್ನುವುದಕ್ಕೆ ಅಡ್ಡಿಯಿಲ್ಲ ಕೆಲವೇ ವರ್ಷಗಳ ಮೊದಲು ರಾಜಕೀಯ ಸಂಗ್ರಾಮದಲ್ಲಿ ಪೆಟ್ಟು, ಕೋಲಾಹಲ ಉಂಟಾದಂತೆ ಈಗ ಆಗಲಿಲ್ಲ. ಚುನಾವಣೆಯ ಪ್ರಾರಂಭದಲ್ಲಿ ಮತದಾರರನ್ನು ಒಲಿಸುವುದಕ್ಕಾಗಿ ಹರಿಯಿಸಿದ ಹಣದ ಹೊಳೆ ಸತ್ಯ, ಅಹಿಂಸಗಳ ಇನ್ನೊಂದು ಮುಖ

ಆದರೆ ಹಳ್ಳಿಯಲ್ಲೇ ಇರಲಿ, ಪೇಟೆಯಲ್ಲೇ ಇರಲಿ, ಚುನಾವಣೆಯ ಸುಳಿಗಾಳಿಗೆ ಸಿಲುಕಿ ಹೋರಾಡಿದ ಮುಕ್ಕಣ್ಣ, ಜಯದೇವ, ವಾಮದೇವರಂತಹವರಿಗೆ ಇದೊಂದು ರಾಡಿಯ ಸ್ನಾನವಾಯಿತು ಈ ಕಾಲದಲ್ಲಿ ಎಲ್ಲಿಯೂ ತಿಳಿನೀರು ಎಂಬುದು ಕಾಣಿಸಲಿಲ್ಲ ಪ್ರಾಮಾಣಿಕತೆಯ ಹುಟ್ಟಡಗಿತ್ತು, ಸತ್ಯವು ತಲೆ ಮರೆಸಿಕೊಂಡಿತ್ತು. ಚುನಾವಣೆಯ ಮಹಾಪೂರದಲ್ಲಿ ನಾಡಿನಲ್ಲಿದ್ದ ಕೊಳಕು, ಕಶ್ಮಲಗಳೆಲ್ಲ ಮೇಲಕ್ಕೆದ್ದು ಜನರ ಮನಸ್ಸನ್ನು ಕಲಕಿತ್ತು ಇಲ್ಲ ಸಲ್ಲದ ದ್ವೇಷಗಳು, ಜಾತಿಭೂತಗಳು ತಲೆಯೆತ್ತಿ, ಉಸಿರಾಡುವುದೂ ಕಷ್ಟವಾಯಿತು.

ಮುಕ್ಕಣ್ಣನಂತಹ ಅರಿಯದ ವ್ಯಕ್ತಿಗೆ, ಮೊದಲು ಬಾರಿಗೆ– ತಾನು ವಿನಾಸುಧಾರಿ, ಆದುದರಿಂದ ಉಪ್ಪನ್ನ ಹಾಕಿ ಸಲಹಿದ ಜಯದೇವರು ತನ್ನ ವೈರಿಗಳು–ಎಂಬ ಉಪದೇಶ ದೊರೆಯಿತು ಜಾತ್ಯಾತೀತ ಸಂಸ್ಥೆಯೆಂದು ಸಾರಿಕೊಂಡ ದೇಶವಾದಿ ಸಂಗಡ, ಅವಕಾಶ ದೊರೆತಾಗ ಜಾತಿದ್ವೇಷದ ಪಂಜನ್ನು ಹಿಡಿದು ಊರೂರು ಅಲೆಯಿತು. ಸಾಲದುದಕ್ಕೆ ಇದಿರಾಳಿಗಳನ್ನು ಜಾತ್ಯಾಂಧರೆಂದು ಕೂಗಿ ಕರೆಯಿತು ಮುಕ್ಕಣ್ಣ ಈ ದ್ವೇಷಕ್ಕೆ ಸಿಲುಕದೆ ತನ್ನ ಧನಿಯ ಸೇವೆಗಾಗಿ ಓಡಾಡಿದರೆ, ಅವನ ಮಗ "ಧನಿಕರಾದ ಜಯದೇವರು ಬಡವರ ರಕ್ತವನ್ನು ಉಂಡು ಕೊಬ್ಬಿದ ನರಭಕ್ಷಕ" ಎಂದು ಸಾರಿದುದು ಮತ್ತೊಂದು ಸೋಜಿಗ. ಮುಕ್ಕಣ್ಣಗೆ ಕೃತಜ್ಞತೆ ಗೊತ್ತು, ರಾಜನೀತಿ ತಿಳಿಯದು. ಆತ ಗುಡ್ಡಗಾಡಿನ ದೊಂಡಾಲರ, ಕುರುಂಬರ ಮನೆಗಳಿಗೆ ಹೋಗಿ ಬರುತ್ತಿದ್ದು "ನಮ್ಮ ಧನಿಗಳು ಚುನಾವಣೆಗೆ ನಿಂತಿದ್ದಾರೆ. ಅವರ

ಪೆಟ್ಟಿಗೆ ಕಂದು ಬಣ್ಣದ್ದು " ಎಂದು ಭೋದಿಸಿದರೆ, ದೇಶವಾದಿಗಳು ಬಂದು ನಿಮ್ಮ ಧನಿಗಳ ಗುರುತು, ಧನಿಗಳ ಪೆಟ್ಟಿಗೆ ಹಳದಿ ಬಣ್ಣದ್ದು ಅದಕ್ಕೇ ಮತಹಾಕಿರಿ ಎಂದಂದರು ನಾಲದುದಕ್ಕೆ ಜಯದೇವರ ಪರಿಚಯ ಆ ಭಾಗದ ಜನಕ್ಕೆ ಹೊಸತೆಂಬಂತೆ, ಎಷ್ಟು ವಿಕಾರವಾಗಿ ಚಿತ್ರಿಸಬಹುದೋ ಅಷ್ಟೆಲ್ಲ ಚಿತ್ರಿಸಿದರು ಹಣದ ಆಶೆಯನ್ನು ತೋರಿಸಿದರು. ಆದರೂ ಆ ಪ್ರಾಂತದ ಜನಗಳಿಗೆ ಜನವಾದಿ ಸಂಗಡದ ಮಮತೆಗಿಂತಲೂ ಜಯದೇವರ ಮೇಲಿನ ವ್ಯಕ್ತಿ ಪ್ರೇಮವು ಅಧಿಕವಿದ್ದುದರಿಂದ ಅವರಿಗೆ ವಿಜಯ ನಿಶ್ಚಯ ಎಂಬ ತಿಳಿವು ಬಂದಿತ್ತು. ಆದರೆ ಫಲಿತಾಂಶ ನೋಡಿದಾಗ—ಅವರ ಪೆಟ್ಟಿಗೆಗಳು ಬಟ್ಟ ಬರಿದು. ಅವರಿಗೂ ಅಧಿಕ ಮತವಿರಲಿಲ್ಲ ಶ್ರಮವಾದಿ ನಾಯಕನ ಹೆಸರೂ ಇಲ್ಲ ಹಳದಿ ಪಡೆಯ ಪ್ರತಿನಿಧಿ ಸಜ್ಜನರಾಯನೇ ಗೆದ್ದು ಬಂದ. ಅದನ್ನು ಕೇಳಿದಾಗ ಊರಿಂದೂರೇ ಬೆರಗುಗೊಂಡಿತು

ಈಶಾನ್ಯ ಭಾಗದ ಸೋಮನಹಳ್ಳಿ, ಮಾನವತಿ ನದಿ ತೀರದ ಪ್ರದೇಶಗಳು ಶ್ರಮವಾದಿಗಳ ಉಪಟಳದಿಂದ ಅಶಾಂತಿಗೊಳಗಾದ ಪ್ರದೇಶ ಪೋಲೀಸು ದಬ್ಬಾಳಿಕೆಗೆ ಬೇಸರಗೊಂಡ ಅಲ್ಲಿನ ಜನ ಜನವಾದಿಗಳಿಗೆ ಹೆಚ್ಚಿನ ಮತ ಕೊಟ್ಟಿದ್ದಾರೆ ಎನ್ನುತ್ತಾರೆ ಆದರೆ ಫಲಿತಾಂಶ ಕಂಡಾಗ ಅಲ್ಲಿ ಗೆದ್ದುದು-ದೇಶವಾದಿ ನಾಯಕಿ ಕಾಂಚನಮಾಲೆ ರಾಜಧಾನಿ ವಿಕ್ರಮನಗರದಲ್ಲಿ ಚುನಾವಣೆಯ ಫಲಿತಾಂಶ ಅರುಣಾಚಲಯ್ಯನವರಿಗೆ ಪ್ರತಿಕೂಲವಾಗಿ ವಾಮನರಾಯನೇ ಗೆದ್ದು ಬಂದ ಅದರಲ್ಲೂ ನೋಯಿಸಿದ ಭಾಗವೆಂದರೆ ಅರುಣಾಚಲಯ್ಯನವರ ಮಿತ್ರರೂ, ಬಂಧು ಬಾಂಧವರೂ ಹಾಕಿದೆವೆಂಬ ಮತ ಪತ್ರಗಳು ವೈರಿಯ ಪೆಟ್ಟಿಗೆಯಲ್ಲಿ ಕಾಣಿಸಿದುವು ದೇಶವಾದಿಗಳಲ್ಲಿ ತೀರ ಅಪಖ್ಯಾತಿಗೆ ಈಡಾದ ಅರಣ್ಯ ಮಂತ್ರಿ ಖೇತಕರಿಯು ಸೋತು ಹೋಗಿ, ಹೇಳ ಹೆಸರಿಲ್ಲದ ಒಬ್ಬ ಶ್ರಮವಾದಿ ಗೆದ್ದು ಬಂದ. ವಾಮನರಾಯನಿಗೂ ಆತನಿಗೂ ಬೆಳೆದು ಬಂದಿದ್ದ ವೈರದಿಂದಾಗಿ ಆತನ ಸೋಲು ವಾಮನನಾಯನಿಗೆ ತೃಪ್ತಿಯನ್ನೇ ಕೊಟ್ಟಿತು ಅಂತೂ ಈ ಬಾರಿ ಎಲ್ಲೆಲ್ಲೂ ದೇಶವಾದಿಗಳಿಗೆ ಅನಿರೀಕ್ಷಿತ ವಿಜಯ. ಇದರಿಂದ ಬಹು ಜನಕ್ಕೆ ವಿಸ್ಮಯವೂ ಆಯಿತು ಈ ವಿಜಯ " ಮಂಗ ಮಾಯೆಯ

ಫಲ" ಎನ್ನತೊಡಗಿದವರೂ ಉಂಟು. ಸೋತವರ ಪಾಲಿಗೆ "ದ್ರಾಕ್ಷೆಯ ಹಣ್ಣು ಹುಳಿ" ಎಂದರು ದೇಶವಾದಿಗಳು. ಒಟ್ಟನಿಂದ, ಸಾರ್ವಜನಿಕ ಜೀವನದಲ್ಲಿ ಗೆಲವು ಮುಖ್ಯವೇ ಹೊರತು ಗೆಲುವ ದಾರಿಯಲ್ಲ–ಎಂಬ ಹೊಸಪಾಠವು ಜನಕ್ಕೆ ದೊರೆಯಿತು. ಕಾಮಿನಿ, ಕಾಂಚನಗಳ ಪ್ರಭಾವವೂ ಚುನಾವಣೆಯಲ್ಲಿ ಸೇರಿಕೊಂಡಿತ್ತು. ನಾಮ ಧಾರಿಗಳ ಮೇಲೆ ಗುಪ್ತವಾಗಿದ್ದ ದ್ವೇಷ ಬಹಿರಂಗವಾಗಿ ಉರಿಯ ತೊಡಗಿತ್ತು. ಇದರಿಂದ ನೂರರಲ್ಲಿ ಅರವತ್ತರಷ್ಟು ಸ್ಥಾನಗಳಿಸಿದ ವಾಮನರಾಯನಿಗೆ ತಲೆ ಬೇನೆ ಕಡಮೆಯಾಗಲಿಲ್ಲ ಮಂತ್ರಿ ಸಂಪುಟದ ರಚನೆಯ ಕಾಲದಲ್ಲಿ ಜಾತಿದ್ವೇಷ, ವ್ಯಕ್ತಿದ್ವೇಷ ಮೂಡಿ ಬಂದವು. ಹಿಂದಣ ಮಂತ್ರಿ ಸಂಪುಟದ ಇಬ್ಬರು ಸೋತಿದ್ದರೆ ಹತ್ತು ಮಂದಿ ಆ ಸ್ಥಾನಕ್ಕೆ ಬಾಯಿ ಬಿಟ್ಟವರಿದ್ದರು

ಆತನೇ ಹೊಸ ಮಂತ್ರಿ ಮಂಡಳದ ನಾಯಕನಾದ. ಅವನು ನಾಮಧಾರಿಯೆಂದು ಅವನ ಅನುಚರರಿಗೆ ಅಸಮಾಧಾನ. ಅವನನ್ನು ಬಿಟ್ಟರೆ ಅವರಿಗೆ ಗತಿಯಿಲ್ಲ. ಅವನಿಗಿರುವ ರಾಜತಂತ್ರ ನೈಪುಣ್ಯ ಇನ್ನೊಬ್ಬರಿಗೆ ಬರದು ಆತ ಪ್ರಧಾನಿಯಾಗಿ, ಐದಿದ್ದ ಮಂತ್ರಿಗಳ ಸಂಖ್ಯೆಯನ್ನು ಎಂಟಕ್ಕೆ ಬೆಳೆಯಿಸಿ, ಜಾತಿ ಭೂತಗಳಿಗೆ ಹವಿಸ್ಸನ್ನು ಕೊಟ್ಟು, ಔದಾರ್ಯ ತೋರಿ, ಸಂಪುಟ ರಚಿಸಿದ. ಕಾಂಚನೆಮಾಲೆ ತಾನಾಗಿ ಮಂತ್ರಿ ಪದವಿ ಬೇಡವೆಂದರೂ, ಅವಳ ಶಕ್ತಿಯನ್ನರಿತ ವಾಮನರಾಯ ಅವಳಿಗೆ ಮೊದಲಿನ ಪದವಿಯನ್ನೇ ಕೊಟ್ಟ.

ಜನವಾದಿಗಳಲ್ಲಿ ಆರಿಸಿಬಂದವರು ಬರಿಯ ಹತ್ತು ಮಂದಿ ಅವರಲ್ಲಿ ಜ್ವಾಲೆಯ ಸಂಪಾದಕ ತಿರುಮೂರ್ತಿ, ಡಾ ನಾಗಲಾಂಬೆ. ಇಬ್ಬರೇ ಮುಖ್ಯರು ಇವರನ್ನು ಬಿಟ್ಟರೆ ನಾಲ್ಕು ಮಂದಿ ಶ್ರಮವಾದಿ ಗಳು ಹತ್ತು ಮಂದಿ ಸ್ವತಂತ್ರರೂ ಆರಿಸಿ ಬಂದಿದ್ದರು. ಈ ಸ್ವತಂತ್ರ ರನ್ನು ಒಲಿಸಿ ತಮ್ಮ ಪಕ್ಷ ಬಲವಾದ ವಿರೋಧಿ ಪಕ್ಷವಾಗಬೇಕೆಂದು ಅರುಣಾಚಲಯ್ಯ ಪ್ರಯತ್ನಿಸಿದರು. ಅದರಲ್ಲಿ ಅವರನ್ನು ಮಿಾರಿಸುವ ಶಕ್ತಿ ವಾಮನರಾಯನಿಗಿತ್ತು ಆರಿಸಿ ಬಂದವರಲ್ಲಿ ಶ್ರಮವಾದಿ ನಾಯಕ, ಸೇತುರಾಯ ಇನ್ನೊಬ್ಬ ಪ್ರಮುಖ ವ್ಯಕ್ತಿ. ಆತನೂ ತಿರುಮೂರ್ತಿಯೂ, ಇಬ್ಬರೇ ಪ್ರತಿಪಕ್ಷದಿಂದ, ನಾಲಿಗೆ ಹರಿತ ಮಾಡಿ

ಕೊಂಡು ಹೆಜ್ಜೆ ಹೆಜ್ಜೆಗೆ ಕಾದಾಡತೊಡಗಿದರು. ಅವರಿಗೆ ಯಾವುದ ರಲ್ಲಿಯೂ ವಿಜಯ ದೊರೆಯದಾದರೂ, ದೇಶವಾದಿ ಆಡಳಿತೆಯ ಹುಳುಕು, ಕೊಳಕುಗಳನ್ನು ನಿರ್ಭಯವಾಗಿ ಹೊರಗೆಳೆದು ಚೆಲ್ಲುವುದಕ್ಕೆ ಅವಕಾಶ ದೊರೆಯಿತು. ಇಬ್ಬರೂ ಅಂಕೆ, ಸಂಖ್ಯೆಗಳ ಅಭ್ಯಾಸ ಮಾಡಿ ಕಾದಾಡಬಲ್ಲವರು. ಬೆಂಬಲ ದೊರೆಯದೆ ಹೋದರೂ ಕಾದಾಟಕ್ಕೆ ಹಿಂದುಳಿಯುವವರಲ್ಲ. ಆಡ ಬೇಕಾದ ಮಾತುಗಳನ್ನು ಕಡಿಮೆ ಮಾಡುವವರಲ್ಲ. ಸೇತುರಾಯ ತುಸು ಹೆಚ್ಚಾಗಿಯೇ ಆಡಿ, ಮೆರೆಯ ಬಲ್ಲ ವಾಗ್ವೀರ ಗೊಂಡಾರಣ್ಯದ ಈ ಪರ್ವಕಾಲದಲ್ಲಿ ಹಿಂದಣ ರಾಜ್ಯ ಭಾರದ ಯಾವತ್ತು ಕೊಳಚೆ ಬಹಿರಂಗವಾಗ ತೊಡಗಿತು :

" ನಿವೃತ್ತ ಮಂತ್ರಿ ಖೇತಕರನು ತನ್ನ ಮಂತ್ರಿ ಪದವಿ ಕಾಲದಲ್ಲಿ 'ಕೇತಕರ್ ಬ್ರದರ್ಸ್' ವ್ಯಾಪಾರಿ ಮಂಡಳಕ್ಕೆ ಕೊಟ್ಟ ಅರಣ್ಯದ ಗುತ್ತಿಗೆಯನ್ನು ರದ್ದುಪಡಿಸಿ, ಅವರಿಗೆ ಕೊಟ್ಟುದೆಷ್ಟು, ಅವರು ಕೊಂಡೊಯ್ದುದೆಷ್ಟು" ಎಂಬ ವ್ಯವಹಾರವನ್ನು ವಿಚಾರಣೆಗೆ ಗುರಿ ಪಡಿಸಬೇಕು

" ಶೀಲವತಿ ನದಿಯ ನೀರ್ಕಟ್ಟೆಯ ಕೆಲಸ ಅರ್ಧದಲ್ಲಿ ನಿಂತುದೇಕೆ ? ಅದರ ರಚನೆ ದೋಷಯುಕ್ತವಾದುದ್ದೆಂದು ಬಂದ ಆರೋಪ ನಿಜವೇ ? ಆ ನಷ್ಟಕ್ಕೆ ಯಾರೆಲ್ಲ ಹೊಣೆ ?

" ಸೋಮವತಿ ನೀರ್ಕಟ್ಟೆಯಿಂದ ಹೊರಡುವ ನಾಲೆಗಳ ಮಗ್ಗುಲಲ್ಲಿರುವ ಸಾವಿರಾರು ಎಕ್ರೆ ಜಮೀನನ್ನು ಮಂತ್ರಿ ಸಜ್ಜನರಾಯರು ಅವರ ಬಂಧುಗಳು ಪಡೆದುಕೊಂಡ ಬಗೆ ಹೇಗೆ ? ಅಲ್ಲಿನ ಜಮೀನಿನಲ್ಲಿ ಎಷ್ಟು ಜನ ಬಡವರಿಗೆ ಹಿತವಾಗಿದೆ."

ಇದರಂತೆಯೇ ಆಡಳಿತೆಯ ಲಾಭವನ್ನು ತಮ್ಮ ಬಂಧು ಮಿತ್ರರಿಗೆ ಹಲವಾರು ಬಗೆಗಳಿಂದ ದೊರಕಿಸಿ ಕೊಟ್ಟ ಮಂತ್ರಿಗಳ, ದೇಶವಾದಿ ಮುಖಂಡರ ಉಚ್ಚನೌಕರರ ವ್ಯವಹಾರಗಳನ್ನು ಬಯಲಿಗೆ ತರತೊಡಗಿದರು. ಇಂಥ ಯಾವುದೇ ಆರೋಪ ಬರಲಿ, ವಾಮನರಾಯ ಅಂಜುವವನಲ್ಲ. ಅವನಿಗೆ ಸ್ವಂತ ಬಂಧು ವರ್ಗವಿಲ್ಲ. ಆತನು ತನ್ನ ಗೆಳೆಯರಿಗೆ ಲಾಭ ಮಾಡಿಕೊಟ್ಟಿದ್ದರೂ " ಇವೆಲ್ಲ ಆರೋಪ ಸುಳ್ಳು. ತಮ್ಮ ಆಕ್ಷೇಪಗಳನ್ನು ನ್ಯಾಯವಾದ ವಿಚಾರಣೆಗೆ ಗುರಿಪಡಿಸುತ್ತೇವೆ"

ಎಂದೆಂದು, ನೆಪವ ತನಿಖೆ ಹೂಡಿ, ಕೊಳಕು ಮುಚ್ಚಿಟ್ಟು ಇದಿರಾಳಿ ಗಳನ್ನೇ ಪ್ರತಿಭಟಿಸುತ್ತಿದ್ದ. ಇಂಥ ವೇಳೆಗಳಲ್ಲಿ ನ್ಯಾಯ ದೊರೆಯ ದ್ದನ್ನು ಕಂಡು ಪ್ರತಿಪಕ್ಷದವರಿಗೆ ಸಭೆಯಿಂದ ಎದ್ದು ಹೊರಡುವು ದೊಂದೇ ದಾರಿ ಅದರಿಂದಲೂ ವಾಮನರಾಯ ಹಿಂದೆಗೆದರುವಂತಿಲ್ಲ. ಶ್ರಮವಾದಿ ಸೇತುರಾಯ, ತನ್ನ ಕೂಗಿನ ದಾರಿ ಬಿಡಲಿಲ್ಲ ಅಷ್ಟಕ್ಕೇ ತೃಪ್ತನಾಗಿ ಕುಳಿತುಕೊಳ್ಳಲೂ ಇಲ್ಲ

ಅವನ ಸಂಗಡದ ಮೇಲಿನ ನಿರ್ಬಂಧಗಳು ಹೋದುದರಿಂದ ಆತ ಅದರ ಶಾಖೋಪಶಾಖೆಗಳನ್ನು ನಾಡಿನ ಉದ್ದಕ್ಕೂ ಬೆಳೆಯಿಸ ತೊಡಗಿದ ಅವನ ಜನರು ಕಾರ್ಮಿಕರನ್ನು, ರೈತರನ್ನು ದ್ವೇಷ ಮಂತ್ರ ಪಠಣದಲ್ಲಿ ತರಬೇತಿ ಮಾಡತೊಡಗಿದರು ಮೊದ ಮೊದಲು ನಗರ ಗಳಲ್ಲಿ ಮಜೂರ, ಧನಿಗಳ ವೈಮನಸ್ಸು ಬೆಳೆಯುತ್ತ ಹೋದಂತೆ, ಮುಂದೆ ಮುಂದೆ ಹಳ್ಳಿಗಳಲ್ಲೂ ಧನಿ, ಒಕ್ಕಲುಗಳಲ್ಲ, ಕೊಟ್ಟವರು ಕೊಂಡವರಲ್ಲಿ, ದ್ವೇಷ ಬೆಳಯಿಸುವ ಪ್ರಯತ್ನ ನಡೆಯಿತು. ಸಾಲ ಕೊಂಡವನು ಕೊಟ್ಟವನಿಗೆ ಮರಳಿ ಸಲ್ಲಿಸಬೇಕಾಗಿಲ್ಲ, ಒಕ್ಕಲು ಧನಿಗೆ ಲಾವಣಿ ತೆರಬೇಕಾಗಿಲ್ಲ, ಬೆವರು ಸುರಿಸಿದವನಿಗೆ ಬೆಳೆಯ ಫಲ– ಎಂಬ ಜಪ ತೊಡಗಿದರು ಕಿಗ್ಗಳ್ಳಿಯ ಕ್ಷೇತ್ರದಲ್ಲಿ ಈ ಚಳವಳಕ್ಕೆ ಮುಕ್ಕಣ್ಣನ ಮಗ ಮಾನಪ್ಪನೇ ಪ್ರಚಾರಕನಾದ ಅವನ ದ್ವೇಷದ ಮೊನೆಯೆಲ್ಲಾ ಪಟ್ಟೆದಾರರನ್ನು ಇರಿಯಿತು ತಂದೆಯ ಮನೆಯನ್ನು ಬಿಟ್ಟು, ಹೆಂಡತಿ ಮಕ್ಕಳೊಡನೆ ಬೇರೆ ಸಂಸಾರ ಹೂಡಿದ ಬೇಸಾ ಯದ ಕಸಬನ್ನು ಬಿಟ್ಟು ಬಾಯ್ಬೂಪರಿನ ಪೂಜಾರಿಯಾದ ಆಗಾಗ ಪಟ್ಟೆದಾರರ ಒಕ್ಕಲುಗಳ ಮನೆಗೆ ಹೋಗಿ ಬಂದು "ಧನಿಗಳಿಗೆ ಏನೂ ಪ್ರತಿಫಲ ಕೊಡಬೇಡಿ" ಎಂದು ಉಪದೇಶಿಸ ತೊಡಗಿದ ಕೇಳುವು ದಕ್ಕೆ ತುಂಬ ಪಥ್ಯವಾದ ಮಾತುಗಳವು! ರೈತರು ಒಗ್ಗಟ್ಟಿನಿಂದ, ಹಿಂದಿನ ಬಲದಿಂದ, ಸಾಧಿಸಬಲ್ಲರಾದರೆ ಎಲ್ಲರಿಗೂ ಲಾಭವೇ ಲಾಭ ವನ್ನು ತೋರಿಸುವ ಸಂದೇಶ ಹಲವರಿಗೆ ನ್ಯಾಯವಾಗಿಯೇ ಕಂಡಿತು. ಮೊದಲು ಮೊದಲು ಜಯದೇವ ವಾಮದೇವರು ಇವನ ಪ್ರಚಾರ ವನ್ನು ಪರಿಹಾಸ್ಯದಿಂದ ಕಂಡು ಕುಳಿತರೂ, ಕೊನೆಗೊಂದು ದಿನ ಮುಕ್ಕಣ್ಣನನ್ನು ಕರೆದು "ಏನು ಮುಕ್ಕಣ್ಣ, ಕೊಡಲಿಯ ಕಾವು

ಕುಲಕ್ಕೇ ಮೃತ್ಯುವಾಯಿತಲ್ಲ" ಎಂದರು. ಬಹು ದಿನದಿಂದಲೂ ಮಗನ ವಿಷಯದಲ್ಲಿ ಅವನಿಗೆ ಸಿಟ್ಟು ತುಂಬಿಬಂದಿತ್ತು. ಧನಿಗಳ ಮನೆಯ ದರೋಡೆಯ ಪ್ರಕರಣದ ನೆನಪು ಅಳಿಸಿರಲಿಲ್ಲ ಬಳಿಕ ಚುನಾವಣೆಯ ಕಾಲದ ಅಸಮಾಧಾನವೂ ಸೇರಿತ್ತು. ಮಗನ ಪ್ರಚಾರ ಕಾರ್ಯ ಅವನಿಗೂ ತಿಳಿದು ಬಂದಿದೆ ಅವನ ಸಿಟ್ಟಿಗೆ ಕೈ ಬಂದಿದ್ದರೆ ಮಗನ ಕೊಲೆಗೂ ಸಿದ್ಧನೇ. ಆದರೆ ಕಾಯಿದೆ ಎಂಬುದಿದೆ, ತಾನು ದುಡುಕಿದರೆ ತನಗೂ, ಧನಿಗೂ ಕೂಡ ಅನ್ಯಾಯವಾದೀತು ಎಂಬುದರಿಂದ ಸುಮ್ಮನಿದ್ದ ಧನಿಯ ಮಾತಿಗೆ ವ್ಯಥೆಯಿಂದ "ಅಯ್ಯಾ, ಇಂಥ ಅನ್ಯಾಯಕ್ಕೆ ದೇವರೇ ಪರಿಹಾರ ಕೊಡಬೇಕು" ಎಂದಷ್ಟೇ ಹೇಳಿದ

ತುಸು ಸಮಯದಲ್ಲಿ ಅವರ ಊರಿನ ಜಾತ್ರೆಯೊಂದು ಬಂದಿತು. ಊರ ಮಹಂತೇಶ್ವರಿ ದೇವಾಲಯದಲ್ಲಿ ಪಟ್ಟೆದಾರರ ಮನೆತನದವರು ಆ ಉತ್ಸವವನ್ನು ಅನೇಕ ತಲೆಮಾರುಗಳಿಂದ ನಡೆಯಿಸಿಕೊಂಡು ಬರುತ್ತಿದ್ದರು ಆ ಪ್ರಾಂತದ ಜನಗಳಿಗೆ, ಮಹಂತೇಶ್ವರಿ ಲೋಕವನ್ನು ಕಾಯುವ ತಾಯಿ ಆ ಜಾತ್ರೆಗೆ ಭಕ್ತಿಯಿಂದ ಬಾರದ ಊರವರಿಲ್ಲ ಎಷ್ಟು ಭಕ್ತಿಯೋ, ಅಷ್ಟೇ ಉತ್ಸಾಹದ ಹಬ್ಬವೂ ಅದು ಊರ ಜನ ಮೈಮರೆತು ಹಬ್ಬದಲ್ಲಿ ಓಡಾಡುತ್ತಿದ್ದರು–ಜಯದೇವ ವಾಸುದೇವರು ಹಿರಿಯರಾಗಿ ಹಬ್ಬ ನಡೆಯಿಸುತ್ತಿದ್ದರು ಅಲ್ಲಿ ದೇವಿಯನ್ನು ಬಿಟ್ಟರೆ ಎರಡನೆಯ ಸ್ಥಾನ ಪಟ್ಟೆದಾರ ಸೋದರರಿಗೆ ಅದೇ ಜಾತ್ರೆಯಲ್ಲಿ ಮಾನಪ್ಪನೂ ಕಾಣಿಸಿಕೊಂಡ, ಬರಿದೇ ಕಾಣಿಸಿದ್ದಲ್ಲ–ನಾಲ್ವರು ಗುಲಾಲಿ ಟೋಪಿಯ ಗೆಳೆಯರನ್ನು ಕೂಡಿಕೊಂಡು ಉಪನ್ಯಾಸ ತೊಡಗಿದ ಯಾರ ನೆರಳಿನಲ್ಲಿ ತಾನೂ ತನ್ನ ಹಿರಿಯರೂ ಈತನಕ ಬೆಳೆದು ಬಂದಿದ್ದರೋ, ಅದೇ ನೆರಳನ್ನು ನಾನಾ ಬಗೆಯಿಂದ ಹಳಿದು ನಿಂದಿಸುವುದು ಅವನ ಉಪನ್ಯಾಸದ ಸಾರವಾಗಿತ್ತು. ಆ ಯೌವನದ ಕೊಬ್ಬು, ಮನಸ್ವೀ ಮಾತನಾಡುವ ನಾಲಗೆ, ಸಾಲದುದಕ್ಕೆ ಜತೆಗೂಡಿ ಬಂದ ಗುಲಾಲಿ ಟೋಪಿಯ ಮಿತ್ರರು–ಎಲ್ಲರೂ ಆಕರ್ಷಣೆಗೆ ಗುರಿಯಾದರು ತನ್ನ ಮುಖದ ಮುಂದೆ ಗುಲ್ಲಿನ ಯಂತ್ರ ನಿಲ್ಲಿಸಿಕೊಂಡು "ಇದು ದುಡಿಯುವವರ ನಾಡು, ಈ ನೆಲ ನಿಮ್ಮದು. ಅವರ ಹೆಂಡತಿ

ಮಕ್ಕಳ ಆಭರಣ, ಸಿಂಗಾರ, ಸಂಪತ್ತು ನಿಮ್ಮದು" ಎಂದರು. ಅವನ ಆವೇಶಮಯ ಭಾಷಣದಲ್ಲಿ ಪಟ್ಟೆದಾರರ ಹೆಂಡತಿ ಮಕ್ಕಳು ಮಾತ್ರ ಹೆರವರದ್ದಾಗದಿದ್ದುದು ಪುಣ್ಯ. ಅವನ ಮತ್ತು ಅವನ ಮಿತ್ರರ ಮಾತಿನ ವಿಷವೆಲ್ಲ, ದೇಗುಲದ ಬಳಿಯಲ್ಲಿ ಅಲೆಯುತ್ತಿದ್ದ ಜಯದೇವ ವಾಮದೇವರಿಗೆ ಬೇಡವೆಂದರೂ ಕೇಳಿಸುತ್ತಲಿತ್ತು. "ತಾವು ಶ್ರೀಮಂತರು ನಿಜ, ದುಡಿದವರಲ್ಲ, ದಾನ ಮಾಡಿದವರಲ್ಲ; ಹಿರಿಯರಿಂದ ಬಂದ ಸಂಪತ್ತನ್ನು ಉಳಿಸಿಕೊಂಡ ಮಹಾ ಪಾಪಿಗಳು" ಎಂದು ನೆನಪು ಕೊಟ್ಟಂತಿತ್ತು ಅವರ ಮಾತುಗಳು. ಅಂದಿನ ಮಟ್ಟಿಗೆ ತಮ್ಮನ್ನು ನಿಂದಿಸಲು ಬಂದ ಧೂರ್ತರನ್ನು, ಬಿಗಿದು ಕಟ್ಟಿ, ಅಟ್ಟಿಸುವ ಸಾಮರ್ಥ್ಯ ಅವರಿಗಿತ್ತಾದರೂ "ನಾಯಿ ಬೊಗಳಿದರೆ ದೇವಲೋಕ ಹಾಳಾಗುತ್ತದೆಯೇ" ಎಂದುಕೊಂಡು ಸುಮ್ಮನಾದರು.

ಆದರೆ ದಿನಗಳು ಸರಿದಂತೆ ರೂಢಿಯಿಂದ ಬೊಗಳಿದ್ದೇ ರಾಗವಾಗಿ ಕೇಳಿಸ ತೊಡಗಿತು ಜನಗಳಿಗೆ ಅದು ಲಾಭ ತರುವ ವಿಷಯವಾದುದರಿಂದ ಅನೇಕರಿಗೆ ಪ್ರಿಯವಾಗಿಯೂ ಕಾಣಿಸಿತು ಇಂಥ ಪ್ರಚಾರ ಕಾರ್ಯ ದೇಶದ ನಾನಾ ಕಡೆಯಲ್ಲಿ ನಡೆದುದರ ಫಲವೋ ಏನೋ, ಅಲ್ಲಲ್ಲಿ ಕೊಲೆ, ಸುಲಿಗೆಗಳಿಗೆ ಬೆಂಬಲವನ್ನು ಕೊಟ್ಟವು. ಅದಕ್ಕೆಲ್ಲಾ ಇಂಥದೇ ರಾಜಕೀಯ ಪಕ್ಷ ಹಿನ್ನೆಲೆಯಲ್ಲಿದೆ ಎಂದು ಸಾಧಿಸುವುದು ಕಷ್ಟವಾದರೂ ಸರಕಾರ ಅವನ್ನು ಮೂಕವಾಗಿ ಕಾಣುವಂತಿಲ್ಲ.

ವಾಮನರಾಯ ಅವುಗಳ ಅಂಕೆ, ಸಂಖ್ಯೆ, ವಿವರಗಳನ್ನು ತರಿಸಿಕೊಂಡ. ಹೆಚ್ಚಿನ ಘಟನೆಗಳು ಗುಲಾಲಿ ಟೋಪಿಗಳ ಹಿಂದಣ ಗೆರಿಲ್ಲಾ ಕದನ ಕ್ಷೇತ್ರದಲ್ಲಿಯೇ ನಡೆದುದು ಕಾಣಿಸಿತು ಅವರು ಕಲಿಸಿ ಕೊಟ್ಟ ಪಾಠವನ್ನು, ದಾರಿಯನ್ನು ವ್ಯವಸಾಯಿ ದರೋಡೆಕಾರರು ಹಿಡಿದಿದ್ದರು. ಅವರನ್ನು ಉಗ್ರರೀತಿಯಿಂದ ದಮನ ಮಾಡುವುದಕ್ಕಾಗಿ, ಅಂಥಲ್ಲಿ ಪೋಲೀಸು ಸಿಬ್ಬಂದಿಯನ್ನು ಹೆಚ್ಚಿಸಿ ಅದರ ಅಧಿಕ ವೆಚ್ಚವನ್ನು ಜನಗಳ ಮೇಲೆ ಹೇರಿದ

ಇತ್ತ ರುದ್ರನಗರ, ವಿಕ್ರಮನಗರ, ಶ್ಯಾಮನೂರು, ಭೀಮನೂರುಗಳಲ್ಲಿ ಮುಷ್ಕರಗಳೆಂಬವು ದಿನ ನಿತ್ಯದ ಆಟಗಳಾದುವು. ಶಾಲೆಯ ಸಂಬಳ ಹೆಚ್ಚಿಸಿದರೆಂದು ಹುಡುಗರ ಮುಷ್ಕರ, ಕಾಡಿಂದ ಕಟ್ಟಿಗೆ

ಕಡಿಯಲು ಬಿಡಲಿಲ್ಲವೆಂದು ಅರಣ್ಯ ಸತ್ಯಾಗ್ರಹ, ಕೊಟ್ಟ ವೇತನ ಭತ್ತೆಗೆ ಸಾಲದೆಂದು ಶ್ರಮಗಾರರ ಮುಷ್ಕರ. ಕಾರ್ಖಾನೆ ತೆರೆದರೂ ಸಂಪು, ಮುಚ್ಚಿದರೂ ಸಂಪು–ಹೀಗೆ ಮುಷ್ಕರ, ಸತ್ಯಾಗ್ರಹಗಳ ಪರ್ವಕಾಲವೇ ತೊಡಗಿತು ಹಿಂಡಿನ ಬಲವುಳ್ಳ ಒಂದೊಂದು ಸಂಗಡವೂ ಸಮಾಜದ ಮೇಲೆ ತನ್ನ ಹಕ್ಕನ್ನು ಹೇರತೊಡಗಿತು. ಬಹು ಮಟ್ಟಿನ ಸಂಪುಗಳ ಹಿಂದೆ, ಕೇವಲ ನಾಲಿಗೆಯಿಂದ ಬೆವರನ್ನು ಸುರಿಸುವ ಶ್ರಮಗಾರ ಸಂಗಡದ ಮುಖಂಡರು ನಿಂತಿದ್ದರೆಂಬುದು ತಿಳಿದ ಮಾತು ಆದರೆ ಅದರಿಂದೆಲ್ಲ ಸರಕಾರ ಭಯಗೊಳ್ಳಬೇಕಾಯಿತು. ಜನ ರೇಗಬಾರದಷ್ಟೆ ಯಾವ ಜನ? ಎಂದು ಗುರುತಿಸಲಾರದೆ ಸರಕಾರ ಬೆದರಿಸಿದವನಿಗೆ ಒಂದು ಹಿಡಿ ಅನ್ನ ಜಾಸ್ತಿಯಾಗಿ ಕೊಡಲು ಹೋಯಿತು. ಯಾರಿಂದ ಕೊಡಿಸುವುದು, ಕೊನೆಯಲ್ಲಿ ಯಾರು ಕೊಟ್ಟುದನ್ನು ತುಂಬಿಸುವವರು, ಅಂಥವರ ಶಕ್ತಿಯೇನು–ಎಂಬ ವಿಸ್ತೃತ ಜ್ಞಾನವಿಲ್ಲದೆ ಸಂಪುಗಾರರ ಸಮಾಧಾನಕ್ಕೆ ಹೊರಟರು. ಇತರರ ಹಣವನ್ನು ದಾನಮಾಡಿ ಅಸಂತೃಪ್ತರಲ್ಲಿ ತೃಪ್ತಿ ಹುಟ್ಟಿಸುವ ದಾನಿಯಾದ ವಾಮನರಾಯ ಕೊಡುವ ಅವಸರದಲ್ಲಿ ಅವನಂತಿರುವ ವರಿಗೆ, ತೆರುವ ಹಣ ಎಲ್ಲಿಂದ ಬರುತ್ತದೆ ಎಂದು ಗೋಚರಿಸಲಿಲ್ಲ. ಅವನದು, ಶ್ರಮವಾದಿಗಳಂತೆ ಸಮಾಜವನ್ನು ವರ್ಗವಾಗಿ ವಿಭಜಿಸಿ ಅನುಕೂಲವಾದ ಅಂಶವನ್ನಷ್ಟೇ ಕಾಣುವ ಕಣ್ಣು. ಅಧಿಕಾರ ಪ್ರೇಮ ವುಳ್ಳ ಅವನಿಗೆ ಒಟ್ಟು ಸಮಾಜವೇನೆಂದು ಕಾಣುವುದು ಕಷ್ಟ; ತಿಳಿಯುವುದೂ ಕಷ್ಟ

ಇಂಥ ಜನಗಳ ಬಾಯಾರಿಕೆಯನ್ನು ತಣಿಸಿದಷ್ಟು ಅದು ಹೆಚ್ಚು ತ್ತಲೇ ಇತ್ತು. 'ದುಡಿಯುವ ಜನ ಬೆವರು ಸುರಿಸುವ ಜನ'–ಎಂದು ಕನಿಕರ ಪಡಬೇಕಾದುದು ನ್ಯಾಯವೇ. ಸಾರ್ವಜನಿಕರಿಗೂ ಅದರ ಮೇಲೆ ಸಹಾನುಭೂತಿ ಉಂಟಾಗುವುದು ನಿಜ. ಆದರೆ ಸಂಪತ್ತಿನ ವಿತರಣೆಯ ಪ್ರಶ್ನೆಯಲ್ಲಿ ಅದರ ಉತ್ಪನ್ನದ ಸಮಸ್ಯೆ ಮರವೆಯಾಗು ತ್ತದೆ ಕೊಂಡುಕೊಳ್ಳುವವನ ಕಷ್ಟ ತಿಳಿಯುವುದಿಲ್ಲ. ಅವನೂ ಬಡವನೆಂಬುದನ್ನು ಮರೆತು ಬಿಡುತ್ತಾರೆ. ಹೀಗಾಗಿ–ಕೂಗುವ ಮಗು ವಿಗೆ ಕೂಗದಿರುವ ಮಗುವಿನ ಕೈಯಲ್ಲಿರುವ ತಿಂಡಿಯನ್ನು ಕಿತ್ತು

ಕೊಡುವುದು ನ್ಯಾಯ ಎನಿಸುತ್ತದೆ

ಇದರಂತೆಯೇ ದೇಶವಾದಿಗಳ ಮಂತ್ರಿಸಂಪುಟ ತಮ್ಮ ಮುಂದಿರುವ ಪ್ರಶ್ನೆಗಳಿಗೆ ಅರೆ ಕುರುಡಾಗಿ ಉತ್ತರ ಕೊಡಲು ಪ್ರಯತ್ನಿಸಿತು. ಶಾಸನ ಸಭೆಗಳ ಅಧಿಕಾರ ಎಲ್ಲರಿಗೂ ಇಷ್ಟ ದೇಶದ ಪ್ರಶ್ನೆಗಳನ್ನೆಲ್ಲಾ ಶಾಸನ ನಿರ್ಮಾಣದಿಂದಲೇ ಬಗೆ ಹರಿಸುತ್ತೇವೆಂದು ಆ ಜನ ತಿಳಿಯ ತೊಡಗಿದರು ಈ ವಿಚಾರದಲ್ಲಿ ಎಲ್ಲ ವಂಗಡದವರಿಗೂ ಶಾಸನಗಳಲ್ಲೇ ವಿಶ್ವಾಸ ಹೊಸ ಹೊಸ ಶಾಸನಗಳನ್ನು ಹೊಸೆಯುತ್ತ ಹೋಗುವುದು ಅವರ ಕೆಲಸವಾಯಿತು

ಈಗ ಒಂದು ತಿಂಗಳಿಂದ ಸಭೆಯ ಮುಂದೆ ಆಯವ್ಯಯದ ಅಂದಾಜು ಪಟ್ಟಿಯನ್ನು ಹಣಿಯುವ ಕೆಲಸ ಬಂದಿದೆ ಶಾಸನ ನಿರ್ಮಾಣಕ್ಕೆ ತುಸು ವಿರಾಮ ರಾಜ್ಯದ ಸಾಲ ಹೆಚ್ಚಿದೆ, ಸುಮಾರು ನಾಲ್ಕು ಕೋಟಿ ರೂಪಾಯಿಗಳು ಕರಗಿ ತೊಡಗಿದ ಕಲವಾರು ನೀರಾವರಿ, ನೀರ್ಕಟ್ಟೆ, ವಿದ್ಯುತ್ತು, ಸೇತುವೆಗಳಂಥ ಯೋಜನೆಗಳು ಅರ್ಧವಾಗಿ ನಿಂತಿವೆ. ಅವನ್ನು ಮುಗಿಸಲು ಅಷ್ಟೇ ಹಣ ಬೇಕೋ ಅಥವಾ ಹೆಚ್ಚಿಗೆ ಬೇಕೋ. ಸರಕಾರದ ಇಲಾಖೆಗಳು ಬೆಳೆದಿವೆ ಕೆಲವಂತೂ ಅವುಗಳಲ್ಲಿ ನಂಟರಿಷ್ಟರುಗಳಿಗೆ ಕೆಲಸ ಕೊಡುವುದಕ್ಕೇ ಹುಟ್ಟಿಕೊಂಡ "ಕ್ಷೇಮ ಚಿಂತನೆಯ ಇಲಾಖೆಗಳು" ಅವುಗಳನ್ನು ಸಾಕುವ ವೆಚ್ಚ ಅಧಿಕ. ಹಳೆಯ ಇಲಾಖೆಗಳಲ್ಲಿ ಇದ್ದವರನ್ನು ತಪ್ಪಿ, ಬೇಕಾದವರಿಗೆ ಕೆಲಸ ಕೊಡುವುದು ಕಷ್ಟವೆಂದು ತಿಳಿದ ವಾಮನರಾಯ, ಹೊಸ ಇಲಾಖೆಗಳನ್ನು ನಿರ್ಮಿಸಿದ್ದಾನೆ 'ಗ್ರಾಮೋದ್ಧಾರ ಸಮಿತಿಗಳು' 'ಸೊಳ್ಳೆ ಸಂಗ್ರಾಮದ ಯೋಜನೆಗಳು,' 'ಕೃಷಿ ಪ್ರಚಾರ, ಉದ್ಯೋಗ ಪ್ರಚಾರ ಸಂಘಗಳು' ಬೆಳೆಬೆಳೆದು ರಾಜಾದಾಯವೆಲ್ಲ ರಾಜ್ಯಯಂತ್ರದ ಅಭ್ಯಂಜನ ಸ್ನಾನಕ್ಕೇ ಸಾಲದಾಗಿದೆ "ಹೀಗೆ ವೆಚ್ಚ ಬೆಳೆಯುತ್ತಿದೆಯಲ್ಲಾ" ಎಂದು ಅರುಣಾಚಲಯ್ಯನಂತಹವರು ಕೂಗಿದರೆ ಅದಕ್ಕೆ ಮಾರುತ್ತರ ದೇಶವಾದಿ ಪತ್ರಿಕೆಯಾದ "ದೇಶ ಪ್ರಗತಿ" ಎಂಬುದರಲ್ಲಿ ಹೀಗೆ ಬರುತ್ತದೆ:

"ಲೋಭಕ್ಕೂ, ದೇಶೋದ್ಧಾರಕ್ಕೂ ಸಂಬಂಧವಿಲ್ಲ!"

"ಸಾಲ ಮಾಡದೆ, ತೆರಿಗೆ ಏರಿಸದೆ, ದೇಶದ ಅಭಿವೃದ್ಧಿಯಾಗದು"

ಎಂದು ಕಾಲಂಶ ಸತ್ಯವನ್ನು ಪೂರ್ಣ ಸತ್ಯವನ್ನಾಗಿ ಸಾರುತ್ತಾರೆ. ಈ ಹೊರೆಯೆಲ್ಲ ತೆರಿಗೆಯ ರೂಪದಿಂದ, ದಂಡ ತೆರುವ ಹೊಸ ಕಾಯಿದೆಗಳ ಮುಖ ತಾಳುತ್ತದೆ

ಇತ್ತ ವಾಮನರಾಯನ ಈ ರಾಮರಾಜ್ಯದಲ್ಲಿ ರಾಜ ಪ್ರಮುಖ ಪ್ರತಾಪಚಂದ್ರನಿಗೂ, ಅವನಿಗೂ ದಿನಂದಿನ ತಿಕ್ಕಾಟ ಬರುತ್ತಿದೆ. ಅವನ ಮಾನವನ್ನು ಮೂದಲಿಸುವ ನಡತೆ, ದುಂದುವೆಚ್ಚ, ದುರಾಡಳಿತೆ, ಶಿಥಿಲ ಶಾಸನ–ಇವನ್ನೆಲ್ಲಾ ತೀದೂ, ಕೊಟ್ಟುದಕ್ಕೆ ಸಹಿ ಮಾಡುವ ಕೆಲಸ ರಾಜಪ್ರಮುಖನಿಗೆ ಮೊದಲಷ್ಟು ದಿನ ಕೃಷ್ಣಮೂರ್ತಿ ಅವನಿಗೆ ಬುದ್ಧಿ ಹೇಳುತ್ತಿದ್ದ ಆದರೆ "ಹಾಗಲ್ಲ ಹೀಗೆ" ಎನ್ನುವ ಜನ ವಾಮನರಾಯನಿಗೆ ಬೇಕಿರಲಿಲ್ಲ ಆತ ಸದ್ದಿಲ್ಲದೆ ಹೊರಟು ಹೋದ ಆದರೆ ಅವನ ನಿರಂಕುಶ ಪ್ರಭುತ್ವಕ್ಕೆ ನಿಸರ್ಗವೇ ಮುನಿಯಿತೋ ಏನೋ, ನಿತ್ಯ ಸುಭಿಕ್ಷಯುಳ್ಳ ಗೊಂಡಾರಣ್ಯದಲ್ಲಿ ಕ್ಷಾಮ ಕಾಲಿರಿಸಿತು ಬಾನು ಬರಿದಾಗಿ, ಮುಗಿಲು ಸುಳಿಯದೆ, ನೆಲ ಉರಿಯ ತೆಂಡಗಿ ರೈತರು ಕಂಗಾಲುಗೊಂಡರು ಎಂದೆಂದೂ ನೀರಿನ ಬರವನ್ನು ಕಾಣದ ನೋಮನಹಳ್ಳಿ, ಕಿಗ್ಗಳ್ಳಿಯಂತಹ ಪ್ರದೇಶಗಳಲ್ಲೂ ಹಳ್ಳ ಕೊಳ್ಳಗಳು ಬತ್ತಿದವು ಮಳೆರಾಯ ಕೂಗಿಕೊಂಡಷ್ಟೂ ದೂರವಾದ ಗುಡ್ಡಗಾಡಿನ ಗೊಂಡಾಲರು, ದೊಂಡಾಲರು, ಕುರುಂಬರು ಗಡ್ಡೆ, ಗೆಣಸು ತಿಂದು ಜೀವನ ನಿರ್ವಹಿಸಿದರು ದವಸ ಧಾನ್ಯ ತಿನ್ನುವ ರೈತರೆಲ್ಲ ಕಂಗಾಲಾದರು ಒಂದು ವರ್ಷವೆಲ್ಲ ಮಳೆ ಬರದೆ ನಾಡಿನ ಉದ್ದಕ್ಕೂ ಕ್ಷಾಮ ತಲೆದೋರಿತು

ಮುಕ್ಕಣ್ಣನಂತಹವರ ಪಾಲಿಗೆ–ಅದು ದೇವರ ಶಾಪ ಬರಗಾಲಗಳೆಂಬುದು ದೊರೆಗಳು, ಜನಗಳು ಮಾಡುವ ಅನ್ಯಾಯಕ್ಕೆ ಶಿಕ್ಷೆ. ಬಂದ ಕಷ್ಟ ಕಂಡು ಅವನ ಮುಖದಿಂದ ಸಂಜೆಯ ನಗೆ ಸೂಸುತ್ತದೆ: "ಪಟ್ಟೆದಾರರಿಗೆ ಲಾವಣಿ ಕೊಡಬೇಕಂದಿಲ್ಲವೆಂದು ನನ್ನ ಮಗ ಉಪದೇಶ ಮಾಡಿದ ಅವನ ಮಾತನ್ನು ದೇವರು ನಡೆಯಿಸುತ್ತಿದ್ದಾರೆ. ನೀವೂ ಉಣ್ಣಬೇಡಿ, ಧನಿಗಳಿಗೂ ಕೊಡಬೇಡಿ" ಎನ್ನುತ್ತಿದ್ದ. ಯಾರು ಮಾನಪ್ಪನ ಮಾತಿಗೆ ಮರುಳಾಗಿ ನಾಲ್ಕು ದಿನ ಕುಣಿದಾಡಿದರೋ, ಅವರೇ ರೈತರು, ಅದೇ ಪಟ್ಟೆದಾರರ ಮುಂದೆ ಹೋಗಿ ಮುಖ

ಚಿಕ್ಕದು ಮಾಡಿಕೊಂಡು ಕಾಳಿನಸಾಲ, ಕಾಸಿನಸಾಲ ಬೇಡತೊಡಗಿದರು. ಆಗಂತೂ ಮುಕ್ಕಣ್ಣನ ಮುನಿಸು ಅಷ್ಟಿಷ್ಟಲ್ಲ: "ಈ ಜನಕ್ಕೆ ಸುಲಿಗೆ ಮಾಡುವವರೂ ಉಪ್ಪನ್ನು ಹಾಕಿದವರೂ ಒಂದೇ ತೆರನಾಗಿ ಕಾಣಿಸುತ್ತಾರೆ" ಎಂದು ತೋರುತ್ತಿತ್ತು. ಅಂಥ ಒಬ್ಬಿಬ್ಬರೊಡನೆ "ಧನಿಗಳಲ್ಲಿ ಯಾಕೆ ಹೋಗುತ್ತೀರಿ ಅವರು ನಿಮ್ಮ ರಕ್ತ ಕುಡಿದಾರು. ಬೇಡ, ನಿಮ್ಮ ಗುರು, ನಮ್ಮ ಮಗ ಮಾನಪ್ಪನಿದ್ದಾನೆ, ಅವನಲ್ಲಿಗೆ ಹೋಗಿ" ಎಂದ ಆದರೂ ಕಂಗಾಲಾದ ವೇಳೆಯಲ್ಲಿ ರೈತರ ಜುಟ್ಟನ್ನು ಹಿಡಿಯುವ ಶ್ರೀಮಂತರಿಲ್ಲದೆಯೂ ಇಲ್ಲ ಮುಕ್ಕಣ್ಣ ಅದನ್ನು ತಿಳಿಯದವನೂ ಅಲ್ಲ. ಹುಲಿಯನ್ನೂ ದನವನ್ನೂ ಒಂದೇ ಹಂತಿಯಲ್ಲಿ ಕಟ್ಟುತ್ತಾರಲ್ಲ–ಎಂಬುದು ಅವನ ಚಿಂತೆ

ದೇಶದಲ್ಲಿ ಕ್ಷಾಮ ತಲೆದೋರಿತು ಎಂದಮೇಲೆ ನಾಯಕನಾದ ವಾಮನರಾಯನು ಎಚ್ಚರಗೊಳ್ಳಬೇಕಾಯಿತು ಪತ್ರಿಕೆಗಳು ಕ್ಷಾಮದ ಚಿತ್ರಗಳನ್ನು ವಿರಾಟ ಸ್ವರೂಪದಲ್ಲಿ ತೋರಿಸುತ್ತಿವೆ ಅದು ಆತನಿಗೂ ತಿಳಿದ ಸಂಗತಿ ಹೊರಗಿನ ಪ್ರಾಂತದಲ್ಲಿ ಎಂದೋ ತೊಡಗಿದ ಆಹಾರದ ಮುಗ್ಗಟ್ಟು, ಅವನ ರಾಜ್ಯಕ್ಕೆ ಈಗ ಬಂದಿದೆ ಆಹಾರ ನಿಯಂತ್ರಣ ಇತರರಂತೆ ಆತನೂ ಹೊರಿಸಿದ, ಹೊರಗಿನಿಂದ ದವಸ ತರುವ ಏರ್ಪಾಟುಮಾಡಿದ ಅದನ್ನು ಹಂಚುವ ಇಲಾಖೆಯೊಂದು ಹುಟ್ಟಿಕೊಂಡಿತು ಇದು ತನ್ನಂತೆಯೇ, ನೂರಾರು ಇಷ್ಟಮಿತ್ರರಿಗೆ, ಚುನಾವಣೆಯಲ್ಲಿ ಬೆಂಬಲಕೊಟ್ಟವರಿಗೆ, ಲಾಭ ಒದಗಿಸುವ ಅವಕಾಶವನ್ನು ಕಲ್ಪಿಸಿತು ಕೊಂಡ ಕಾಳೆಷ್ಟೋ, ಬಂದುದೆಷ್ಟೋ, ಹಂಚಿದ್ದೆಷ್ಟೋ, ಅದು ಸಿಕ್ಕಿದ್ದಾರಿಗೋ! ನಗರಗಳಲ್ಲಿ ಹಸಿದವರಿಗೆ ಹೊಟ್ಟೆ ತಣಿದ ಬಳಿಕ, ಅದು ಹಳ್ಳಿಗಳಿಗೆ ಹೋಗಬೇಕು ಹೋಗುವಷ್ಟು ಹೋಯಿತು, ಸಿಕ್ಕಿದವರಿಗೆ ಸಿಕ್ಕಿತು. ಸಿಗದವರ ಕೂಗು ಆಳುವ ಜನಕ್ಕೆ ಕೇಳಿಸದಾಯಿತು.

ಶಾಸನ ಸಭೆಯಲ್ಲಿ ಇದಕ್ಕಾಗಿ ಸರಕಾರವನ್ನು ಕುಕ್ಕಿದರೆ, ಆತ "ಇವೆಲ್ಲ ಅತಿಕರಿಸಿ ಬರೆದ ಚಿತ್ರಗಳು. ಸುಳ್ಳು ಮಾತುಗಳು. ಒಮ್ಮೆ ಹಾಗಿದ್ದರೂ ಮುಂದೆ ಭಯವಿಲ್ಲ. ಶೀಲವತಿ ನೀರ್ಕಟ್ಟೆಯ ರಚನೆ ಈ ವರ್ಷವೇ ಮುಗಿಯಬಹುದು. ನೀವುಗಳನ್ನುವಂತೆ ಭಯವಿಲ್ಲ"

ಎನ್ನುತ್ತಾನೆ. ಆಳುವ ಅಧಿಕಾರಿಗಳ, ಮಂತ್ರಿಗಳ ಮನೆಗಳಲ್ಲಿ ಕ್ಷಾಮ ಎಂದಾದರೂ ತಲೆ ಹಾಕೀತೇ ?

ಗೊಂಡಾರಣ್ಯದಲ್ಲಿ ಉಂಟಾದ ಆಹಾರದ ದುಸ್ಥಿತಿ ಸೇತುರಾಯ, ಅರುಣಾಚಲಯ್ಯನವರಂತಹವರಿಗೆ ಟೀಕೆಗೆ ಅವಕಾಶ ಕೊಟ್ಟಂತೆಯೇ, ನಾಡನ್ನು ಸುತ್ತುವುದಕ್ಕೂ ಅವಕಾಶ ಕೊಟ್ಟಿತು. ಸೇತುರಾಯನಿಗೆ ತಾನು ದೊರಕಿಸಿಕೊಂಡ ಅಂಕೆ, ಸಂಖ್ಯೆಗಳು ಸರಕಾರವನ್ನಿರಿಯಬಲ್ಲ ಆಯುಧಗಳಾಗಿದ್ದುವು. ಅಂಥ ಆಯುಧ ಸಂಗ್ರಹ ಆತನ ಪರಿಶ್ರಮ. ಅರುಣಾಚಲಯ್ಯನವರಿಗೆ ಬರಿಯ ಅಂಕೆ ಸಂಖ್ಯೆಗಳ ನಂಬಿಕೆ ಸಾಲದು. ಅವರ ಸ್ವಭಾವದಲ್ಲಿ ಜನತೆಯ ಮೇಲಿನ ಮರುಕ ಮೊದಲಿನಿಂದ ಹರಿದು ಬಂದುದು. ಬರಗಾಲ ಪೀಡಿತರನ್ನು ಕಂಡು, ಕೊರತೆಗಳೇ ನೆಂದು ತಿಳಿದು ಏನಾದರೂ ಪರಿಹಾರದ ದಾರಿಯಿದೆಯೇ-ಎಂಬ ಚಿಂತೆ ಅವರಿಗೆ. ನಾಲ್ವರು ಸಂಗಡಿಗರನ್ನು ಕಟ್ಟಿಕೊಂಡು ನಾಡಿನ ಉದ್ದಕ್ಕೂ ಅವರು ಸಂಚರಿಸಿದರು. ಬರಿದಾದ ಹೊಲಗಳನ್ನು ಕಂಡು ದುಃಖಿಸಿದರು; ಅರೆ ಹೊಟ್ಟೆಯ ಜನತೆಯನ್ನು ಕಂಡು ಮರುಗಿದರು ಸರಕಾರಿ ಡಿಪೋ ಗಳಲ್ಲಿ ಮದ್ದಿನಂತೆ ತೊಲೆಗಳ ಎಣಿಕೆಯಲ್ಲಿ ಮಾರುತ್ತಿದ್ದ ಕಾಳನ್ನು ಸಹ ಕೊಳ್ಳುವುದಕ್ಕೆ ತ್ರಾಣವಿಲ್ಲದೆ ಕಂಗಾಲಾದ ಜನ ಸಮೂಹವನ್ನು ಕಂಡರು 'ಬರಿಯ ಒಂದು ವರ್ಷದ ಕ್ಷಾಮದಿಂದ ಇಷ್ಟೆಲ್ಲ ಹಾನಿ ಸಾಧ್ಯವೇ' ಎಂಬ ಚಿಂತೆಗೆ ಈಡಾದರು. ಗ್ರಾಮ ಗ್ರಾಮಗಳಲ್ಲಿ ಸಂಚರಿಸಿ ಬಡತನದ ಭವಣೆಗಳನ್ನು ಕಂಡು, ಹೊಟ್ಟೆಗಿಲ್ಲದೆ ಸತ್ತವರ, ಸಾಯುತ್ತಿದ್ದವರ ಸಂಖ್ಯೆಯು ಸಾಕಷ್ಟಿದೆಯೆಂದು ತೋರಿದಾಗ ತೀರ ಕಳವಳಕ್ಕೆ ಈಡಾದರು. ಆ ಚಿತ್ರವನ್ನು, ಮುಖ್ಯಮಂತ್ರಿಗೂ ಬರೆದು ತಿಳಿಸಿದರು. ಅವರು ಒದಗಿಸಿದ ಸಾವಿನ ಸಂಖ್ಯೆಯ ಆಧಾರದಿಂದ ಸೇತುರಾಯ 'ಸರಕಾರ ಕ್ಷಾಮವನ್ನು ಪಸರಿಸುತ್ತಿದೆ' ಎಂದು ಆರೋಪ ಹೊರಿಸಿದ ಇದಕ್ಕಾಗಿ ಒಂದು ವಿಚಾರಣೆ ನಡೆಯಿತು. ಆ ನಾಟಕದ ಫಲಿತಾಂಶವೆಂದರೆ-ಸತ್ತವರೆಲ್ಲ ವಿವಿಧ ಬೇನೆಗಳಿಂದ ಸತ್ತರೆಂದು ಸುಳ್ಳು ದಾಖಲೆ ಹುಟ್ಟಿಕೊಂಡುದು.

ಈ ಸಂಚಾರದ ದಿನಗಳಲ್ಲಿ ಅರುಣಾಚಲಯ್ಯನವರು ತಮ್ಮ ಗೆಳೆಯ ರೊಂದಿಗೆ ಕಿಗ್ಗಳ್ಳಿಯ ಪ್ರದೇಶಕ್ಕೆ ಬಂದರು. ಜಯದೇವ, ವಾಮದೇವರ

ಪರಿಚಯ ಮೊದಲೇ ಉಂಟಾಗಿತ್ತು. ಚುನಾವಣೆಯ ಸೋಲಿನ ಬಾಂಧವ್ಯವು ಅದು. ಅಲ್ಲಿಗೆ ಬಂದು ಸುತ್ತಲಿನ ಪರಿಸ್ಥಿತಿ ತಿಳಿಯ ತೊಡಗಿದರು "ಗುಡ್ಡಗಾಡಿನ ದೊಂಡಾಲರು ಹಾಗೂ ಹೀಗೂ ಜೀವ ಹಿಡಿದುಕೊಂಡಿದ್ದಾರೆ ರೈತರು ಮಾತ್ರ ತೀರ ಕಂಗಾಲಾಗಿದ್ದಾರೆ; ಬೇರು ಸೊಪ್ಪುಗಳನ್ನು ತಿಂದು ಬೇನೆಗಳಿಗೆ ತುತ್ತಾಗಿದ್ದಾರೆ. ಮೇವಿಲ್ಲದೆ ದನಕರುಗಳಿಗೂ ಕಷ್ಟವೊದಗಿದೆ ನೆಪಕ್ಕೆ ಆ ಪ್ರಾಂತಗಳಲ್ಲಿ ಕೆಲವು ರೇಶನ್ ಅಂಗಡಿಗಳು ಇವೆ ಆರೆಂಟು ಮೈಲು ನಡೆದು ಹೋದರೆ, ವಾರಕ್ಕೆ ಮನೆಯೊಂದರ ಸೇರೋ ಎರಡು ಸೇರೋ ಅಕ್ಕಿ ಕೊಡುತ್ತಾರೆ ಹಲವರಿಗೆ ಅದನ್ನೂ ಕೊಳ್ಳುವ ಶಕ್ತಿಯಿಲ್ಲ" ಎಂದು ಜಯದೇವರು ವಿವರಿಸಿದಾಗ "ನಿಮ್ಮ ಒಕ್ಕಲುಗಳು?" ಎಂದು ಕೇಳಿದರು ಅರುಣಾಚಲಯ್ಯನವರು

"ಅವರೂ ಎಲ್ಲರಂತೆ"

ಮುಕ್ಕಣ್ಣನ ಒಣ ಶರೀರ ಈ ಸಂಭಾಷಣೆಯನ್ನು ಕೇಳುತ್ತ ನಿಂತಿತ್ತು "ಅಯ್ಯ ನನ್ನ ಮಗನ ಸವಾರಿ ಕಳೆದ ವರ್ಷ ಇಲ್ಲಿತ್ತು. ಅವನು ಧನಿಗಳಿಗೆ ಗೇಣಿ ಕೊಡಬೇಡಿ ಎಂದು ಉಪದೇಶ ಮಾಡಿದ ಈಗ ಅವನು ಊರಲ್ಲಿ ಇಲ್ಲ, ಧನಿಗಳು ಗೇಣಿಯನ್ನು ಕೇಳಲೂ ಇಲ್ಲ. ಅದನ್ನು ನೋಡುವುದಕ್ಕಾದರೂ ಅವನು ಬರಬಹುದಿತ್ತು. ಅಲ್ಲೆಲ್ಲೋ ಭೀಮನೂರಿನಲ್ಲಿ ಇದ್ದಾನಂತೆ" ಎಂದ ಅಸಂಬದ್ಧವಾಗಿ

"ಯಾಕೆ ಮುಕ್ಕಣ್ಣ? ಎಲ್ಲಿಂದೆಲ್ಲಿಗೆ ಮಾತು ಹಾರಿಸಿದೆ?" ಎಂದರು ವಾಮದೇವರು

"ಅಲ್ಲ–ಒಡೆಯ, ಎದೆ ಕುದಿಯುತ್ತಿದೆ. ಇವರಿಗೆಲ್ಲ ಅವನ ಮಾತು ಸತ್ಯವಾಗಿದೆ 'ಸಂಕಟ ಬಂದಾಗ ವೆಂಕಟರಮಣ' ಎಂದು ಹೇಳುವ ಹಾಗೆ ಹಣ ಕೇಳುವುದಕ್ಕೆ, ಧಾನ್ಯ ಬೇಡುವುದಕ್ಕೆ, ನಿಮ್ಮಲ್ಲಿಗೆ ಬಂದರು ನೀವಾದುದಕ್ಕೆ ಕೊಟ್ಟಿರಿ ನಾಳೆ ಮಳೆ ಬಂದರೆ ಬಿತ್ತನೆಗೆ ಬೀಜ ಕೊಡಬೇಕು ನೀವು, ಫಸಲು ಬರುವತನಕ ಹಣ ಕೊಡಬೇಕು ನೀವು" ಎಂದ

ಅವನ ಸ್ವಾಮಿಭಕ್ತಿಗೆ ಒಂದೇ ಮುಖ; ಅದು ತಾನು ನಂಬಿ ...ಂಗ ಹಾದಿ ಯಾವ ರಾಜಕೀಯವೂ ತಿಳಿಯದ ಅವನ ಮನಸ್ಸನ್ನು

ಮಗನ ಮಾತು, ರೀತಿಗಳು ಬಹುವಾಗಿ ಕೊರೆಯುತ್ತಲೇ ಇದ್ದವು. ಅವನ್ನು ಕೇಳಿ ನಿಂತ ಜನಗಳಿಗೆ ಆತ ಅಂದೂ ಅಂದಿದ್ದ: "ಜಾತ್ರೆಯಲ್ಲಿ ನನ್ನ ಮಗನ ತಾರೀಪಿನ ಮಾತಿಗೆ ಕಿವಿಗೊಟ್ಟು ನಿಂತಿರಲ್ಲಾ; ಅವನು ಹೇಳುವುದೇ ಸರಿ ಎಂದಿರಲ್ಲ! ಈಗ ಅದೇ ಧನಿಗಳ ಮನೆಗೆ ನಾಚಿಗೆ ಬಿಟ್ಟು ರಾಗಿ, ಬತ್ತ ಬೇಡುವುದಕ್ಕೆ ಹೋಗುತ್ತೀರಾ? ನಾನು ಅವರಾಗಿದ್ದರೆ, ಒಂದು ಕಾಳು ಕೊಡುವವನಲ್ಲ ಬಿಸಿಲುಗಾಲದಲ್ಲಿ ನೆರಳಿಲ್ಲದೆ ನಿಂತಾಗ, ನೆರಳು ಕೊಟ್ಟ ಆಲದ ಮರವನ್ನು ಕಡಿದು ಸೂಡಬೇಕು ಎನ್ನುವವರು ನೀವು ಸ್ವಂತಕ್ಕೆ ಒಂದು ನೆರಳಿನ ಗಿಡ ನಡುವವರಲ್ಲ ಇದ್ದ ಮರ ಕಡಿದರೆ, ಸಿಕ್ಕಿವ ನೆರಳು ಹೋಗುತ್ತದೆ ಎಂಬ ಜ್ಞಾನವಿಲ್ಲ ಈ ಕ್ಷಾಮಕಾಲದಲ್ಲಿ ಮಾನಪ್ಪನನ್ನು ಹುಡುಕಿಕೊಂಡು ಹೋಗದೆ ಧನಿಗಳ ಮನೆಗೆ ಹೋಗುತ್ತೀರೇಕ?" ಈಗ ಹೊಟ್ಟೆಗಿಲ್ಲದಾಗ ಆ ಧನಿಗಳೇ ಅವರನ್ನು ಕಾಪಾಡಬೇಕಾಯಿತು ಬೇಡುವುದಕ್ಕೆ ಹೋದ ರೈತರು ಆ ಒಂದು ಗಳಿಗೆಯ ಮಟ್ಟಿಗಾದರೂ ಧನಿಯ ಔದಾರ್ಯ ನೆನೆದು ಬಂದರು "ಎಲ್ಲರ ಹಾಗೆ ಇವರಲ್ಲ" ಎಂದೂ ಅಂದರು

ಮುಕ್ಕಣ್ಣನ ಮಾತಿನಿಂದಾಗಿ ಅವನ ಮಗನ ಪ್ರಸ್ತಾಪ ಬಂದಿತು. ಚುನಾವಣೆಯ ಕಾಲದ ಸುದ್ದಿಗಳು ಬಂದುವು. ಗುಲಾಲಿ ಟೋಪಿಗಳ ಪ್ರಚಾರ ಕಲೆಯ ವಿಷಯ ಹೊರಟಿತು ಮುಕ್ಕಣ್ಣನ ವಿಚಾರದಲ್ಲಿ ಮಾತನಾಡುತ್ತ ಧನಿಗಳು ಅಭಿಮಾನದ ಮಾತುಗಳನ್ನಾಡಿದರು ಅವನ ಹಿರಿಯರು ಮಾಡಿದ ಸೇವೆ, ಅವನ ನೇಮ ಎಲ್ಲವನ್ನೂ ಬಣ್ಣಿಸಿ "ಅವನಿಗೆ ಮಗ ಗುಲಾಲಿ ಪಂಗಡ ಸೇರಿದ್ದೆಂಬುದು ಎದೆಗೆ ಬರೆಯಿಟ್ಟಂತಾಗಿದೆ ದಿನವೆಲ್ಲ ಅದೇ ಚಿಂತೆಯಿಂದ ಕೊರಗುತ್ತಿದ್ದಾನೆ" ಎಂದರು.

ಅಲ್ಲಿಂದ ಮಾತು ಚುನಾವಣೆಯ ಸ್ಪರ್ಧೆಯನ್ನು ಕುರಿತೋಡಿತು. ಅರುಣಾಚಲಯ್ಯನವರು "ಇಲ್ಲಿ ಶ್ರಮವಾದಿಗಳ ಪೈಕಿ ನಿಂತುದಾರು? ನಿಮಗೆ ಅಷ್ಟು ಕಡಿಮೆ ಮತ ಬೀಳಲು ಕಾರಣವೇನು? ನೀವು ಗೆದ್ದು ಬರುವ ವಿಷಯದಲ್ಲಿ ನಮ್ಮೊಬ್ಬಬ್ಬರಿಗೂ ಅನುಮಾನವಿರಲಿಲ್ಲ" ಎಂದರು.

"ನೀವು ಹೇಗೆ ತಿಳಿಯುತ್ತೀರೋ-ಈ ಪ್ರಾಂತದಲ್ಲಿ ಇಂದಾದರೂ ಸರಿಯೆ-ಗುಲಾಲಿ ಟೋಪಿಗಳ ವರ್ಚಸ್ಸಾಗಲೀ, ಹಳದಿ ಟೋಪಿಗಳ ವರ್ಚಸ್ಸಾಗಲೀ ಏನೂ ಇಲ್ಲ ಹೊರಗಿನವರು ಇಲ್ಲಿಗೆ ಬಂದು ಒಲಿಸಿಕೊಳ್ಳುವುದೂ ಕಷ್ಟ ಕೊನೆಯ ತನಕವೂ ನನಗೆ ಅಂಥ ವಿಶ್ವಾಸವಿತ್ತು ನನಗೆ ಈ ಚುನಾವಣೆಯೆಲ್ಲವೂ ಕಪಟ ನಾಟಕವೆಂದೇ ಅನಿಸುತ್ತದೆ" ಎಂದು ಜಯದೇವರು ನುಡಿದಾಗ ಅರುಣಾಚಲಯ್ಯ ನಕ್ಕರು.

ಮುಕ್ಕಣ್ಣ ಸುಮ್ಮನಿರಲಿಲ್ಲ "ಅಯ್ಯಾ, ನನ್ನ ಮಗನ ಪಂಗಡದವರು ಬಡವರ ಪಾರ್ಟಿಯಂತೆ! ಓಟಿಗೆ ಅಷ್ಟು ಹಣ ಸುರಿದರಲ್ಲ, ಎಲ್ಲಿಂದ ತಂದರು? ಯಾವ ಬಡವರು ಕೊಟ್ಟರು? ನಮ್ಮೂರಲ್ಲಿ ಅನೇಕರಿಗೆ ಕೊಟ್ಟುದು ನನಗೆ ಗೊತ್ತು ಅಷ್ಟು ಹಣ ಎಲ್ಲಿಂದ ಬಂತು? ದೇಸಾಯರ ಮನೆ, ಧನಿಯರ ಮನೆ ಸುಲಿದ ದುಡ್ಡಲ್ಲವೆ ಅದು?" ಎಂದು ಕೇಳಿದ ನಂಜಿಸಿಂದ

"ಹಾಗಿರದು, ಅವರಲ್ಲಿ ನಿಸ್ವಾರ್ಥಿಗಳಾದ ನೂರಾರು ಸ್ವಯಂ ಸೇವಕರಿದ್ದಾರೆ ಅವರ ಕೆಲಸ ಸುಲಭ ದರೋಡೆಯ ಹಣವೆಂದು ಯಾಕೆ ತಿಳಿಯಬೇಕು?" ಎಂದರು ಅರುಣಾಚಲಯ್ಯ.

"ಅಯ್ಯಾ, ಇವತ್ತು ನನ್ನ ಮಗನಿಗೆ ದಿನಕ್ಕೆ ಸಿಗರೇಟಿಗೇ ಎರಡು ರೂಪಾಯಿ ಬೇಕು ಅವನು ದುಡಿಯುವ ಶಕ್ತಿಯನ್ನು ನಾನು ಬಲ್ಲೆ ಅವನು ಸುರಿಸುವ ಬೆವರೂ ಅಷ್ಟೇ ಗೊತ್ತು. ಯಾವ ಚಿಂತೆಯೂ ಇಲ್ಲದೆ, ಯಾವ ಕೆಲಸವೂ ಇಲ್ಲದೆ ಭೀಮನೂರಿನಲ್ಲಿ ಸಂಸಾರವನ್ನು ಕಟ್ಟಿಕೊಂಡು ಸುಖವಾಗಿದ್ದಾನಲ್ಲಾ-ಅದು ಹೇಗೆ?" ಎಂದ ಮುಕ್ಕಣ್ಣ

ಅಷ್ಟಕ್ಕೆ ವಾಸುದೇವರು "ಅವರಲ್ಲಿ ಪಾರ್ಟಿ ಫಂಡ್ ತುಂಬ ಇರಬಹುದು" ಎಂದರು.

"ಅಷ್ಟು ದುಡ್ಡೇ-ಬಡವರ ಪಂಗಡದಲ್ಲಿ! ಹಾಗಿದ್ದರೆ ಯಾರೂ ಸೇರಬಹುದು ಏನು ಕಷ್ಟ? ಸಿಗರೇಟಿಗೆ ಎರಡು ಮೂರು ರೂಪಾಯಿ ಕೊಡುವವರಿದ್ದರೆ ಯಾಕೆ ಅಂಥ ಪಂಗಡ ಸೇರಬಾರದು? ಅಯ್ಯಾ, ನೀವೇನೂ ಹೇಳಿ-ದುಡ್ಡಿಲ್ಲದೆ ಈ ಆಟ ನಡೆಯುವುದಿಲ್ಲ.

ಇಲ್ಲಿಯೇ ನೋಡಿವೆನಲ್ಲ-ನಮ್ಮ ಅಯ್ಯನಿಗೆ ಊರಲ್ಲಿದ್ದು ಸೋಲುವುದಕ್ಕೆ ಏಳೆಂಟು ಸಾವಿರ ರೂಪಾಯಿ ತಗಲಿತು ಉಳಿದವರು ಪ್ರತಿಯೊಂದನ್ನೂ ದುಡ್ಡು ಕೊಟ್ಟು ಮಾಡಿಸಿದವರು ಅವರಿಗೆ ಕಡಿಮೆ ಖರ್ಚಾಯಿತೆನ್ನುತ್ತೀರಾ ?"

"ಅಂದರೆ, ನಿನ್ನ ಮಗನು ಸುಲಿಗೆಯ ದುಡ್ಡಿನಿಂದ ಮೆರೆಯುತ್ತಾನೆ ಎನ್ನುತ್ತೀಯಾ ?" ಎಂದು ಅರುಣಾಚಲಯ್ಯ ನಕ್ಕು ಕೇಳಿದರು ಅಷ್ಟಕ್ಕೆ ಮುಕ್ಕಣ್ಣನ ಕಣ್ಣುಗಳಿಂದ ಕಂಬನಿ ಉದುರಿ, ಅಲ್ಲಿ ನಿಲ್ಲುವುದಕ್ಕಾಗದೆ ಎದ್ದು ಹೊರಟುಹೋದ ಧನಿಗಳಿಗೂ ಅದರ ಕಾರಣ ತಿಳಿಯಲಿಲ್ಲ ಅದಕ್ಕೆ ಕಾರಣ-ಮುಕ್ಕಣ್ಣನ ಅಂತರಂಗದಲ್ಲಿ ಧನಿಯ ಮನೆಯ ಸುಲಿಗೆಯಲ್ಲಿ ತನ್ನ ಮಗನಿಗೂ ಒಂದು ಪಾಲಿತ್ತು ಎಂಬ ಅಭಿಪ್ರಾಯ ನಟ್ಟುಹೋದುದು ಅದರಿಂದಲೇ ಆ ಪ್ರಶ್ನೆ ಅವನನ್ನು ದುಃಖಕ್ಕೆ ಗುರಿಮಾಡಿತು ಅಲ್ಲಿ ನಿಲ್ಲುವುದಕ್ಕಾಗದೆ ಆತ ಎದ್ದು ಹೋದ

ಅವನು ಹೊರಟುಹೋದಮೇಲೆ ಧನಿಗಳು ಅವನನ್ನು ತಿರುಗಿ ಕರೆಯಿಸಿಕೊಳ್ಳಬೇಕಾಯಿತು ಏಕೆಂದರೆ-ಅರುಣಾಚಲಯ್ಯನವರಿಗೆ ಗೊಂಡಾರಣ್ಯದ ಆದಿವಾಸಿಗಳ ಪರಿಸ್ಥಿತಿಯನ್ನು ತಿಳಿಯುವ ಕುತೂಹಲವಿತ್ತು ಹೇಗೂ ಅಲ್ಲಿಯ ತನಕ ಬಂದುದರಿಂದ ಅವರನ್ನು ಕಂಡೇ ಹೋಗುವ ಎಂಬ ಆಸೆಯಾಯಿತು ದಾರಿಯ ಅನಾನುಕೂಲತೆಗಳಾಗಲಿ, ಅನ್ನ ಆಹಾರದ ಕಷ್ಟಗಳಾಗಲಿ ಅವನನ್ನು ಅಂಜಿಸಲಿಲ್ಲ. ಅವರೊಡನೆ ಜಯದೇವರೂ ಹೊರಡುವ ಉತ್ಸಾಹ ತಾಳಿದರು ಮುಕ್ಕಣ್ಣ ಮಾರ್ಗದರ್ಶಕನಾಗಬೇಕಾಯಿತು ಆ ಅರಣ್ಯದಲ್ಲಿ ದಾರಿಯಲ್ಲೆಲ್ಲಾ ಕುರುಡು ದಾರಿಗಳು, ಏರು ತಗ್ಗಿನವು ಮುಕ್ಕಣ್ಣನಿಗೆ ಆ ಪ್ರಾಂತದ ನಿಕಟ ಪರಿಚಯವಿದ್ದುದರಿಂದ ಇವರನ್ನು ಕರೆದೊಯ್ಯುವುದಕ್ಕಾಗಲಿ, ಹೋದಲ್ಲಿ ವಸತಿ ಏರ್ಪಾಟು ಮಾಡುವುದಕ್ಕಾಗಲಿ ಕಷ್ಟವಾಗಲಿಲ್ಲ. ಅವರೆಲ್ಲ ಹಲವಾರು ಮೈಲುದೂರ ಬೆಟ್ಟಗಳನ್ನು ಹತ್ತಿ, ಇಳಿದು ಆದಿವಾಸಿಗಳ ವಿವಿಧ ವಸತಿಗಳನ್ನು ಕಾಣುವುದು ಶಕ್ಯವಾಯಿತು. ಆದರೆ ಅವರು ಮೊದಲು ಎಣಿಸಿದಂತೆ ಆದಿವಾಸಿಗಳ ಜೀವನ ಮಾತ್ರ ಸುಖಮಯವಾಗಿರಲಿಲ್ಲ. ಅವರು

ಮೊದಲು ಹೋದುದೇ ದೊಂಡಾಲರ ಸೀಮೆಗೆ ಅಲ್ಲಿಯೂ, ಮಳೆಯಿಲ್ಲದೆ ಕಮರಿ ಬೆಳೆ ನಾಶವಾಗಿತ್ತು. ಗಿಡಗಳೆಲ್ಲ ಒಣಗಿ, ಕಾಡ್ಗಿಚ್ಚುಗಳು ಹೆಚ್ಚಿ ಗಡ್ಡೆ ಗೆಣಸುಗಳಿಗೂ ಕೊರತೆ ಬಂದಿತ್ತು. ಅವರ ಸ್ಥಿತಿಯಾದರೂ ಬೇಕು, ಗೊಂಡಾರಣ್ಯದ ಆದಿವಾಸಿಗಳ ಸ್ಥಿತಿ ಇನ್ನಷ್ಟು ಕಠಿಣವಾಗಿತ್ತು. ಮಲೆನಾಡು ಬಯಲು ಸೀಮೆಗಳಲ್ಲಿ ವಾಸಿಸುವವರಿಗೆ ನೆಪದ ರೇಶನ್ ಸೌಕರ್ಯವಿದ್ದಿತ್ತು. ಇಲ್ಲಿ ಆ ಹೆಸರೇ ಕೇಳದು. ಕ್ಷಾಮ ಬಂದು ಅಲ್ಲಿನ ಬೆಟ್ಟದ ಗೋಡೆಗಳನ್ನು ಚೆನ್ನಾಗಿ ಕಾಯಿಸಿದೆ. ಅಲ್ಲಿ ಬೆಳೆಗೂ ಬರಗಾಲ, ಗಡ್ಡೆಗೆಣಸುಗಳಿಗೂ ಬರಗಾಲ, ಬೇಟೆಯ ಮೊಲ ಜಿಂಕೆಗಳಿಗೂ ಬರಗಾಲ. ಅರಣ್ಯದ ದಟ್ಟಣೆ ಕಡಮೆಯಾಗಿ ವನ್ಯಮೃಗಗಳು ಆದಿವಾಸಿಗಳ ವಸತಿಗಳಿಗೂ ಬಂದು ಪೀಡಿಸತೊಡಗಿವೆ. ಮೊದಲಿನಿಂದಲೂ ಗಡ್ಡೆ ಗೆಣಸು ತಿಂದು ಬದುಕಿದವರು ಈಗ ಕಾಯಿ, ಕಸರು, ಮೊಳಿಕೆಗಳನ್ನು ತಿಂದು ಜೀವಹಿಡಿದುದರ ಪರಿಣಾಮವಾಗಿ ಕ್ಷಾಮದ ಜತೆಗೆ ಬೇನೆಗೂ ತುತ್ತಾಗಿದ್ದರು. ಮುಕ್ಕಣ್ಣ ಆ ಜನಗಳನ್ನು ಒಂದುಗೂಡಿಸಿ ಅರುಣಾಚಲಯ್ಯನವರ ಮುಂದೆ ನಿಲ್ಲಿಸಿ, ಅವರು ಗಾಂಧಿದೇವರ ಪ್ರತೀಕವೆಂಬಂತೆ ಹೊಗಳಿ ತಿಳಿಸಿದಾಗ, ಆ ಜನ ತಮ್ಮ ಗೋಳನ್ನೆಲ್ಲಾ ಹೇಳಿಕೊಂಡರು. 'ಗೋಳು ಕೇಳುವುದು ತನ್ನ ಪಾಲಿನ ಕೆಲಸವಾಯಿತು, ಪರಿಹಾರದ ದಾರಿ ಕಾಣಿಸದಲ್ಲ'–ಎಂದು ಅವರು ತುಂಬ ನೊಂದರು. ಈ ಸಂಚಾರ ಅವರೆಲ್ಲರ ಕಣ್ಣುಗಳನ್ನು ತೀರ ತೆರೆಯಿತು. ಈತನಕ ಆದಿವಾಸಿಗಳು ಜೀವನಕ್ಕಾಗಿ ಹೊರಗಿನವರ ಆಶ್ರಯ ಬೇಡಿದವರಲ್ಲ. ಈಗ ಮೊದಲ ಬಾರಿಗೆ ಬೆಟ್ಟ ಇಳಿದು, ಕಣಿವೆ ಸೇರಿ, ಸರಕಾರದ ಕಾಮಗಾರಿಗಳಲ್ಲಿ ಅನ್ನಕ್ಕಾಗಿ ದುಡಿಯುತ್ತಿದ್ದಾರೆಂದು ತಿಳಿಯಿತು. "ಅಲ್ಲಾದರೂ ಕ್ಷೇಮವೇ" ಎಂದು ವಿಚಾರಿಸಿದಾಗ–ಗುತ್ತಿಗೆದಾರರ ಹಲವಾರು ತಂತ್ರ, ಒತ್ತಾಯ, ಮೋಸಗಳ ಇತಿಹಾಸವು ತಿಳಿಯಿತು.

ಈ ಎಡೆಯಲ್ಲಿ ಅವರ ಕೆಲವೊಂದು ವಸತಿಗಳಲ್ಲಿ ಸರಕಾರದ ಶಾಂತಿರಕ್ಷಣೆಗೆ ತುತ್ತಾದ ಕೈಕಾಲು ಮುರುಕರು, ಬಂಧುಗಳನ್ನು ಕಳಕೊಂಡವರು ಕಾಣಿಸಿದರು. ಹಿಂದೆ ನಡೆದ ಗುಲಾಲಿ ಟೋಪಿ ಗೆರಿಲ್ಲಾ ಕದನಗಳ ಫಲವದು. ಇದಂತೂ ಅರುಣಾಚಲಯ್ಯನವರಿಗೆ

ಆಶ್ಚರ್ಯ ಹುಟ್ಟಿಸಿತು. ಆಗ ಮುಕ್ಕಣ್ಣ ತಾನು ಸೋಮನಹಳ್ಳಿಯಲ್ಲಿ ಕಂಡ ನರಬೇಟೆಯ ಪ್ರಕರಣವನ್ನು ಬಿತ್ತರಿಸಿದ. ಗುಲಾಲಿ ಟೋಪಿಯುವರ ಮಾತಿಗೆ ಮರುಳಾಗಿ ಇಂಥ ಅಜ್ಞಾನಿಗಳು ಹೀಗೆ ದಂಡ ತೆತ್ತರಲ್ಲ–ಎಂಬ ನೋವಾಯಿತು

ದಾರಿಯಲ್ಲಿ ಮುಂದೆ ಮುಂದೆ ಹೋಗುತ್ತಾ ಕಾಣಿಸಿದ ಇನ್ನೊಂದು ದುರಂತ ಚಿತ್ರವೆಂದರೆ–ಗೊಂಡಾರಣ್ಯ ಗೊಡ್ಡಾರಣ್ಯ ವಾಗುತ್ತಿದ್ದುದು ಈ ಅರಣ್ಯ ಪ್ರದೇಶವನ್ನೇ ಮೊದಲಿಗೆ ಹೊಕ್ಕಾಗ ಅರುಣಾಚಲಯ್ಯನವರು ಅವರ ಮಿತ್ರರೊಡನೆ "ಇಲ್ಲಿಗೆ ಒಂದಾದರೂ ಸಮನಾದ ದಾರಿ ಇದ್ದಿದ್ದರೆ ಇಂಥ ಕ್ಷಾಮಕಾಲದಲ್ಲಿ ಎಷ್ಟು ಅನುಕೂಲ ವಾಗುತ್ತಿತ್ತೋ" ಎಂದಿದ್ದರು ಈಗ ಈ ಅರಣ್ಯ ಭಾಗದಲ್ಲಿ ಚಾಚಿರುವ ರಸ್ತೆಗಳನ್ನು ಕಂಡು, ಅದರ ಮಗ್ಗುಲು ಬೆಟ್ಟಗಳನ್ನು ಕಂಡಾಗ ದಿಗಿಲು ಬಡಿಯಿತು ದಟ್ಟನಾದ ಕಾಡುಗಳಿಂದ ತುಂಬಿದ ಆ ಬೆಟ್ಟಗಳಲ್ಲಿ ಈಗ ಕಾಡುಗಳೆಷ್ಟು ಉಳಿದಿವೆ? ಅವೆಲ್ಲವು ಬಟ್ಟ ಬರಿದಾಗಿವೆ ಹಸುರಾಗಿ ಕಾಣಿಸಬೇಕಾದ ಬೆಟ್ಟಗಳ ಮೈ, ಸುಟ್ಟು ಕರಿದಾಗಿದೆ ಅಲ್ಲಿ ವಾಸಿಸುತ್ತಿದ್ದ ಆದಿವಾಸಿಗಳು, ಜೀವನ ನಿರ್ವಹಣ ಕಷ್ಟವಾಗಿ ಎಲ್ಲೆಲ್ಲೊ ಸೇರಿಕೊಂಡಿದ್ದಾರೆ ಅದನ್ನೆಲ್ಲ ಕಂಡಾಗ "ಏನು, ಈ ಮೂರು ನಾಲ್ಕು ವರ್ಷಗಳಲ್ಲಿ ಇಷ್ಟೊಂದು ಅರಣ್ಯಗಳು ಧ್ವಂಸವಾದುವೇ? ಅದರಿಂದ ಸರಕಾರಕ್ಕೆ ಬಂದ ವರಮಾನವೂ ಹೆಚ್ಚಿಗೆ ಕಾಣಿಸುವುದಿಲ್ಲ" ಎಂದು ಅರುಣಾಚಲಯ್ಯನವರು ಉದ್ಗರಿಸಿ ದಾಗ "ಲಾಭ ಖೇತಕರಿ ಕಂಪೆನಿಗೆ ಹೋಗಿರಬಹುದು, ವಾಮನ ರಾಯನ ಕಿಸೆಗೂ ಹೋಗಿರಬಹುದು" ಎಂದರು ಜಯದೇವರು.

ಇವನ್ನೆಲ್ಲ ಕಂಡು ಅರುಣಾಚಯ್ಯನವರಿಗೆ ನಿಟ್ಟುಸಿರು ಬಿಡುವು ದೊಂದೇ ಕೆಲಸವಾಯಿತು. ರಾಜಕೀಯದ ಹೊಲಸು, ಅಧರ್ಮ, ಕುತಂತ್ರಗಳನ್ನು ಕಂಡು ಬೇಸರಿಸಿದ ಅವರ ಮನಸ್ಸು ಈ ಕ್ಷಾಮದ ಚಿತ್ರಗಳನ್ನು ಕಂಡು ಇನ್ನಷ್ಟು ಕಂಗೆಟ್ಟಿತು ಆ ಎಲ್ಲ ನೋಟಗಳು ನಿರಾಶೆಯ ಕತ್ತಲನ್ನು ಹೆಚ್ಚಿಸಿದರೂ 'ತ್ರಾಣವಿರುವ ತನಕ ಹೋರಾಡ ಬೇಕು, ಆಗುವುದು ಹೋಗುವುದು ವಿಧಿಯ ಇಚ್ಛೆ' ಎಂಬ ನಿರ್ಧಾರ ಉಂಟಾಯಿತು. ಅವರು ಅರಣ್ಯಗಳನ್ನು ಸುತ್ತಿಬಂದರು, ಕಷ್ಟ

ದಲ್ಲೊ ನೀತಿಗೆಡದೆ ಬಾಳುತ್ತಿರುವ ಕುರುಂಬರ, ದೊಂಡಾಲರ ಸರಳ ಜೀವನ ಕಂಡರು. ಕಂಡು ಮರಳುತ್ತಾ ತಮ್ಮ ಗೆಳೆಯರೊಡನೆ ಮಾತಿಗೆ ' ಜಂಗ್ಲಿ ಕಾಯಿದೆ ' ಎನ್ನುವುದುಂಟು, ಆದರೆ ಅಲ್ಲಿನ ಸ್ಥಿತಿಯೇ ಬೇರೆ, ಬಯಲಿನ ಜನಗಳ ನೀತಿಯೇ ಬೇರೆ. ಕಾಡಿನ ಹುಲಿ ಹಸಿದಾಗ ಕೊಲ್ಲುತ್ತದೆ, ಬೇಕಷ್ಟೇ ತಿನ್ನುತ್ತದೆ. ಕಾಡಲ್ಲದ ನಾಡಿನಲ್ಲಿ ನಾಗರಿಕರೆನಿಸುವ ಜನಗಳ ರೀತಿ ಮಾತ್ರ ' ಜಂಗ್ಲಿ ' ಆಗಿದೆಯಲ್ಲವೇ" ಎಂದು ನುಡಿದರು

ಅವರು ಮರಳುವಾಗ ತಿರುಗಿ ಕಿಗ್ಗಳ್ಳಿಗೆ ಹೋಗಲಿಲ್ಲ ಗೊಂಡಾರಣ್ಯದಿಂದ ಭೀಮನೂರಿಗೆ ಇಳಿದು ಅಲ್ಲಿ ಜಯದೇವರನ್ನು, ಮುಕ್ಕಣ್ಣನನ್ನು ಬೀಳ್ಕೊಟ್ಟರು. ಈ ಹತ್ತೆಂಟು ದಿನಗಳಲ್ಲಿ ಸಾಮಾನ್ಯ ವ್ಯಕ್ತಿಯಾದ ಮುಕ್ಕಣ್ಣನ ನೀತಿ, ವಿವೇಕ, ಪ್ರಾಮಾಣಿಕತೆಗಳನ್ನು ಕಂಡು ಅವರು ಬೆರಗಾಗಿದ್ದರು ಬೀಳ್ಕೊಡುವ ಗಳಿಗೆ ಬಂದಾಗ ಜಯದೇವರೊಡನೆ "ಜಯದೇವ, ನಾನು ಬಡತನಕ್ಕೆ ಅಂಜುವುದಿಲ್ಲ , ಅದಕ್ಕೆ ಮುಕ್ತಿಯಿದೆ, ನಿಮ್ಮ ಮುಕ್ಕಣ್ಣ ಯಾವ ಶ್ರೀಮಂತ ? ಆದರೆ ಅವನ ಹೃದಯದಲ್ಲಿ ನೀತಿ, ಸತ್ಯಗಳಿಗೆ ಏನೂ ಬಡತನ ಬಂದಿಲ್ಲ ಅದರಿಂದಲೇ ಅವನು ಬದುಕಿದ್ದಾನೆ. ಅವನನ್ನು ನೋಡಿದಷ್ಟು ಸಂತೋಷವಾಗುತ್ತದೆ. ಎಲ್ಲಿ ಅವೆರಡು ವಸ್ತುಗಳೇ ಇಲ್ಲವೋ, ಅಲ್ಲಿ ಏನು ಪ್ರಯತ್ನಮಾಡಿದರೂ ಕಸಕ್ಕೆ ಸಮ ಶೀಲಗೆಟ್ಟ ಜನಕ್ಕೆ ಯಾವುದೂ ಫಲಿಸದು"ಎಂದರು

ಅವರ ಮನಸ್ಸು ಆ ಕಾಲದಲ್ಲಿ ತಮ್ಮ ಹಳೆಯ ಗುರುಗಳನ್ನು ಸ್ಮರಿಸಿತು. ತಮಗೆ ಮಾರ್ಗದರ್ಶಕರಾಗಿದ್ದ ಗಾಂಧೀಜಿಯವರನ್ನು ನೆನೆದಷ್ಟು ಮನಸ್ಸು ಖಿನ್ನವಾಯಿತು ಜಯದೇವರ ಕಡೆಗೆ ಮುಖ ಹೊರಳಿಸಿ "ಇದನ್ನೆಲ್ಲ ನೋಡುವಾಗ ಗೋಡ್ಸೇಯೆ ಉಪಕಾರಿಯೆಂದು ಕಾಣುತ್ತದೆ ತಮ್ಮ ಅನುಯಾಯಿಗಳ ಕೈಯಿಂದ ಚಿತ್ರಹಿಂಸೆಗೆ ಗುರಿಯಾಗಿ ಅವರು ಸಾಯಬಾರದೆಂದು ಈತ ಅವರನ್ನು ಒಮ್ಮೆಗೇ ಕೊಂದ" ಎಂದರು.

ಅಲ್ಲಿಂದ ಭೀಮನೂರಿಗೆ ಬಂದರು ತಮ್ಮ ಮಿತ್ರರೊಡನೆ ಸ್ಟೇಟ್ ಬಸ್ಸಿನಲ್ಲಿ ಕುಳಿತು ವಿಕ್ರಮನಗರಕ್ಕೆ ಹೊರಟರು. ಒಂದು ದಿನದ

ಸಂಪೂರ್ಣಹಾದಿ ಭೀಮನೂರಿನಿಂದ ವಿಕ್ರಮನಗರಕ್ಕಿತ್ತು. ಮೋಟಾರಿನಲ್ಲಿ ಕುಳಿತುಕೊಂಡಮೇಲೆಯೂ, ತಾವು ಕಂಡ ನೋಟಗಳೆಲ್ಲಾ ಅವರ ಮನಸ್ಸನ್ನು ಕೊರೆದು ತಿನ್ನುತ್ತಲಿದ್ದುವು ಅದನ್ನು ತಮ್ಮಗಳೆಯರೊಡನೆ ಚರ್ಚಿಸುತ್ತಾ ಏನಾದರೂ ಪರಿಹಾರ ಮಾರ್ಗವಿದೆಯೋ ಎಂಬುದನ್ನು ಚರ್ಚಿಸುವುದರಲ್ಲಿ ಲೀನವಾಗಿದ್ದರು

ಕುಳಿತು ದಾರಿ ಸಾಗುವಾಗಲ್ಲೆಲ್ಲಾ, ತಾವು ನೆನೆಯುತ್ತಿದ್ದ ಆಡಳಿತೆಯ ಚಿತ್ರಗಳ ಜತೆಗೆ ರಾಷ್ಟ್ರೀಕರಣಗೊಂಡ ಸಾರಿಗೆಯ ಚಿತ್ರವೂ ಸೇರಿಕೊಂಡಿತು ಅವರ ಮನಸ್ಸು ಬಹು ಸಮಯದಿಂದ ಸಮಾಜವಾದಕ್ಕೊಲಿದು ಬಂದುದು ಬಡತನ ಶ್ರೀಮಂತಿಕೆಗಳೊಳಗಿನ ವಿಷಮ ವ್ಯತ್ಯಾಸ ಸಹನೆಯಾಗುತ್ತಿರಲಿಲ್ಲ ಈ ವ್ಯತ್ಯಾಸ ಪರಿಹಾರಕ್ಕೆ ರಾಷ್ಟ್ರಸ್ವಾಮ್ಯ ಒಂದು ದಾರಿಯೆಂದು ತಿಳಿದಿದ್ದರು ಅದರ ಒಂದು ಮಾದರಿ ಕಣ್ಣೆದುರಿಗೆ ಇದ್ದು, ಅಲ್ಲಿಯೂ ಸಂಶಯ ಬೇರೂರಿತು ತಾವು ಕುಳಿತು ಹೋಗುತ್ತಿದ್ದ ಮೋಟಾರು ದಾರಿ, ರಾಜಮಾರ್ಗ, ಅಂದಿನ ಸಾರ್ವಜನಿಕ ಜೀವನದಷ್ಟೇ ಏರುತಗ್ಗುಗಳಿಂದ, ಹಳ್ಳತಿಟ್ಟುಗಳಿಂದ, ಧೂಳು ಹೊಲಸುಗಳಿಂದ ತುಂಬಿ ಆ ದೊಡ್ಡ ವಾಹನವನ್ನು ನಿಮಿಷ ನಿಮಿಷಕ್ಕೂ ಕುಲುಕಿಸುತ್ತಿತ್ತು ಅದು ಹೋದಲ್ಲೆಲ್ಲಾ ಧೂಳೇ. ಹೊರಗಿನ ನಾಲ್ಮಡಿಯಷ್ಟು ಒಳಗೆ. ನಡುನಡುವೆ ಅವರ ಬಳಿಯಲ್ಲಿ ಕುಳಿತಿದ್ದ ಮಿತ್ರ ಅವರ ಕಿವಿಯಲ್ಲಿ ಏನೇನೋ ಹೇಳುತ್ತಿದ್ದ ಕಣ್ಣೆದುರಿಗೆ ನಡೆಯುತ್ತಿದ್ದ ರಾಷ್ಟ್ರಸ್ವಾಮ್ಯದ ನಾಟಕ ಬಣ್ಣಿಸುತ್ತಿದ್ದ. ಪ್ರಯಾಣಿಕರಿಂದ ಕಿತ್ತುಕೊಂಡ ದುಡ್ಡು ಎಷ್ಟೆಷ್ಟೋ ಮೋಟಾರು ಕಂಡಕ್ಟರನ ಕಿಸೆಗೆ ಹೋಗುತ್ತಿತ್ತು—ಎಂದು ತೋರಿಸುತ್ತಿದ್ದ. ಇನ್ನು ಆ ಬಸ್ಸೋ! ಬಕಾಸುರನ ಜಾತಿಯದು ಅದರಲ್ಲಿ ಕುಳಿತಿರಬೇಕಾದವರ ಸಂಖ್ಯೆ ನಾಲ್ವತ್ತು ಉಳಿದ ಜನ ನಿಂತರಾಯಿತು ಬಸ್ ಕಂಡಕ್ಟರ ಎಲ್ಲ ದಾರಿಹೋಕರ ಮೇಲೂ ಕರುಣೆ ಉಳ್ಳವ. ಯಾರಿಗೂ ತಾವು ಇಲ್ಲ ಎನ್ನುವವನಲ್ಲ—ಹೀಗಾಗಿ ಆ ವಾಹನದೊಳಗಿನ ಜನಗಳಿಗೂ, ಹೇರು ಮೂಟೆಗಳಿಗೂ ಅಂತರವಿರಲಿಲ್ಲ. ಜನರ ಬದಲು ದನಗಳಿದ್ದರಾದರೂ ಪ್ರತಿಭಟಿಸುತ್ತಿದ್ದುವೋ ಏನೋ

ಅಲ್ಲಿ ಮೈ ಅಲುಗಿಸಲು ಬಾರದಿದ್ದರೂ ಇನ್ನೊಂದು ಸುಖ

ವುಂಟು, ಕಿವಿ ಅಲುಗಿಸದೆ ನಾಡಿನ ಸುದ್ದಿಗಳನ್ನೆಲ್ಲ ಕೇಳಬಹುದು. ಎಲ್ಲ ತೆರನ ಜನರು ಸೇರುತ್ತಾರೆ ಉಪ್ಪುಕಾರಹಚ್ಚಿ ಬೇರೆಬೇರೆ ಕತೆ ಹೇಳುತ್ತಾರೆ, ಟೀಕೆ ಮಾಡುತ್ತಾರೆ ಅರುಣಾಚಲಯ್ಯನವರಿಗೆ ಕೇಳಿಸಿದ ಸುದ್ದಿಗಳಲ್ಲಿ ಅನ್ನದ ಗೋಳು ಮುಖ್ಯವಾಗಿದ್ದಿತು ಅದನ್ನು ಹಂಚುವವರ ಅನ್ಯಾಯ, ಅನ್ನ ಗಳಿಸುವ ವಾಮಮಾರ್ಗಗಳ ಕತೆ, ಇವೆರಡೂ ಬಂತೆಂದರೆ, ಪರ್ಯಾಯವಾಗಿ, ರಾಜ್ಯ ನಡೆಯಿಸುತ್ತಿರುವ ದೇಶವಾದಿಗಳಿಗೆ ಸಲ್ಲಬೇಕಾದ ಮಂಗಳಾರತಿ ಸಲ್ಲುತ್ತದೆ ಕುಳಿತವರು ಹಳ್ಳಿಯ ಜನಗಳಾದರೂ ಹಲವರಿಗೆ ಮಂತ್ರಿಗಳ ಕುಲ, ಗೋತ್ರ ಗೊತ್ತು ಅವರ ಗಳಿಕೆಯ ದಾರಿ ತಿಳಿದಂತೆ ಬಣ್ಣಿಸುತ್ತಾರೆ ಅವರ ಲಜ್ಜೆಗೇಡಿತನದ ನೂರಾರು ಕೃತಿಗಳನ್ನು ಕುರಿತು ಹೇಳುತ್ತಾರೆ. ಆದರೆ ತಾವು ಆಡಿದ ಮಾತುಗಳಿಗೆ ತಮ್ಮ ಹೊಣೆ ಇರಬಾರದೆಂದು ತೋರಿ ಪ್ರತಿಮಾತಿಗೂ "ಅಂತೆ, ಅಂತೆ" ಎಂದು ಸೇರಿಸುತ್ತಾರೆ.

ಹೀಗೆ ಮಾತುಗಳನ್ನು ಕೇಳಿಕೇಳಿ ಅವರ ಮನಸ್ಸು ದಣಿದಂತೆ ಶರೀರವೂ ದಣಿಯಿತು ದಾರಿಯುದ್ದಕ್ಕೂ ಧೂಳಿನ ಸ್ನಾನ ಮೂಗು ಧೂಳಿನಿಂದಲೂ, ಸಾರ್ವಜನಿಕ ದುರ್ವಾತದಿಂದಲೂ ತುಂಬಿ ಕೊಂಡಿತು ಎಂಟು ತಾಸಿನ ಆ ಪಯಣ ಹತ್ತು ತಾಸುಗಳಲ್ಲಿ ಮುಗಿದು ವೈನುಗ್ಗಾಗಿ ಹೋಗಿತ್ತು ಹೊರಡುವ ಮುನ್ನ ತಂತಿ ಕೊಟ್ಟಿದ್ದರಿಂದ ವಿಕ್ರಮನಗರದ ಬಸ್‌ನಿಲ್ದಾಣದಲ್ಲಿ ಅವರ ಮಿತ್ರ ತಿರುಮೂರ್ತಿ ಕಾದು ನಿಂತಿದ್ದ ಅವರೆಲ್ಲ ಬಂದು ಇಳಿಯುತ್ತಲೇ ಸ್ವಾಗತಿಸಿ, ಟ್ಯಾಕ್ಸಿಯೊಂದನ್ನು ಒದಗಮಾಡಿಕೊಂಡು ಅವರ ಮನೆಗೆ ಹೊರಟ. ಜತೆಯ ಮಿತ್ರರು ತಂತಮ್ಮ ಮನೆಗಳಿಗೆ ಹೋದರು ದಣಿದು, 'ಉಸ್ಸಪ್ಪ' ಎನ್ನುವ ಅವರೊಡನೆ ತಿರುಮೂರ್ತಿ "ಸಂಚಾರ ಚೆನ್ನಾಗಿತ್ತೇ? ಅನೇಕ ಸಂಗತಿಗಳು ಕಾಣಸಿಕ್ಕಿರಬೇಕು ಇಂದು ಬಂದುದೇ ಒಳ್ಳೆಯದಾಯಿತು ಇಲ್ಲಿಯೂ ಏನೇನೋ ಭೂಕಂಪ ಸಿದ್ಧವಾಗಿದೆ" ಎಂದು ಅವರನ್ನು ಸಂಭಾಷಣೆಗೆ ಎಳೆದ

"ಏನು ಭೂಕಂಪ?"

"ವಾಮನರಾಯನ ಆಸ್ಫೋಟನೆ" ಎಂದು ತಾನು ಕೇಳಿದ ರಾಜಕೀಯ ಹವಾಮಾನದ ಸುದ್ದಿ, ಸೂರುಗಳನ್ನು ತಿಳಿಸುವುದಕ್ಕೆ

ಆತುರನಾದ.

"ಈಗೇನೂ ಬೇಡ, ತುಂಬ ದಣಿದಿದ್ದೇನೆ. ಒಂದು ಸ್ನಾನ ಮಾಡಿ ತುಸು ವಿಶ್ರಾಂತಿ ಪಡೆಯುವ ತನಕ ಏನೂ ಬೇಡವಾಗಿದೆ. ಬಸ್ಸು ಪಯಣ ಸಾಕುಬೇಕಾಯಿತು."

"ಅದಕ್ಕೇ ಕಾರಿನಲ್ಲಿ ಹೋಗಿ ಬನ್ನಿ ಎಂದಿದ್ದೆ"

"ನಾನು ಹೋದಲ್ಲಿಗೆ ಕಾರು ಹೋಗಲಾರದು ಕಟ್ಟಿಗೆಯ ಲೇರಿ ಹೋದೀತೋ ಏನೋ."

"ಅಂದರೆ ಗೊಂಡಾರಣ್ಯದ ರಿಜರ್ವ ತನಕ ಹೋದಿರೇ ? ಆದಿವಾಸಿಗಳನ್ನು ಕಾಣುವುದಕ್ಕೆ ?"

"ಹೋದೆ"

"ಏನು ವಿಶೇಷ ?"

ಅಷ್ಟಕ್ಕೆ ಅವರ ಮನೆ ಬಂದಿತು ಇಬ್ಬರೂ ಟ್ಯಾಕ್ಸಿಯಿಂದ ಇಳಿದು ಮನೆಯನ್ನು ಸೇರಿದರು ಅರುಣಾಚಲಯ್ಯನವರ ಸೊಸೆ ಬಾಗಿಲನ್ನು ತೆರೆದು ಅವರನ್ನು ಬರಮಾಡಿಕೊಂಡು "ಮಾವ, ತಂತಿ ಬಂದಿತ್ತು. ನಾನೇ ಇವರಿಗೆ ಹೇಳಿ ಕಳುಹಿಸಿದೆ ಮೊದಲು ಸ್ನಾನ ಮಾಡುತ್ತೀರಾ ? ಉಪಾಹಾರ " ಎಂದಳು

"ಬೇಡ ಮಗು, ಮೊದಲು ಸ್ನಾನ ಈ ಧೂಳು, ಕೊಳೆ ಕಳೆದುಕೊಳ್ಳುವ ತನಕ ಏನೂ ಬೇಡಾಗಿದೆ" ಎಂದು ನೆಟ್ಟಗೆ ಸ್ನಾನದ ಮನೆಗೆ ಹೊರಟರು ತಿರುಮೂರ್ತಿ ಅದನ್ನು ಕಂಡು "ಹಾಗಾದರೆ ನಾನು ಎರಡು ತಾಸು ಬಿಟ್ಟು ಬರುತ್ತೇನೆ ನಿಮ್ಮಿಂದ ಏನಾದರೂ ಸುದ್ದಿ ಸಿಕ್ಕಿದರೆ ನಾಳಿನ ಪತ್ರಿಕೆಗೆ ಆಹಾರವಾಗುತ್ತಿತ್ತು. ಇದೇ ವೇಳೆಗೆ ನಾವು ಒಂದು 'ಟಿ ಎನ್ ಟಿ' ಹಾಕಿ ಬಿಡಬಹುದಿತ್ತು."

ಅರುಣಾಚಲಯ್ಯ ನಕ್ಕರು "ಟಿ ಎನ್ ಟಿ, ಆಟಂ ಬಾಂಬು ಎಲ್ಲವೂ ಒಂದೇ! ಮಾನ ಇದ್ದವರಿಗೆ. ಅದು ಇಲ್ಲದವರನ್ನು ಯಾವುದೂ ಕದಲಿಸದು" ಎಂದು ನುಡಿದು ಸ್ನಾನಕ್ಕೆ ಹೋದರು ತಿರುಮೂರ್ತಿ ತನ್ನ ಮನೆಗೆ ಹೊರಟ

ಅರುಣಾಚಲಯ್ಯನವರ ಮನೆ ಸಾಮಾನ್ಯ ತೆರನ ಒಂದು ಮನೆಯಾಗಿತ್ತು ಬಹು ದೊಡ್ಡದಲ್ಲ, ನಾಜೂಕಿನದಲ್ಲ. ಗಾಂಧಿ ಯುಗ

ದಲ್ಲಿ ಅವರು ವಕೀಲಿಯನ್ನು ಬಿಟ್ಟಿದ್ದುದರಿಂದ ವಕೀಲಿ ವರಮಾನ ಹೋಯಿತು. ನೆಪಕ್ಕೆ ಹಳ್ಳಿಯಲ್ಲಿ ಒಂದಿಷ್ಟು ಜಮೀನಿದೆ ಅದರಲ್ಲಿ ಕೈಗೆ ಬರುವುದು ಕಡಿಮೆ ಅವರು ಹಿಂದೆ ಸೆರೆಮನೆಯಲ್ಲಿದ್ದಾಗ ಹೆಂಡತಿ ತೀರಿಕೊಂಡಳು ಒಬ್ಬನೇ ಮಗ, ಆತ ಮುಂಬಯಿಯಲ್ಲಿ ಏನೋ ನೌಕರಿಯಲ್ಲಿದ್ದಾನೆ ಅವನು ಕಳುಹಿಸುವ ಅಲ್ಪ ಸ್ವಲ್ಪ ಹಣದಿಂದ ಇವರ ಜೀವನ ನಾಗಬೇಕು ಆ ಮಗನ ಹೆಂಡತಿಯೇ ಕೆಲವೊಮ್ಮೆ ಮುಂಬಯಿಯಿಂದ ಅಲ್ಲಿಗೆ ಬಂದು, ಒಂದಷ್ಟು ದಿನ ಇದ್ದು, ಮಾವನ ಆರೈಕೆ ನೋಡಿಕೊಂಡು ಹೋಗುತ್ತಾಳೆ ಇದು ಅವಳ ಅಂಥ ಒಂದು ಸರದಿ ಮಾವನ ಮೇಲಿನ ಪ್ರೀತಿಯಿಂದ, ಪತಿಯ ಆದೇಶದಿಂದ ಅವಳು ಬಂದು ಅವರ ಆರೈಕೆ ನೋಡುತ್ತಿದ್ದರೆ, ಇದ್ದುದರಲ್ಲೆಷ್ಟೋ ಸೌಖ್ಯ ಅವಳಿಗೂ ಮಕ್ಕಳಿದ್ದಾರೆ ಸದಾ ಅವಳೇ ಬಂದಿರುವುದು ಕಷ್ಟ ಆಗಲೆಲ್ಲ ಮೊದಲಿನಿಂದಲೂ ಅವರನ್ನು ವಿಶ್ವಾಸದಿಂದ ನೋಡಿಕೊಂಡು ಬಂದ ಒಬ್ಬ ಅಡುಗೆಯ ಹುಡುಗ ಅವರ ಸೇವೆ ನಡೆಸುತ್ತಾನೆ ಈಗ ಸೊಸೆ ಬಂದುದರಿಂದ ಆತ ನಾಲ್ಕು ದಿನಗಳ ಮಾತಿಗೆ ಊರಿಗೆ ಹೋಗಿದ್ದಾನೆ–ಇಷ್ಟು ಅವರ ಮನೆಯ ಕತೆ, ಸಂಸಾರದ ಸ್ಥಿತಿ

ಅರುಣಾಚಲಯ್ಯ ಬಚ್ಚಲುಮನೆಗೆ ಹೋಗಿ, ಬಟ್ಟೆ ಬದಲಿಸಿಕೊಂಡು ಆಯಾಸದಿಂದ ಮರಳುವಾಗ ಹಸಿವೆಗಿಂತಲೂ ಹೆಚ್ಚಾಗಿ ಕಣ್ಣಲ್ಲಿ ನಿದ್ರೆ ತೂಗುತ್ತಿತ್ತು ಉಪಾಹಾರಕ್ಕೆಂದು ಊಟದ ಮನೆಗೆ ಬಂದು ಕುಳಿತರು–ಸೊಸೆ ಉಪಾಹಾರ ತಂದಿರಿಸಿ “ಮಾವ, ಏನೋ ವಿಶೇಷವಿರಬೇಕು–ಯಾರೋ ಒಬ್ಬ ಬಂದು ಮೂರು ಮೂರು ಬಾರಿ ನೀವು ಬಂದಿದ್ದೀರಾ, ಬರುತ್ತೀರಾ ಎಂದು ಕೇಳಿ ಹೋದ ಯಾರೆಂದು ಕೇಳಿದರೆ ಧನಿಗಳು ಹೇಳಿಕಳುಹಿಸಿದ್ದಾರೆ ಎಂದ ಧನಿಗಳು ಯಾರೆಂದು ಕೇಳಿದರೆ ಯಾರೆಂದು ಹೇಳಲಿಲ್ಲ ‘ಸಂಜೆ ನೀವು ಬರಬಹುದು ತಂತಿ ಬಂದಿದೆ’ ಎಂದಾಗ ಅವನು ‘ಅವರು ಬಂದದ್ದಾದರೆ ನೋಡುವುದಕ್ಕೆ ಕಾಂಚನಮಾಲೆಯವರು ಬರುತ್ತಾರೆ ಒಂಬತ್ತರ ಹೊತ್ತಿಗೆ ಬಂದು ನೋಡಲೇ’ ಎಂದು ತಿಳಿಸಿ ಹೋದ” ಎಂದಳು.

ಕಾಂಚನಮಾಲೆ ಎಂಬ ಹೆಸರು ಅವರ ಮನಸ್ಸಿನಲ್ಲಿ ಏನನ್ನೋ

ಸೂಚಿಸಿತು, ವಿಚಾರಮಗ್ನವಾಯಿತು ಆ ಹೆಸರಿನ ಒಬ್ಬಳು–ಪರಿಚಿತಳು, ದೇಶವಾದಿ ಪಂಗಡದ ಮಂತ್ರಿ ಅವಳಿರಬಹುದೇ ಎಂದು ಯೋಚಿಸಿದರೆ ' ಇರಲಾರದು ಅವಳೇಕೆ ಬರಬೇಕು,' ಎಂದು ತೋರಿ ವಿಚಾರಮೂಢರಾಗಿ ಉಪಾಹಾರ ಮುಗಿಸಿದರು

ಮುಗಿಸಿ ಹೊರಕ್ಕೆ ಬಂದಾಗ ಅವನೇ ದೂತ ತಿರುಗಿ ಬಂದಿದ್ದ. ಒಳಗೆ ಬಂದು, ನಮಿಸಿ " ನೀವು ಬಂದುದು ತಿಳಿಯಿತು ಅಮ್ಮನಿಗೆ ನಿಮ್ಮೊಡನೆ ಮಾತನಾಡುವ ಕೆಲಸವಿದೆಯಂತೆ ಅವರೇ ಬರಲೇ ? ನೀವು ಬರುವುದಾದರೆ ಕಾರು ಕಳುಹಿಸುತ್ತಾರೆ ಬಹಳ ಮುಖ್ಯವಾದ ಕೆಲಸ, ಬೇರಾರೂ ಇರಕೂಡದು ಎಂದು ಹೇಳಿದ್ದಾರೆ" ಎಂದ ಆ ದೂತನ ಪರಿಚಯದಿಂದ ಕಾಂಚನಮಾಲೆ ಯಾರೆಂಬುದು ನಿಶ್ಚಯವಾಯಿತು ಯಾಕಿರಬಹುದೆಂದು ಮಾತ್ರ ಹೂಳೆಯಲಿಲ್ಲ ' ಹೇಗೂ ಇರಲಿ ಅವಳು ಬರುವುದೇ ಒಳಿತು ' ಎಂದು ತೋರಿ ಅದರಂತೆ ರಾತ್ರಿ ಒಂಬತ್ತಕ್ಕೆ ಸರಿಯಾಗಿ ಬರುವಂತೆ ತಿಳಿಸಿದರು

ಸೊಸೆಯೊಡನೆ " ನಾನು ಮೇಲೆ ಹೋಗಿ ಒಂದಿಷ್ಟು ಮಲಗಿಕೊಳ್ಳುತ್ತೇನೆ ತುಂಬ ದಣಿವಾಗಿದೆ ತಿರುಮೂರ್ತಿ ಬಂದರೆ ನಾಳೆ ಬರಲಿ, ಇವತ್ತು ತೊಂದರೆ ಕೊಡುವುದು ಬೇಡವೆಂದು ಹೇಳು ಕಾಂಚನಮಾಲೆ ಬಂದರೆ ಮೇಲೆಯೇ ಕರೆದುಕೊಂಡು ಬಾ ನನಗೆ ದಣಿವಿನಿಂದ ನಿದ್ದೆ ಬಂದಿದ್ದರೆ, ಎಚ್ಚರಮಾಡು " ಎಂದರು

" ಊಟ ?"

" ಈಗ ಎಂಟು ಗಂಟೆಯಾಯಿತು. ಇನ್ನೇನು ಊಟ ? ಉಪಾಹಾರ ಮಾಡಿದೆನಲ್ಲ–ಅದೇ ಸಾಕು "

" ಅಡುಗೆಯಾಗಿತ್ತು, ಅನ್ನವನ್ನೇ ಬಡಿಸುತ್ತಿದ್ದೆ " ಎಂದಳು ಸೊಸೆ.

## ಅಧ್ಯಾಯ ೫

ಅರುಣಾಚಲಯ್ಯನವರು, ದಣಿವ ಶರೀರಕ್ಕೆ ವಿಶ್ರಾಂತಿ ಕೊಡುತ್ತೇನೆಂದು ಮಹಡಿಯ ಮೇಲೆ ಹೋಗಿ ಮಂಚದಲ್ಲಿ ಒರಗಿಕೊಂಡರು ಮನಸ್ಸಿನಲ್ಲಿ ತಾವು ಈಗಷ್ಟೆ ಕಂಡು ಬಂದಿರುವ ಹಳ್ಳಿಗಳ, ಅರಣ್ಯಗಳ ಚಿತ್ರ ಕುಣಿದಾಡುತ್ತಿತ್ತು. ಇನ್ನೊಂದು ಬೇಸಿಗೆ ಬಂದಿದೆ. ಬೇಸಿಗೆಯ ಕಾವು ಏರಿದಂತೆ ಬೂದು ಬಣ್ಣದ ಬಾನಿನಲ್ಲಿ ಮುಗಿಲುಗಳು ನಲಿದಾಡುವುದು ಕಾಣುತ್ತಿದೆ. ಪರ್ವತ ಪ್ರದೇಶಗಳಲ್ಲಿ ಹತ್ತೆಂಟು ಹನಿ ಮಳೆ ಬಿದ್ದುದೂ ಉಂಟು. ದೀರ್ಘ ಕ್ಷಾಮದಿಂದ ಗಾರಾದ ನೆಲ ತುಸುವೇ ತಣಿದುದುಂಟು. ಆದರೆ ವನಶ್ರೀ, ಶೀಲಾವತಿ ಮೊದಲಾದ ನದಿಗಳಲ್ಲಿ ನೀರು ಬಂದಿಲ್ಲ. ಪ್ರಾಂತದ ಜನವೆಲ್ಲ ಮಳೆಯ ಆಸೆಯಿಂದ ಜೀವ ಹಿಡಿದು ನಿಂತಿತ್ತು. ಅಂಥ ಮಳೆ ಬಂದು, ಬೆಳೆ ಬೆಳೆದು ಹೊಟ್ಟೆ ತಣಿಯುವುದಕ್ಕೆ ಇನ್ನೂ ಐದು ತಿಂಗಳ ತವಸ್ಸು ಉಂಟು.

ವಿಕ್ರಮನಗರವಂತಹ ಪೇಟೆಯ ಸ್ಥಿತಿ ಅದಕ್ಕಿಂತ ವಾಸಿ ಹೊರಗಿನಿಂದ ಹೇಗೆ ಹೇಗೋ ಆಹಾರ ಬರುತ್ತದೆ. ದುಡ್ಡು, ವರ್ಚಸ್ಸು ಇದ್ದರೆ ಬದುಕ ಬಹುದು. ಹಳ್ಳಿಯಲ್ಲಿ ಕಾಣಿಸಿದ ಕ್ಷಾಮದ ನೋವುಗಳು ಪೇಟೆಯವರ ಹೃದಯ ತಲ್ಲಣಿಸುವುದಿಲ್ಲ. ಆದರೆ ಅವೆಲ್ಲವನ್ನು ಕಣ್ಣಾರೆ ಕಂಡು ಬಂದ ಅರುಣಾಚಲಯ್ಯನವರಿಗೆ ನಿಶ್ಚಿಂತೆಯಿಂದ ಮಲಗುವುದು ಸಾಧ್ಯವಾಗಲಿಲ್ಲ. ಅತ್ತ ನಿಸರ್ಗದ ಕೋಪ, ಇತ್ತ ಆಳುವವರ ಮೂರ್ಖತೆಯನ್ನು ನೆನೆದು ಬರುವ ಚಿಂತೆ ಇವುಗಳಿಂದ ಮನಸ್ಸಿನ ಆಗಸದಲ್ಲಿ ಯಾವ ಆಶೆಯ ಮುಗಿಲೂ ಕಾಣಿಸುತ್ತಿರಲಿಲ್ಲ.

ಕಾಂಚನಮಾಲೆ ಬರುವುದರೊಳಗೆ ದಣಿದ ದೇಹಕ್ಕೆ ಇಷ್ಟು ವಿಶ್ರಾಂತಿ ಕೊಡುತ್ತೇನೆಂದು ಮಲಗಿದರೆ—ಆ ನಿವಾಸಿಗಳ ಉಬ್ಬಿದ ಹೊಟ್ಟೆಗಳು—ರೈತಾಪಿ ಜನಗಳ ಎಲುಬಿನ ಹಂದರಗಳು ಕಣ್ಣೆದುರಿಗೆ ಕುಣಿಯುತ್ತವೆ. ಬಿರುಕುಗೊಂಡ ಹೊಲಗಳು, ಬೆಂಗಾಡಾದ ಅರಣ್ಯಗಳು, ಒಣಗಿದ ಗಿಡಮರಗಳು, ಸಂತಸ ಉಡುಗಿದ ಜನರ ಮುಖ

ಗಳು ಮೇಲಿಂದಮೇಲೆ ಕಣ್ಣಮುಂದೆ ಬರುತ್ತವೆ. ಯಾವ ಅಧಿಕಾರವೂ ಇಲ್ಲದ ತಾನು ಸುತ್ತಾಡಿ ನೋಡಿ ಬಂದಂತೆ, ವಾಮನರಾಯ ಏಕೆ ಸುತ್ತಿ ನೋಡಿ ಬರಬಾರದು? ಅವನ ಮಂತ್ರಿಗಳು ಕಾರುಗಳು ಓಡಾಡುವಲ್ಲಿಗಷ್ಟೆ ತಮ್ಮ ಪಯಣವನ್ನು ಮಿತಿಗೊಳಿಸಬೇಕೇ? ತಮ್ಮ ಆಯುಷ್ಯವನ್ನೆಲ್ಲಾ ಶಾಲೆ, ಹೋಟೆಲು, ನರ್ಸರಿ, ಸಂತೆ ಗಳನ್ನು ತೆರೆಯುವುದರಲ್ಲೊ ಎಲ್ಲ ಬಗೆಯ ಅಧ್ಯಕ್ಷತೆಯ ಪೌರೋಹಿತ್ಯ ನಡೆಯಿಸುವುದರಲ್ಲೊ ಕಾಲಕಳೆಯಬೇಕೇಕೆ? ದೇಶದ ಒಂದು ಸಮಸ್ಯೆಯೂ ಅವರಿಗೆ ಕಾಣಿಸಬೇಡವೇ? ಇವನ್ನೆಲ್ಲ ಅವರಿಗೆ ಹೇಗೆ ಮಂದಟ್ಟು ಮಾಡಲಿ–ಎಂಬ ಚಿಂತೆಗೊಳಗಾಗಿತ್ತು

'ಆಗಲಿ ಕಾಂಚನಮಾಲೆ ಬರುತ್ತಾಳೆ, ಅವಳು ಆರೋಗ್ಯ ಮಂತ್ರಿ ಕರೆಯದೆಯೇ ಬರುತ್ತಿದ್ದಾಳೆ ಅವಳೊಡನೆ ನನ್ನ ಹೃದಯ ತೆರೆಯುತ್ತೇನೆ. ನನ್ನವರಿಗೆ ಅದರಿಂದ ಅಸಮಾಧಾನವಾದರೂ ಚಿಂತೆ ಯಿಲ್ಲ. ಅವಳದು ಹೆಣ್ಣು ಹೃದಯ–ಅದರಲ್ಲಿ ಕರುಣೆಗೆ ಏನಾದರೂ ಸ್ಥಾನವಿದ್ದೀತು' ಎಂದು ಆಕೆಯನ್ನು ನೆನೆಯತೊಡಗಿದಾಗ ಆಕೆಯ ರೂಪು, ಯೌವನಗಳು ಅಡ್ಡಬಂದವು ಅವಳನ್ನು ಕುರಿತು ಕೇಳಿದ ಸುದ್ದಿ, ಸಮಾಚಾರಗಳು ಇದಿರಾದುವು 'ನಿಜಕ್ಕೂ ಮಂತ್ರಿಯಾ ಗುವ ಅನುಭವ, ಯೋಗ್ಯತೆ ಅವಳಿಗಿದೆಯೇ? ಜನರಾಡುವಂತೆ ಅವಳ ಹೆಣ್ಣುತನವೇ ವಾಮನರಾಯನಿಂದ ಆ ಪದವಿ ದೊರಕಿಸಿ ಕೊಟ್ಟದ್ದು ನಿಜವೇ? ರಾಜಕೀಯದಲ್ಲಿ ಅಧಿಕಾರ, ಹಣಗಳೆರಡೇ ತಾಂಡವ ಆಡಿದ್ದರೆ ಸಾಕಿತ್ತು ಅವುಗಳ ಜತೆಗೆ ವಿಲಾಸ, ಕಾಮಗಳು ತಮ್ಮ ಪ್ರಭಾವವನ್ನು ಬೀರಿದರೆ ದೇಶದ ಪಾಡೇನು?' ಎಂದು ಏನೇನೋ ತೋರಿತು ಮನಸ್ಸು ನೆಮ್ಮದಿಗೊಳ್ಳದೆ 'ಶಾಂತಾ' ಎಂದು ಸೊಸೆಯನ್ನು ಕರೆದರು ಆಕೆ ಬಂದೊಡನೆಯೇ 'ಶಾಂತಾ, ಕಾಂಚನ ಮಾಲೆ ನಿನ್ನ ಸಹಪಾಠಿ ಎಂದಿದ್ದೀಯಲ್ಲವೇ?' ಎಂದು ಕೇಳಿದರು.

"ಹೌದು, ನನಗೆ ತುಂಬ ಸ್ನೇಹಿತೆಯೂ ಆಗಿದ್ದಳು. ಆದರೆ, ಈಗ ಹೇಗಿದ್ದಾಳೋ ತಿಳಿಯದು ನೋಡದೆ ಎಷ್ಟೋ ವರ್ಷಗಳಾ ದುವು. ಮುಂಬಯಿಗೆ ಹೋದಮೇಲೆ ನೋಡಿಯೇ ಇಲ್ಲ ಜನ ಏನೇನೋ ಆಡಿಕೊಳ್ಳುತ್ತಿದ್ದಾರೆ ಅದರಲ್ಲಿ ಆಶ್ಚರ್ಯವೂ ಇಲ್ಲ–

ಅವಳ ತಾಯಿ ಯಾರೆಂದು ಗೊತ್ತಿಲ್ಲ."

"ಅಂಥ ವಿಷಯಗಳಲ್ಲಿ ಹೆಣ್ಣು ಗಂಡು ಹತ್ತಿರವಿದ್ದರೇ ಸುದ್ದಿ ಹಬ್ಬುತ್ತದೆ ಅಲ್ಲದೆ ಅವಳ ಕುಲವೂ ಹಾಗೆ ಮದುವೆ ಆಗಿಲ್ಲ ಎಂಬುದರಿಂದ ಜನರೇನೂ ಆಡಬಹುದು. ಆದರೆ ಅದು ಅವಳ ಖಾಸಗಿ ಜೀವನ, ಅದು ಮುಖ್ಯವಲ್ಲ, ಅವಳ ಗುಣ, ನಡತೆ, ಬುದ್ಧಿ–ಹೇಗೆ ?"

"ತುಂಬ ಬುದ್ಧಿವಂತೆ, ಒಳ್ಳೆಯ ವಾಗ್ಮಿ"

"ನಂಬಿಕೆಯುಳ್ಳವಳೇ ? ಸ್ನೇಹವಲ್ಲಾಗಲಿ, ಕೆಲಸದಲ್ಲಾಗಲಿ ಹಟ, ನಿಷ್ಠೆಗಳಿವೆಯೇ ?"

"ಅದೂ ಇದೆ"

"ಸ್ವಲ್ಪ ಕಮ್ಯೂನಿಜಮ್‌ನಕಡೆಗೆ ಒಲವೇ ?"

"ಏನು ಅನ್ನುತ್ತೀರಿ–ಅವಳು ಅಪ್ಪಟ ದೇಶವಾದಿಯಲ್ಲವೇ ? ಅದರಲ್ಲೂ ಮಂತ್ರಿ"

"ಹಾಗಲ್ಲ, ಬಹು ಹಿಂದೆ, ನನ್ನನ್ನೊಂದು ಸಾರ್ವಜನಿಕ ಚರ್ಚೆಗೆ ಕರೆದುಕೊಂಡು ಹೋಗಿದ್ದರು ನಾನು ಅಧ್ಯಕ್ಷನಾಗಿದ್ದೆ. ಅವಳು ಮಾತನಾಡಿದಳು ಅವಳ ಮಾತಿನ ಸರಣಿ ಆಗ ಹಾಗಿತ್ತು. ಆರೆಂಟು ವರ್ಷಗಳ ಹಿಂದಿನ ಕತೆ"

"ಹೂಂ–ಮಾತಿನಲ್ಲಿ ಹಾಗಿರಬಹುದು ಕಾಲೇಜಿನಲ್ಲಿರುವಾಗ ಹಾಗೆಯೇ ಮಾತನಾಡುತ್ತಿದ್ದಳು ಆದರೆ ಮಾತು ಬೇರೆ, ಕೃತಿ ಬೇರೆ. ಆಗಲೂ ಅವಳ ಅಲಂಕಾರ, ಆಭರಣಗಳಿಗೆ ಏನೂ ಕಡಮೆ ಯಿರಲಿಲ್ಲ ಅಂದು ಅರಮನೆಯಿಂದ ಬೇಕಾದ ಉಡುಗೊರೆ ಬರುತ್ತಿತ್ತು ಇಂದು ಅವಳೇ ಮಂತ್ರಿ ಏನು ಕಡಮೆಯಾಗದಲ್ಲ" ಎನ್ನುತ್ತಿದ್ದಾಗಲೇ, ಹೊರಗೆ ಬಾಗಿಲು ಬಡಿದ ಸದ್ದು ಕೇಳಿಸಿತು. ಶಾಂತಾ ಕದ ತೆರೆಯುವುದಕ್ಕೆ ಕೆಳಗಿಳಿದು ಬಂದಳು ಅರುಣಾಚಲಯ್ಯನವರು ಅವಳನ್ನು ಸ್ವಾಗತಿಸುವುದಕ್ಕೆ ಎದ್ದುನಿಂತರು

ಶಾಂತಾ, ಪರಿಚಿತಳಾದ ಅವಳನ್ನು ಗುರುತಿಸಿ ಮಾತನಾಡುತ್ತಾ ಮೇಲೆ ಕರೆದು ತಂದಳು. ಅವಳನ್ನು ಕರೆದುತಂದ ಕಾರು ಹೊರಟು ಹೋಯಿತು.

"ಏನು ಶಾಂತಾ, ಎಷ್ಟು ಸಮಯವಾಯಿತು ನಿನ್ನನ್ನು ಕಾಣದೆ? ಊರಿಗೆ ಬಂದು ಎಷ್ಟು ದಿನವಾಯಿತು? ನೀನು ಬಂದುದು ಗೊತ್ತಿದ್ದರೆ ನೋಡುವುದಕ್ಕೆ ಬರುತ್ತಿದ್ದೆನಲ್ಲ! ಮಾವ ಎಲ್ಲಿದ್ದಾರೆ?"

"ಅಯ್ಯೋ, ನಾನು ಬಂದು ಮೂರು ತಿಂಗಳಾಯಿತು ಅವರನ್ನು ನೋಡಿಕೊಳ್ಳುವುದಕ್ಕೆ ಯಾರೂ ಇಲ್ಲವೆಂದು ಬಂದೆ."

"ನನಗೆ ತಿಳಿಯಲೇ ಇಲ್ಲ ನೀನು ಮನೆಯಿಂದ ಹೊರಟ ಹಾಗಿಲ್ಲ"

"ನನಗೆಲ್ಲಿಯ ತಿರುಗಾಟ? ನಿನ್ನ ಹಾಗೆ ನನಗೆ ಮಂತ್ರಿ ಪಟ್ಟವೇ?" ಎಂದು ನಗುತ್ತ ಮಾಳಿಗೆಯ ಮೇಲೆ ಕರೆದುಕೊಂಡು ಹೋದಳು ಅರುಣಾಚಲಮ್ಮ ಅವಳನ್ನು ಸ್ವಾಗತಿಸಿ, ಕುಳಿತು ಕೊಳ್ಳುವಂತೆ ಹೇಳಿ: "ನಾನು ಈ ಸಂಜೆಯಷ್ಟೆ ಬಂದೆ" ಎಂದು ಮಾತಿಗೆ ತೊಡಗಿದರು

"ನಾನೂ ವಿಚಾರಿಸುತ್ತಲಿದ್ದೆ ನೀವು ಸಂಚಾರಕ್ಕೆ ಹೋಗಿದ್ದರಂತೆ, ಮಲೆಗಳಿಗೆ ಹೋಗಿದ್ದರಂತೆ"

"ಓಹೋ! ನಿಮಗೂ ಸುದ್ದಿ ಸಿಕ್ಕಿದೆ. ನನ್ನ ಸಂಚಾರ ಅಂಥ ಗುಟ್ಟಿನದೇನೂ ಅಲ್ಲ"

ಕಾಂಚನಮಾಲೆ ನಕ್ಕಳು "ಕ್ಷಮಿಸಿ, ಸರಕಾರವೆಂದ ಮೇಲೆ ತಿಳಿಯುವುದನ್ನೆಲ್ಲ ತಿಳಿಯಬೇಕಲ್ಲ" ಎಂದಳು

"ಯಾವುದನ್ನು? ನನ್ನ ಕಾರ್ಯಕ್ರಮವನ್ನೇ, ಅಥವಾ ಅಲ್ಲಿಯ ಸ್ಥಿತಿಯನ್ನೇ?"

"ಅಲ್ಲಿನ ಸ್ಥಿತಿ ತಿಳಿಯದೆನ್ನುತ್ತೀರಾ? ಎಲ್ಲವೂ ತಿಳಿದಿದೆ. ಕೈಮೀರಿದ ಸ್ಥಿತಿ ಎಂದು ಗೊತ್ತು. ನಾನು ಹೋಗದಿದ್ದರೂ, ಸುದ್ದಿಗಳು ಬರುತ್ತದೆ. ಆದರೆ ನೋಡಿ-ನಮ್ಮದು ಪ್ರಜಾಪ್ರಭುತ್ವ."

"ಅಂದರೆ"

"ಪ್ರಧಾನಿಗಳು, ಅವರ ಸುತ್ತಲಿರುವವರು, ಕೃಪೆಮಾಡಿದರೆ ಆಗುತ್ತದೆ."

"ಸುತ್ತಲಿರುವವರು ನೀವೇ ಅಲ್ಲವೇ?"

"ನಾನು ಒಬ್ಬಳು; ದಶರಥನ ಕುದುರೆಗಳಂತೆ ಇನ್ನೂ ಎಂಟು

ಹತ್ತು ಮಂದಿ ಇದ್ದಾರಲ್ಲ ಹತ್ತು ದಿಕ್ಕಿಗೂ ಬೇರೆ ಬೇರೆಯಾಗಿ ಎಳೆಯುವವರು ಅದಾವುದೂ ಸ್ವಾರಸ್ಯವಿಲ್ಲ. ನನಗೆ ಬೇಸರ ಬಂದಿದೆ, ಮರ್ಯಾದೆಯಿಂದ ಹೊರಗೆ ಬಂದರೆ ಸಾಕೆನಿಸುತ್ತಿದೆ. ಹಾಗೆಂದೇ ಹಿರಿಯರಾದ ನಿಮ್ಮ ಸಲಹೆ ಕೇಳಲು ಬಂದಿದ್ದೇನೆ"

ಅರುಣಾಚಲಯ್ಯನವರಿಗೆ ಅವಳ ಮಾತುಗಳಲ್ಲಿ ಉಪಚಾರ ವಾಗಲಿ, ಕೃತ್ರಿಮವಾಗಲಿ ಕಾಣಿಸಲಿಲ್ಲ ಆದರೆ ಒಂದು ರಾಜಕೀಯ ಪಂಗಡದ ಪ್ರಧಾನ ವ್ಯಕ್ತಿ ಇನ್ನೊಂದು ಪಂಗಡದವರೊಡನೆ, ಇದ್ದಕ್ಕಿದ್ದಂತೆ ಸಮಾಲೋಚನೆ ನಡೆಸಲು ಬಂದ ಪ್ರಸಂಗ ಅರ್ಥವಾಗಲಿಲ್ಲ. ಕಾಂಚನಮಾಲೆ ಬಳಸು ಮಾತಿನವಳಲ್ಲ ಯಾರಿದ್ದಾರೆಯೇ ಎಂದು ಆಚೀಚೆ ನೋಡಿದಳು ಶಾಂತಾ ಚಹಾಮಾಡಿ ತರುವುದಕ್ಕೆ ಹೋಗಿದ್ದಳು

"ಯಾರಿಲ್ಲ ಮಾತನಾಡಬಹುದು ಶಾಂತಾ ಕೆಳಗೆ ಹೋಗಿದ್ದಾಳೆ"

"ಅವಳ ಭಯವಲ್ಲ. ಮಾತಿನ ನಡುವೆ ಯಾರಾದರೂ ಭೇಟಿಗೆ ಬಂದಾರೆಯೇ ? ಇಂದೇ ಊರಿಗೆ ಬಂದಿರಿ – ಆದುದರಿಂದ . ... ಯೋಚಿಸಿದೆ"

"ಹಾಗೆ ಬಂದರೆ ಶಾಂತಾ ಕಳುಹಿಸಿಯಾಳು"

ಆಕೆ ತುಸು ಸಮೀಪಕ್ಕೆ ಕುರ್ಚಿ ಎಳೆದುಕೊಂಡು ರಹಸ್ಯ ಮಾತನಾಡುವವಳಂತೆ "ಸ್ವಾಮಿ, ನಿಮಗೆ ನನ್ನ ಪರಿಚಯ ಸಾಕಷ್ಟು ಇರಲಾರದು ನಿಮ್ಮ ಸೊಸೆ ನನಗೆ ಚೆನ್ನಾಗಿ ಗೊತ್ತಿದೆ. ನಾನು ಚಿಕ್ಕವಳು, ಸಾಮಾನ್ಯ, ಮುಖಂಡಳಲ್ಲ ಮುಖಂಡತನ ತಲೆಯ ಮೇಲೆ ಬಂತೆಂದು ಹೊತ್ತಿದ್ದೇನೆ ಬೇರೆಯವರು ಹಿಂಜರಿದರೆಂದು ನಾನು ಮುಂದಾದೆ ಈಗ ಹಾಗಿಲ್ಲ–ಎಲ್ಲರೂ ಮುಂದೆ ಬರುವವರೇ. ಹಿಂದಿರುವುದೇ ಯಾರಿಗೂ ಇಷ್ಟವಿಲ್ಲ ಆದರೆ ನಾನು ನಿಮ್ಮಂತೆಯೇ– ನಾನು ಮುಖ್ಯಳಲ್ಲ, ಗೊಂಡಾರಣ್ಯದ ಹಿತ ನನಗೆ ಮುಖ್ಯ. ತಾವು ನಂಬಿದರೆ ನಂಬಬಹುದು ಬಿಟ್ಟರೆ ಬಿಡಬಹುದು ...ನಮ್ಮ ಮಂತ್ರಿ ಮಂಡಲದಲ್ಲಿ, ಪಂಗಡದಲ್ಲಿ ಜಗಳವಿಲ್ಲದ ದಿನವಿಲ್ಲ. ಆ ಸುದ್ದಿ ನಿಮಗೂ ತಿಳಿದಿರಬಹುದು. ಎಲ್ಲರೂ ಸುಲಿಗೆಯಲ್ಲಿ, ಸ್ವಾರ್ಥದಲ್ಲಿ ತಲ್ಲೀನರಾಗಿ

ದ್ದಾರೆ ಇಂಥವರನ್ನು ಕೂಡಿಸಿ ತಲೆ, ತಲೆಗೆ ಗಂಟಿಕ್ಕಿ ಪಗಡೆ ಯಾಡುವ ಚಾಪಲ್ಯ ನಮ್ಮ ವಾಮನರಾಯರಿಗೆ "

" ನೀವು ಅವರ ಮೆಚ್ಚಿನವರಂತೆ "

" ಎದುರಿನಲ್ಲಿ ಅವರ ಮೆಚ್ಚಿನವರಲ್ಲದವರು ಲೋಕದಲ್ಲೇ ಇಲ್ಲ- ಅದು ಬೇರೆ ವಿಷಯ ನನ್ನ ಅಂತರಂಗಕ್ಕೆ ತಿಳಿದ ಸಂಗತಿಯೆಂದರೆ ನಾವಿಂದು ಪರಮಾವಧಿಯ ಅಧಿಕಾರದಲ್ಲಿದ್ದರೂ, ನಮ್ಮದು ಕೊಳೆತ ಕುಂಬಳಕಾಯಿ ಪಂಗಡದಲ್ಲಿ ಒಬ್ಬರಿಗೂ ಅವರ ಮೇಲೆ ವಿಶ್ವಾಸ ಉಳಿದಿಲ್ಲ ಆದರೆ ಒಬ್ಬರೂ ಧೈರ್ಯವಾಗಿ ಮುಂದೆ ಬಂದು, ಅವಿಶ್ವಾಸದ ನಿರ್ಣಯ ತಂದು ಅವರನ್ನು ವಿರೋಧಿಸಲಾರರು ಏಕೆಂದು ನಿಮಗೆ ಗೊತ್ತೇ ಇದೆ ಅವರು ಎಲ್ಲರ ದ್ವೇಷಕ್ಕೆ ಗುರಿಯಾಗಿದ್ದರೂ, ಊರಿಗೆ ಬೇಡವಾಗಿದ್ದರೂ ಮೇಲಿನವರ ಕೃಪೆಗೆ ಪಾತ್ರರು ಆದರೆ ಇಂದು ಒಳ್ಳೆಯ ಸಂದರ್ಭವೊಂದು ಬಂದಿದೆ ಆಹಾರದ ಪ್ರಶ್ನೆ ಚರ್ಚೆಗೆ ಬರುತ್ತದೆ ಆದರ ಮೇಲಿಂದ ಖಂಡನೆಯ ನಿರ್ಣಯ ಒಂದು ಬಂದು ಮತಕ್ಕೆ ಬೀಳಬಹುದು

" ಏನು ಪ್ರಯೋಜನ ? ಇಷ್ಟರ ತನಕ ಅಂಥ ಮಂಗಳಾರತಿ ಎಷ್ಟಾಗಿಲ್ಲ "

" ಈಗ ಹಾಗಿಲ್ಲ ಸ್ವತಂತ್ರರೆಲ್ಲರೂ ಆಕಡೆ ಸೇರಿದ್ದಾರೆ ನಮ್ಮ ಪಂಗಡದ ಕೆಲವರು ಪಕ್ಷ ಬದಲಿಸುವುದಕ್ಕೆ ಸಿದ್ಧರಾಗಿದ್ದಾರೆ ನಿಮ್ಮ ಪಕ್ಷದ ಪತ್ತು ಮಂದಿ ಬೆಂಬಲ ಕೊಟ್ಟರೆ ಏನಾದರೊಂದು ಆದೀತು ನೇತುರಾಮನ ಖಂಡನೆಗೆ ಬೆಂಬಲ ಕೊಡಬೇಕು

" ನಮ್ಮ ಜನರು ಅವನಿಗೆ ಬೆಂಬಲ ಕೊಡದಿದ್ದರೂ ಅಂಥ ನಿರ್ಣಯಕ್ಕೆ ಬೆಂಬಲ ಕೊಟ್ಟಾರು ಆದರೂ ಬಹುಮತ ಸಿಗುವುದು ಕಷ್ಟ "

" ಇಲ್ಲ, ಸಿಕ್ಕೀತು, ನಮ್ಮ ಪಂಗಡದಲ್ಲೇ ಈ ಕ್ಷಾಮ ನಿವಾರಣೆಯ ವಿಷಯದಲ್ಲಿ ಮತ ಭೇದ ಬಂದಿದೆ. ಅನೇಕರಿಗೆ ಅಸಮಾಧಾನ ಆಗಿದೆ "

" ಅಸಮಾಧಾನ ಎಷ್ಟೇ ಇದ್ದರೂ ಪಕ್ಷದ ಶಿಸ್ತಿಗೆ ವಿರೋಧವಾಗಿ ದೇಶವಾದಿಗಳು ಮತ ಹಾಕುತ್ತಾರೆಯೇ?"

" ಬಹಿರಂಗವಾಗಿ ಹಾಕುವುದು ಕಷ್ಟ "

" ಮತ್ತೇನು ಫಲ ?"

" ಅದಕ್ಕೆ ಬೇರೆ ದಾರಿಗಳುಂಟು ನನಗೂ ಈ ಅವ್ಯವಸ್ಥೆಯ ಆಡಳಿತೆಯನ್ನು ಕಂಡು ಜಿಗುಪ್ಸೆ ಹುಟ್ಟಿದೆ ಮಂತ್ರಿಪದದ ಆಸೆಗಾಗಿ ಇವರೊಡನೆ ಕುಳಿತುಕೊಳ್ಳಬೇಕಷ್ಟೆ ಹೊರತು, ಮನಸ್ಸಿಗೆ ಸಮಾಧಾನ ವಿಲ್ಲವಾಗಿದೆ ವೈಯ್ಯಕ್ತಿಕವಾಗಿ ರಾಜಿಯನ್ನು ಕೊಡುವುದಕ್ಕೂ ನಾನು ಸಿದ್ಧಳೇ ಆದರೆ ಅದರಿಂದಲೂ ಪ್ರಯೋಜನವಿಲ್ಲ ಪಂಗಡ ದಲ್ಲಿ ಅರ್ಧದಷ್ಟು ಜನಗಳಾದರೂ ಬೆಂಬಲನಿದ್ದರೆ ಒತ್ತಾಯ ಹೇರ ಬಹುದು "

" ಏನು ಮಾಡಬೇಕೆಂದಿದ್ದೀರಿ ?"

" ನಿಮ್ಮ ಪಕ್ಷದವರು ಈ ಚರ್ಚೆಯ ಸಂದರ್ಭದಲ್ಲಿ ತಾವಾಗಿ ಅವಿಶ್ವಾಸದ ನಿರ್ಣಯ ತಂದರೂ ಸರಿಯೆ ಅಂಥವರಿಗೆ ಬೆಂಬಲ ಕೊಟ್ಟರೂ ಸರಿಯೆ ಆ ನಿರ್ಣಯ ಚರ್ಚೆಯಾಗಿ ಮತಕ್ಕೆ ಬೀಳು ವಾಗ ನಮ್ಮವರು ಸಾಕಷ್ಟು ಸಂಖ್ಯೆಯಲ್ಲಿ ಅಲ್ಲಿ ಇರದಂತೆ ಮಾಡುವ ಹೊಣೆ ನನ್ನದು ಇದೊಂದೇ ನಮಗುಳಿದಿರುವ ಉಪಾಯ " ಎಂದು ಕೈ ಚೀಲದಿಂದ ಒಂದು ಕಾಗದ ತೆಗೆದು ತನ್ನ ಬೆಂಬಲಿಗರ ಪಟ್ಟಿಯನ್ನು ತೋರಿಸಿದಳು

" ಇದನ್ನು ನಂಬಲೇ ? ನೀವು ನಂಬುತ್ತೀರಾ ?"

" ನಂಬುವುದಾದರೆ ನಂಬಿ ನಾನಂತೂ ನಿಮ್ಮನ್ನು ನಂಬಿ ಬಂದಿದ್ದೇನೆ ವಾಮನರಾಯನನ್ನು ಉರುಳಿಸುವ ವಿಚಾರದಲ್ಲಿ ಇವರ ಬೆಂಬಲ ಖಂಡಿತ "

" ಅದರಿಂದ ಪ್ರಯೋಜನ ?"

" ಎರಡನೇ ಚುನಾವಣೆ ಅದೊಂದೇ ಉಳಿದಿರುವ ಹಾದಿ. ಜನಗಳಿಗಂತೂ ನಮ್ಮ ಮೇಲೆ ವಿಶ್ವಾಸ ಉಳಿದಿಲ್ಲ. ಅಷ್ಟನ್ನಂತು ತಿಳಿದುಕೊಂಡಿದ್ದೇನೆ "

" ಆಗ ನಿಮ್ಮ ಧ್ಯೇಯ, ಧೋರಣೆಯಾವುದು ?"

" ಪ್ರಾಮಾಣಿಕವಾಗಿ ಸರಕಾರ ನಡೆಯಿಸುವುದಕ್ಕೆ ಯಾರು ಮುಂದು ಬರುತ್ತಾರೋ ಅವರ ಹಿಂದೆ ನಾನು. ಇವರೇ ತಿರುಗಿ

ಆರಿಸಿ ಬಂದರೆ ಅವರಿಂದ ನಾನು ದೂರ, ಮಂತ್ರಿ ಪದವಿಕೊಟ್ಟರೂ ದೂರ."

"ಪ್ರಜಾಪ್ರಭುತ್ವದಲ್ಲಿ ನಮಗೆ ಅದೊಂದೇ ಮಾರ್ಗವೆಂದು ಬಲ್ಲೆ. ಆದರೆ ಇದೇ ಜನ ಹಳದಿ ಟೋಪಿ ಎಸೆದು, ಕಂದೋ, ಗುಲಾಲಿಯೋ ಟೋಪಿ ಧರಿಸಿ ನನ್ನಂತಹವನನ್ನು ಮೂಲೆಗೆ ತಳ್ಳಿದರೆ"

"ಹಾಗೆಂದೂ ನೀವು ಕಟ್ಟಿದ ಸಂಗಡ, ಮಾಡುವ ಕೆಲಸಗಳನ್ನು ನಿಲ್ಲಿಸುತ್ತೀರಾ?"

"ಜೀವವಿರುವತನಕ ನನ್ನಿಂದಾದ ಹೋರಾಟ ಮಾಡುತ್ತೇನೆ. ಆದರೆ ಅಧಿಕಾರದ ಚಪಲ, ಸ್ವಾರ್ಥ ನಮ್ಮ ಜನಕ್ಕೆ ಬೇರೆ, ಇನ್ನೊಬ್ಬರಿಗೆ ಬೇರೆ ಎನ್ನುವುದು ನನಗಿನ್ನೂ ಅನಿಸಿಲ್ಲ ಎಲ್ಲಿ ಹೋದರೂ ನನಗೆ ಪ್ರಾಮಾಣಿಕತೆಯ ಕೊರತೆ ಕಾಣಿಸುತ್ತಿದೆ ಪ್ರಾಮಾಣಿಕನಾದವನ ಬಾಳು ಕತ್ತಿಯ ಅಲಗಿನ ಮೇಲೆ ನಡೆಯುವಂತ ಕಾಣಿಸುತ್ತದೆ. ಇಂಥ ಪರಿಸ್ಥಿತಿಯಲ್ಲಿ ನನಗೆ ನನ್ನ ವಿಶ್ವಾಸವೇ ಇಲ್ಲದಾಗಿದೆ."

ಇಷ್ಟೆಲ್ಲಮಾತುಗಳು ನಡೆಯುತ್ತಿದ್ದಾಗ ಶಾಂತಾ, ಚಹಾ ತಂದಿರಿಸಿ, ಮಾತಿನ ಧ್ವನಿಯಿಂದ ತಾನು ಅಲ್ಲಿರಬಾರದೆಂದು ಊಹಿಸಿ, ಹೊರಟುಹೋಗಿದ್ದಳು ತಂದಿರಿಸಿದ ಚಹಾ ತಣಿದುಹೋಗಿತ್ತು. ಅದನ್ನು ಬರಿದು ಮಾಡಿ ಕಾಂಚನಮಾಲೆ ಎದ್ದುನಿಂತಳು. "ನೀವು ವಿಚಾರಮಾಡಿ, ನನ್ನ ಮಾತಿನಲ್ಲಿ ಕಪಟವಿದೆಯೆಂದು ದಯವಿಟ್ಟು ತಿಳಿಯಬೇಡಿ ನಾನು ಎಂಥವಳೆಂದು ಒಂದಲ್ಲ ಒಂದುದಿನ ತೋರಿಸಿ ಕೊಟ್ಟೇನು" ಎಂದು ನುಡಿದು ಬೀಳ್ಕೊಂಡಳು

ತಿರುಮೂರ್ತಿ ತಾನು ಮಾತುಕೊಟ್ಟು ಹೋದಂತೆ, ಅದೇ ವೇಳೆಗೆ ಅಲ್ಲಿಗೆ ಬರಬೇಕಾಗಿತ್ತು, ಆದರೆ ಬರಲಿಲ್ಲ .ಅವನಿಗೂ ಅಂಥದೇ ಇನ್ನೊಂದು ಅಪೂರ್ವ ಭೇಟಿ ಪ್ರಾಪ್ತಿಸಿತ್ತು ಸೇತುರಾಯ ಮೊದಲಬಾರಿಗೆ ಎಂಬಂತೆ ಅವನೊಡನೆ ರಹಸ್ಯವಾಗಿ ಮಾತನಾಡುವುದಕ್ಕೆ ಬಂದಿದ್ದ ಅರುಣಾಚಲಯ್ಯನವರಲ್ಲಿಗೆ ಕಾಂಚನಮಾಲೆ ಬಂದಿದ್ದರೆ, ಅದೇ ವಿಷಯಕ್ಕಾಗಿ ಆತ ಅಲ್ಲಿಗೆ ಬಂದಿದ್ದ "ನಾವು ವಾಮಪಕ್ಷದವರೂ, ಸ್ವತಂತ್ರರೂ ಕೂಡಿ ವರ್ತಿಸುವ ತನಕ ದೇಶವಾದಿಗಳ ಉಚ್ಚಾಟನೆಯಾಗಲಾರದು" ಎಂದು ಬೋಧಿಸುತ್ತಿದ್ದ. ಸುಮಾರು

ಮೂವತ್ತೈದು ವಯಸ್ಸಿನ ವಿದ್ಯಾವಂತ, ಯೌವನಸ್ಥ, ಸಾಮಾನ್ಯ ಪ್ರಾಯ, ಬೇಕಾದಾಗ ಆವೇಶ ತುಂಬಸಿಕೊಳ್ಳಬಲ್ಲ, ಬೇಡವಾದಾಗ ಸೌಮ್ಯನಾಗಬಲ್ಲ ರೀತಿ ಅವನದು. ಮಾತುಗಳಿಗೆ ಕತ್ತಿಯ ಹರಿತವಿದೆ. ರಾಜತಂತ್ರಬಿಟ್ಟರೆ ಬೇರೊಂದು ಅಭಿರುಚಿಯಿಲ್ಲ ಅದರಲ್ಲಿಯೇ ಅದ್ದಿ ಬೆಳೆದುದು ಅವನ ಜೀವನ

ತಿರುಮೂರ್ತಿಯ ಸ್ವಭಾವ ಇನ್ನೊಂದು ತರ. ಆತ ಬರವಣಿಗೆ ಯಲ್ಲೂ ಆಂಡಬರಪ್ರಿಯ, ಮಾತಿನಲ್ಲೂ ಅಷ್ಟೆ ಎಷ್ಟು ಆಡ ಬೇಕು, ಎಷ್ಟು ಆಡಬಾರದು ಎನ್ನುವುದನ್ನು ತಿಳಿದವನಲ್ಲ ತುಸುವೇ ಹೊಗಳಿದರೆ ಕಿವಿ ಅಗಲವಾಗುತ್ತದೆ ಸುಲಭದಲ್ಲಿ ನಂಬಿ ಸುಲಭದಲ್ಲಿ ಮೋಸಹೋಗಬಲ್ಲ ಅದನ್ನು ತಿಳಿದೇ ಸೇತುರಾಯ, ನಾಳಿನ ಪ್ರಸಂಗ ವನ್ನು ಚರ್ಚಿಸಿ, ಅವನ ಬೆಂಬಲಗಳಿಸಿ, ಪಕ್ಷವಬೆಂಬಲ ದೊರೆಯುವ ಭರವಸೆಗಳಿಸಿಕೊಂಡು ಹೊರಟುಹೋದ ಅವನ ಪಾಲಿಗೆ ಅದೊಂದು ಮಹೋದಯ ಬಂದಂತೆ ಮರುದಿನ ಬೆಳಗ್ಗೆ ಬೇಗನೆ ಎದ್ದು ತನ್ನ ಪಕ್ಷದ ಸಂಗಡಿಗರನ್ನು ಕೂಡಿಕೊಂಡು, ಆ ಹಂಚಿಕೆಗೆ ಅರುಣಾ ಚಲಯ್ಯನವರ ಸಮ್ಮತಿ ಗಳಿಸುವುದಕ್ಕೆ ಅವರ ಮನೆಗೆ ಹೋದ. ಹೋಗಿ ತುಂಬ ಉತ್ಸಾಹದಿಂದ ಅವರೊಡನೆ “ಇದು ಸೇತುರಾಯನ ಯೋಚನೆ ನಾವು ಅವನಿಗೆ ಬೆಂಬಲ ಕೊಡಬೇಕು ದೇಶವಾದಿ ಗಳಲ್ಲಿ ಒಡಕು ಬಂದು ಅನೇಕರು ಸಹಿಮಾಡಿದ ರಾಜಿನಾಮೆ ಕಳುಹಿಸಿ ದ್ದಾರಂತೆ ಈ ಕಾಲದಲ್ಲಿಯೇ ನಾವು ಬಡಿಯಬೇಕು” ಎಂದು ಬಡ ಬಡಿಸಿದ ಅವನ ಸಂಗಡಿಗರು ಆ ಮಾತಿಗೆ ಪುಷ್ಟಿಕೊಟ್ಟರು

ಅರುಣಾಚಲಯ್ಯ ಅವರೆದುರಿಗೆ ಅಂಥ ಉತ್ಸಾಹ ತೋರಿಸಲಿಲ್ಲ; ಬದಲು ಆಹಾರದ ಪರಿಸ್ಥಿತಿ, ಆದಿವಾಸಿಗಳ ಪರಿಸ್ಥಿತಿ, ರಸ್ತೆ, ಹಾದಿಗೆ ಗಳ ಪರಿಸ್ಥಿತಿ–ಇವನ್ನು ಕಂಡು ಬಂದ ಅನುಭವಗಳನ್ನೆಲ್ಲ ಬಣ್ಣಿಸಿದರು. ಕಾಂಚನಮಾಲೆಯೊಡನೆ ಹೇಳಿ ಮುಗಿಸಬೇಕೆಂಬ ವಿಷಯವನ್ನು, ಅಲ್ಲಿ ಹೇಳದ್ದಕ್ಕೆ ಇಲ್ಲಿ ಹೇಳಿದರೋ ಏನೋ

ಅದಕ್ಕೆ ತಿರುಮೂರ್ತಿ “ನೀವು ಇದೆಲ್ಲ ಹೇಳಿದುದು ಒಳ್ಳೆಯ ದಾಯಿತು ಅವನ್ನೆಲ್ಲ ಬರೆದುಕೊಟ್ಟರೆ ನಾಳೆಯೇ ಒಂದು ವಿಶೇಷ ಸಂಚಿಕೆ ಹೊರಡಿಸುತ್ತೇನೆ. ಇಷ್ಟೇ ಬರೆದುಕೊಟ್ಟರೂ ಸರಿಯೆ.

ನಾನೂ ನಾಲ್ಕು ಮಾತುಸೇರಿಸುತ್ತೇನೆ. ಒಳ್ಳೆಯ ಸಮಯಕ್ಕೆ ಒಂದು 'ಬಾಂಬಶೆಲ್' ಎಸೆದ ಹಾಗಾಗುತ್ತದೆ" ಎಂದು ನುಡಿದ ತಾನು ಬಂದುದೇ ಏತಕ್ಕೆಎಂಬುದನ್ನು ಮರೆತ ಹಾಗಿತ್ತು ಅವನ ಮಾತಿನ ರೀತಿ.

ಅರುಣಾಚಲಯ್ಯ, ತುಂಬ ಆಶಾವಾದಿಗಳಾಗಿ ಬಂದ ಅವರೊಡನೆ "ಹೀಗೆ ಹಿಂದೆಷ್ಟೋ ಸಾರಿ ಖಂಡನೆ, ನಿರ್ಣಯಗಳು ಬಂದಿವೆ. ಬಿದ್ದುಹೋಗಿವೆ ಈಬಾರಿ ಅದು ಫಲಿಸಿದರೂ ಮರು ಚುನಾವಣೆಗೆ ಯಾರೂ ಸಿದ್ಧರಿದ್ದಾರೆ ? ದೇಶವಾದಿಗಳು ಮುಖತೋರಿಸಲಾರರು, ಜಯಿಸಲಾರರು ಎಂದೇ ತಿಳಿದು ಕೊಳ್ಳುವ" ಎಂದರು

"ಹಾಗಿದ್ದರೆ ನಮಗಿದು ಒಳ್ಳೆಯ ಸಂದರ್ಭವಲ್ಲವೇ ?"

"ಜನರು ನಮ್ಮನ್ನೇ ಆರಿಸುತ್ತಾರೆಂದು ಏನು ಖಂಡಿತ? ನಮ್ಮಲ್ಲಿ ಎಷ್ಟುಮಂದಿ ಆರಿಸಿ ಬರಬಹುದು! ನಿಲ್ಲಬಹುದು! ನಮ್ಮ ಪಂಗಡದಲ್ಲೂ ಅಂಥ ಯೋಗ್ಯತೆ ತುಂಬಿತುಳುಕುತ್ತಿದೆಯೇ ? ನಮ್ಮಿಬ್ಬರಿಗೂ ಜಯಬಾರದೆ ನೇತುರಾಯನಿಗೆ ಹೆಚ್ಚಿನ ಲಾಭವಾದರೂ ಆದೀತು ಆಗ ಮುಂದಿನ ಭವಿಷ್ಯ ?"

ಅಷ್ಟಕ್ಕೆ ತಿರುಮೂರ್ತಿಯ ಗೆಳೆಯ ಗಂಗಾಧರ, ಅವನಂತೆ ಶಾಸನ ಸಭಾಸದಸ್ಯ "ಕಳೆದ ಆವೃತ್ತಿಯಂತೆ ಈ ಬಾರಿಯೂ ರಕ್ಕು ನಡೆದೀತೇ ? ಆ ಬಾರಿಯಂತೆ ಈ ಸಲವೂ ಮತದ ಪೆಟ್ಟಿಗೆಗಳನ್ನು ಒಡೆದು ಜಯಗಳಿಸಬಹುದೇ ?" ಎಂದು ಕೇಳಿದ.

"ಅದು ಆಗ ಸಾಧ್ಯವಿದ್ದರೆ ಈಗಲೂ ಸಾಧ್ಯವೇ ಅಧಿಕಾರಿವರ್ಗದ ಗುಪ್ತಸಹಾಯ ಆಗ ವಾಮನರಾಯನಿಗೆ ಇದ್ದಂತೆ ಈಗಲೂ ಇದೆ, ಇನ್ನೂ ಹೆಚ್ಚಾಗಿಯೇ ಇದೆ ಅವನಿರುವಲ್ಲಿ ಅಸಾಧ್ಯದ ಯಾವ ಮಾತೂ ಇಲ್ಲ.''

"ಅವನು ಈಬಾರಿ ಬಿದ್ದಲ್ಲಿ ಪಂಗಡದ ವಿಶ್ವಾಸವನ್ನೇ ಕಳೆದು ಕೊಳ್ಳುತ್ತಾನೆ. ಮುಂದೆ ರಾಜಕೀಯಕ್ಕೆ ಕಾಲಿಡಲಾರ ಅವನು ಹೋದರೆ ನಮಗೆ ಒಳ್ಳೆಯ ಪರ್ವಕಾಲ ಬಂದಂತೆ" ಎಂದ ಗಂಗಾಧರ.

"ಪರ್ವಕಾಲ, ಸಂಧಿಕಾಲವೇ, ಅದರಿಂದ ಆಳುವ ಅವರ ಅಯೋಗ್ಯತೆ ಪ್ರಕಟವಾಗುತ್ತದೆ. ಅವರ ಬದಲು ನಾವು ಮೂರ್ಖರಾದರೆ ನಮ್ಮ ಯೋಗ್ಯತೆಯೂ ಪ್ರಕಟವಾಗಬಹುದು. ನಾಳೆ ನಮಗೆ

ಜಯ ಸಿಕ್ಕಿತೆಂದೇ ತಿಳಿಯುವ–ಅಂಥ ವೇಳೆಯಲ್ಲಿ ಹೊಣೆ ಹೊರುವು ದಕ್ಕೆ ಎಷ್ಟುಮಂದಿ ಇದ್ದಾರೆ? ಶಕ್ತರೆಷ್ಟು? ಯೋಗ್ಯರೆಷ್ಟು? ಇನ್ನೂ ನಮ್ಮ ಸಂಗಡ ಬೆಳೆದಿಲ್ಲ, ಬೆಳೆಯಬೇಕು ನಮ್ಮ ಮುಂದಿನ ಧೋರಣೆಯೇನು, ಎಷ್ಟು ಸಾಧ್ಯ–ಇದನ್ನು ನಾವು ಮೊದಲೇ ತಿಳಿಯ ಬೇಕು ಅವರ ಸೋಲು ಎಷ್ಟು ಮುಖ್ಯವೋ, ನಾವು ಗೆದ್ದು ಮರ್ಯಾದೆ ಉಳಿಸಿಕೊಳ್ಳಬೇಕಾದುದೂ ಅಷ್ಟೇ ಮುಖ್ಯ"

"ಚುನಾವಣೆಯ ಘೋಷಣೆಯೆನ್ನುತ್ತೀರಾ? ಅವನ್ನೆಲ್ಲ ಕಳೆದ ಸಾರಿಯೇ ಹೇಳಿದ್ದೇವಲ್ಲ!"

"ಕಳೆದ–ಸಾರಿ ಸಾರಿದ್ದು ನಿಜ, ಅವಸರದಲ್ಲಿ ಏನೇನೋ ಅಂದದ್ದು ನಿಜ ಈಗ ಹೊರೆ ಹೊರುವ ಕಾಲ ಬಂದರೆ, ಜನರ ಮುಂದೆ ಎಷ್ಟು ಮಾಡಬಹುದೋ ಅಷ್ಟೇ ಹೇಳಬೇಕು ದೇಶ ವಾದಿಗಳಂತೆ ದೊಡ್ಡದೊಡ್ಡ ಮಾತುಗಳನ್ನಾಡಿ ನಾವು ಮಾನಗೆಡ ಬಾರದು. ಅಪಹಾಸ್ಯಕ್ಕೆ ಗುರಿಯಾಗಬಾರದು ನಾನು ಪರಿಸ್ಥಿತಿ ಯನ್ನು ಯೋಚಿಸಿದ್ದೇನೆ ಆಡಳಿತೆಯು ಹೊರೆ ನಮ್ಮ ಕೊರಳಿಗೆ ಬಂದರೂ ಬರಬಹುದು ಅದರ ಕಷ್ಟವೇನು, ಯಾರು ನಿರ್ವಹಿಸು ವರು ಎಂದು ಮುಂಚಿತವಾಗಿ ಯೋಚಿಸಬೇಕು ಅವರಲ್ಲಿನ ಒಡಕಿಗೆ ಮಂತ್ರಿಪದದ ಹುಚ್ಚು, ಅಧಿಕಾರದ ಹುಚ್ಚು ಮುಖ್ಯಕಾರಣವಾಗಿ ದ್ದರೆ ನಮ್ಮಲ್ಲಿಯೂ ಅದೇ ಹೊಲಸು ತಲೆದೋರ ಬಾರದಲ್ಲ ಇದ್ದು ದನ್ನು ಒಡೆಯುವಾಗ, ನಾಳಿನದನ್ನು ಯೋಚಿಸಬೇಕು"

"ಅದು ನಾಳಿನ ಪ್ರಶ್ನೆ, ತೀರ ನಾಳಿನದು" ಎಂದ ತಿರು ಮೂರ್ತಿ

ಅರುಣಾಚಲಯ್ಯ ನಕ್ಕರು· "ಅದು ನಾಳಿನದಲ್ಲ ಇಂದಿನದು, ನಿತ್ಯದ್ದು ನಾವು ಅದನ್ನು ಯೋಚಿಸದೆ ಧುಮುಕುವುದರಿಂದಲೆ ಈ ರೀತಿ ಆಡಳಿತೆ ನಡೆಯುತ್ತಿರುವುದು ನಮ್ಮ ಜನ ಎಂಥವರು? ನಮ್ಮ ನೌಕರರು ಎಂಥವರು? ನಾವು ಎಷ್ಟರವರು? ಇವ್ರೊಂದನ್ನೂ ಯೋಚಿಸದೆ ಹೋದರೆ ಹೇಗೆ?"

"ಈಗೇನು ಮಾಡಬೇಕೆನ್ನುತ್ತೀರಿ? ಅವಿಶ್ವಾಸದ ಠರಾವು ಬರುವುದಂತೂ ನಿಜ" ಎಂದ ಗಂಗಾಧರ

"ಬಂದರೆ ಬೆಂಬಲ ಕೊಡಬೇಕು. ಆಹಾರ ಪ್ರಶ್ನೆಯ ವಿಷಯದಲ್ಲಿ ನಮ್ಮ ಖಂಡನೆ ತೋರಿಸುವುದಕ್ಕೆ ಅದೊಂದೇ ದಾರಿ ಆದರೆ ನನಗೆ ಮುಂದೆಯೂ ಕತ್ತಲೆ ಕಾಣಿಸುತ್ತಿದೆ ತಿಳಿದೂ ತಿಳಿದೂ ಕಳ್ಳರ ಕೈಗೆ ಬೀಗದಕೈ ಕೊಡಬಾರದು–ಎಂದು ತೋರುತ್ತದೆ ಆದರೆ ಮುಂದಿನ ಸಂಭಾವಿತರನ್ನು ಎಲ್ಲಿಂದ ಹುಡುಕಿ ತರಬೇಕು ? ಹೇಗೆ ಆರಿಸಬೇಕು ? ಇದು ಬಂದಿರುವ ಕಷ್ಟ" ಎಂದರು ಅದಕ್ಕಿಂತ ಹೆಚ್ಚಿಗೆ ಆ ದಿನ ಮಾತನಾಡುವಂತಿರಲಿಲ್ಲ ಅವರ ಸಭೆ ಚದರಿತು.

ರಾಜಧಾನಿಯಲ್ಲಿ ಹಲವು ಮೂಲೆಗಳಲ್ಲಿ, ಆದಿನ ಇದೇ ಬಗೆಯಲ್ಲಿ ಊರ ಪ್ರಮುಖರು, ಮುಖಂಡರೆನಿಸಿದವರು, ಅಧಿಕಾರದಲ್ಲಿದ್ದವರು, ಇರಬಯಸುವವರು ಎಲ್ಲರೂ ಈ ಒಂದು ಪ್ರಸಂಗದಲ್ಲೇ ತಲೆಕೆಡಿಸಿಕೊಂಡು ವಿಚಾರಮಾಡುತ್ತಿದ್ದಾರೆ ವಾಮನರಾಯನಿಗೆ ಮೊದಲಬಾರಿಗೆ ದಿಕ್ಕುಗಾಣದ ಸ್ಥಿತಿ ಬಂದಿದೆ ತನ್ನ ಪಂಗಡದವರು ತನ್ನಲ್ಲಿ ಅಸಮಾಧಾನ ತಾಳಿದ್ದಾರೆ ಎಂದು ಗೊತ್ತಿರಲಿಲ್ಲವೆಂದಲ್ಲ: "ಆ ನಾಮಧಾರಿಯನ್ನೇಕ ಸೇರಿಸಿಕೊಂಡಿರಿ ? ಈ ವಿನಾಮಿಯನ್ನು ಏಕೆ ಬಿಟ್ಟಿರಿ ? ಆ ಗುತ್ತಿಗೆ ಅವರಿಗೇಕೆ ಕೊಟ್ಟಿರಿ ?" ಇಂಥ ಮಾತುಗಳು ಮೊದಲಿನಿಂದಲೂ ಬಂದಿವೆ ಮಂತ್ರಿಗಳ ಮನೆ, ಪ್ರಧಾನಿಯ ಮನೆ, ಎಸೆಂಬ್ಲಿ ಭವನ–ಎಲ್ಲವೂ ನಕೀಲಿ ನಡೆಸುವ ಯಾತ್ರಿಕರ ಪಂಗಡದಿಂದ ತುಂಬಿಕೊಂಡಿದೆ ಹಳದಿ ಟೋಪಿಯ ದಲಾಲಿಗಳು, ರಾಜಕೀಯ ಕ್ಷೇತ್ರದ ಪಂಡರಾಗಿ ಆಚೆ ಈಚೆ ಜನಗಳನ್ನು ಕೊಂಡೊಯ್ಯುತ್ತಿದ್ದಾರೆ ಆಗುವ ಕೆಲಸ, ಆಗದ ಕೆಲಸದ ವಿಷಯದಲ್ಲಿ ಭರವಸೆ ಹೇಳಿ ದಲಾಲಿಗೆ ಮೋಸ ಬಾರದಂತೆ ವ್ಯವಸ್ಥೆ ನಡೆಯಿಸುತ್ತಿದ್ದಾರೆ. ಇಂಥ ಜನಗಳಿಂದ ಹತ್ತು ಮಂದಿಗೆ ತೃಪ್ತಿ ಬಂದರೆ, ನೂರು ಮಂದಿಗೆ ಅತೃಪ್ತಿ ಇದ್ದೇ ಇದೆ ಇದರ ಜತೆಯಲ್ಲಿ ದೇಶದಲ್ಲಿ ಕ್ಷಾಮ ಬೇರೆ. ಆಹಾರ ವಿತರಣೆಯಲ್ಲೂ ದಲ್ಲಾಲಿಗಳೇ ಇದಕ್ಕೆಲ್ಲ ಕಿರೀಟಪ್ರಾಯವಾಗಿ ಆತ ಹೊರಡಿಸಿದ "ಇಂಡಸ್ಟ್ರಿಯಲ್ ಕೊರ್ಪರೇಶನ್" ಎಂಬ ಸಂಸ್ಥೆ ಅತ್ಯಂತ ಹೆಚ್ಚಿನ ತಲೆಬೇನೆ ಹುಟ್ಟಿಸಿದೆ. ನಾಡಿನ ಉದ್ಯಮಗಳ ಸಹಾಯಕ್ಕೆಂದು ಹೊರಡಿಸಿದ ಆ ಸಂಸ್ಥೆಯಿಂದ ಇಪ್ಪತ್ತು ಲಕ್ಷ ರೂಪಾಯಿಗಳಷ್ಟು ಬೆಂಬಲಿಗರಿಗೆ ಸಾಲ ಕೊಟ್ಟಿದ್ದರೂ ಸುಖವಿಲ್ಲ. ಹಣ

ಪಡೆದವರೆಲ್ಲ ಮಂತ್ರಿಗಳ ನಂಟುತನದ ನಿಲುಕಿನವರೇ. ಹಣ ಗಳಿಸುವು ದರಲ್ಲಿ ವಿಫಲರಾದ ಮಹಾನುಭಾವರ ಕೋಪದ್ವೇಷಗಳು ಅವನ ಮೇಲೆ ಜ್ವಾಲೆ ಕಾರುತ್ತಿವೆ ಕೊಟ್ಟ ದೈವಗಳು ತೆಪ್ಪಗಿದ್ದರೂ, ಕೊಡದ ದೈವಗಳ ಕೋಪ ಹತ್ತುಮುಡಿ ಹೆಚ್ಚಿವೆ ಹೀಗೆ ಅನುಯಾಯಿಗಳಲ್ಲಿ ಅಸಂತೃಪ್ತಿ ಹೆಚ್ಚಿದರೆ, ಅದು ಅವನಾಗಿ ತಂದುಕೊಂಡ ನರಕ

ಕಾಂಚನನಾಲೆಗೆ ಈ ಯಾನತತ್ತ್ವ ಸಂಗತಿ ತಿಳಿದಿವೆ ಅಸಮಾಧಾನಗೊಂಡವರಲ್ಲಿ ಹೊಸ ಅರಣ್ಯಮಂತ್ರಿ ಸಾಹುಕಾರ ಶೀನಪ್ಪನವರು ಒಬ್ಬರು ಸಾಹುಕಾರ ಶೀನಪ್ಪನವರು ಆಕೆಯನ್ನು ಕಾಡುವುದಕ್ಕೆ ಬಂದಿದ್ದಾರೆ ಅವಳಿಗೆ ವಾಮನರಾಯನ ಮೇಲೆ ಪ್ರಭಾವವಿದೆಯೆಂದು ಊಹಿಸಿ ಅವಳ ಸಹಾಯ ಬಯಸುತ್ತಿದ್ದಾರೆ ಆಕೆ ಮಾತಿನಲ್ಲಿ ಬಿಟ್ಟುಕೊಡುವುದಿಲ್ಲ, ವಾಮನರಾಯನ ಪಕ್ಷ ಹಿಡಿದೇ ಮಾತನಾಡಿ ಬಂದವರ ಸ್ವಾರ್ಥವೆಷ್ಟು ಎಂದು ಅಳೆಯುವುದಕ್ಕೆ ಪ್ರಯತ್ನಿಸುತ್ತಾಳೆ. "ನೀವು ಅಷ್ಟೆಲ್ಲ ಹೇಳುತ್ತೀರಿ–ವಾಮನರಾಯರಿಗೆ ಸ್ವಂತ ಯಾವ ಉದ್ಯೋಗ ಸಂಸ್ಥೆಯಿಲ್ಲ ಅವರೂ ತಾವಾಗಿಯೇ ಏನೂ ಕೊಂಡವರಲ್ಲ ನಿಮ್ಮಂತಹವರಿಗೇ ಕೊಟ್ಟಿದ್ದಲ್ಲವೇ" ಎಂದು ವಾದಿಸುತ್ತಾಳೆ ಶೀನಪ್ಪನವರದೊಂದು ಎಣ್ಣೆಯ ಗಿರಣಿ ಭೀಮನೂರಿನಲ್ಲಿದೆ ಅವರದ್ದೆಂದರೆ ಅವರ ಅಳಿಯ ನಡೆಸುತ್ತಿದ್ದುದು. ಅದರ ಬಡಾವಣೆಗೆ ಐದು ಲಕ್ಷ ರೂಪಾಯಿ ಸಾಲ ಕೇಳಿದರೂ ವಾಮನರಾಯ ಪೂರ ಕೊಡಲಿಲ್ಲ ಎಂಬುದು ಅಸಮಾಧಾನಕ್ಕೆ ಕಾರಣ. ಅದರಿಂದ "ನೀವು ಅವರ ಪಕ್ಷ ಹಿಡಿದು ವಾದಿಸುತ್ತೀರಿ ನಾನು ಮಂತ್ರಿಯಾಗಿದ್ದೂ ನನ್ನ ಸಂಸ್ಥೆಗೆ ಕೇಳಿದಷ್ಟು ಸಾಲ ಕೊಡಲಿಲ್ಲ. ಹಾಗಿದ್ದರೆ ಅದೇ ಭೀಮನೂರಿನಲ್ಲಿ ಆ ಮಾರವಾಡಿಗಳ ಎಣ್ಣೆ ಗಿರಣಿಗೆ ಎರಡು ಲಕ್ಷ ಸಾಲ ಹೇಗೆ ಕೊಟ್ಟರು ?"

"ಅದು ಅವರದ್ದೇನು ?"

"ನಿಮಗೆ ಲೋಕ ತಿಳಿಯದು ನೀವಿನ್ನೂ ಅವರನ್ನು ದೇವತೆಯೆಂದು ತಿಳಿದಿದ್ದೀರಿ ಆತ ಬಹು ಬುದ್ಧಿವಂತ. ಅವನ ಬೇರು ಎಲ್ಲೆಲ್ಲಿ ಹರಡಿದೆಯೆಂಬುದು ನನಗೆ ಗೊತ್ತು ಅವನ ಹಣ ಆಂಧ್ರ, ಮಹಾರಾಷ್ಟ್ರಗಳಲ್ಲಿ ಎಷ್ಟು ಸಂದಿದೆ ಎಂಬುದು ನನಗೆ ಗೊತ್ತು. ಈ

ಮಾರವಾಡಿ ಕಂಪನಿಯಲ್ಲಿ ಅವನಿಗೆ ಬಲವಾದ ಕೈಯಿದೆ. ಅದಕ್ಕೇ ನನಗೆ ಕೊಡರು, ಅವರಿಗೆ ಕೊಟ್ಟರು. ನಾಳೆ ಮೇಂಗನೀಸ್ ಗನಿಗಳನ್ನು ಅವರಿಗೆ ಕೊಡುವುದನ್ನು ನೋಡುತ್ತೀರಿ ಊರಲ್ಲಿ ಹುಟ್ಟಿ ಬೆಳೆದವರ ವಿಷಯದಲ್ಲಿ ಅವನಿಗೆ ಕನಿಕರವಿಲ್ಲ ?"

ಪ್ರತಿಯೊಂದು ಮಾತಿನಲ್ಲೂ ಶೀನಪ್ಪನವರು ವಾಮನರಾಯನ ವಿರುದ್ಧ ಮಾತನಾಡಿದರೆ, ಅವಳು ಅವನನ್ನು ಸಮರ್ಥಿಸುತ್ತಾಳೆ ಆಕೆಯ ನಿಲುವೇ ಏನೆಂದು ಶೀನಪ್ಪನವರಿಗೆ ತಿಳಿಯದು. ಅವಳ ವರ್ಚಸ್ಸನ್ನು ತನ್ನ ಕೆಲಸಕ್ಕಾಗಿ ಬಳಸಬೇಕೆಂಬುದು ಅವನ ಹಂಬಲ ಹೊರಗಿಂದಲಂತೂ ಅವಳ ಪೂಜಾರಿಯಂತೆ ವರ್ತಿಸುತ್ತಾರೆ ಅವಳ ರೂಪು, ಲಾವಣ್ಯದಿಂದ ಅವನ ವ್ಯಕ್ತಿಗತ ಆಶೆಗಳು ಕೆರಳುತ್ತವೆ ಹಣದಿಂದ ಅವಳನ್ನು ಕೊಳ್ಳುವುದಕ್ಕೆ ಸಾಧ್ಯವಿದ್ದರೆ ಅದಕ್ಕೂ ಸಿದ್ಧ ಆದರೆ ಅದು ನಡೆಯದೆಂದು ಗೊತ್ತು ಅವಳು ವಾಮನರಾಯನ ವಶವರ್ತಿ ಎಂಬ ಊಹೆ ಅಸೂಯೆಗಳೆರಡೂ ಇವೆ ಅವರಿಗೆ ಹಲವಾರು ವ್ಯವಹಾರಗಳಿವೆ, ವ್ಯಾಪಾರಗಳಿವೆ, ಮಳಿಗೆಗಳಿವೆ, ಮಂಡಿಗೆಗಳಿವೆ ತಮ್ಮಂದಿರೂ, ಮಕ್ಕಳೂ, ಅಳಿಯ ಒಬ್ಬೊಬ್ಬರೂ ಒಂದೊಂದು ಸಂಸ್ಥೆ ನಡೆಸುತ್ತಿದ್ದಾರೆ ತಮ್ಮ ಮಳಿಗೆಯಿಂದ ಬೆಲೆ ಬಾಳುವ ರೇಷ್ಮೆ ಅರಿವೆಗಳನ್ನು ಹಬ್ಬ, ಹುಣ್ಣಿಮೆಗಳ ನೆಪದಿಂದ ಅವಳ ಮನೆಗೆ ಕಳುಹಿಸಿದ್ದೂ ಉಂಟು ಅವಳು ಸ್ವೀಕರಿಸಿದ್ದೂ ಉಂಟು ಈಗ ಬಹು ಹೊತ್ತು ಪಂಚಾಂಗ ಪ್ರವಚನ ನಡೆಯಿಸಿದ ಮೇಲೆ ಅವಳು ಕೊನೆಗೆ "ಆಗಲಿ, ಎಲ್ಲಾ ಸಂಗತಿ ಹೇಳಿದಿರಲ್ಲ– ಮುಖ್ಯ, ನಾನು ಏನು ಮಾಡಬೇಕು ಎಂಬುದನ್ನು ಸ್ಪಷ್ಟವಾಗಿ ಹೇಳಿ" ಎಂದಳು

"ನನಗೆ ಪಂಗಡದಿಂದ ಹೊರಗಿದ್ದರೂ ಚಿಂತೆಯಿಲ್ಲ. ಅವಿಸ್ವಾಸದ ಠರಾವಿಗೆ ಬಹಿರಂಗವಾಗಿ ಬೆಂಬಲಕೊಡುವ ಧೈರ್ಯ ನನಗುಂಟು. ಅವನು ಪರದೇಶಿ; ಗೊಂಡಾರಣ್ಯದವನಲ್ಲ–ಇಷ್ಟನ್ನು ನೀವು ಒಪ್ಪಿಕೊಂಡರೆ ನನ್ನ ಕೆಲಸವಾಯಿತು"

"ಅಷ್ಟೇ ಕಾರಣಕ್ಕೆ ನಾನು ನಿಮ್ಮ ಹಿಂದೆ ಇರಬೇಕೇ" ಎಂದು ಹೇಳಿ ನಕ್ಕಳು ಅನಂತರ "ಮುಂದಿನ ಭವಿಷ್ಯ ನಮ್ಮ ಕೈಯಲ್ಲಿಲ್ಲ.

ಅದು ಮೇಲಿನವರ ಕೈಯಲ್ಲಿದೆ. ಅವರು ಯಾರನ್ನು ಆರಿಸುತ್ತಾರೋ, ಬಿಡುತ್ತಾರೋ ತಿಳಿಯದ ಮಾತು. ನೀವು ಆಣೆ ಮಾಡಿ ರಹಸ್ಯ ಕಾದಿರಿಸುವುದಾದರೆ, ಅವರು ಹೋಗಬೇಕೆಂಬ ವಿಚಾರದಲ್ಲಿ ನನ್ನ ನಿಮ್ಮ ಅಭಿಪ್ರಾಯ ಒಂದೇ" ಎಂದಳು ಬೀಳುವವನನ್ನು ಒದೆಯುವುದರಿಂದ, ಓಡಿಸಿದ ಶ್ರೇಯಸ್ಸು ತಮಗೆ ಬಂದೀತು ಎಂಬುದು ಶೀನಪ್ಪನವರ ಮನಸ್ಸು

* * * *

ಶಾಸನ ಸಭೆಯ ಮುಂದೆ ಅದೇ ಒಂದೆರಡು ದಿನಗಳಲ್ಲಿ ಸೇತುರಾಯ ಮುಂದಳಾಗಿ ಆಹಾರ ಪ್ರಶ್ನೆಯ ವಿಚಾರದಲ್ಲಿ ಸರಕಾರದ ವರ್ತನೆಯನ್ನು ಖಂಡಿಸುವ ಠರಾವನ್ನು ಮಂಡಿಸಿಯೂ ಆಯಿತು ಅದರ ಚರ್ಚೆ ತೊಡಗಿತು ಆ ವಿಷಯದಲ್ಲಿ ಉಪನ್ಯಾಸಗಳು ಕಾಲದ ಅಳತೆಯಿಲ್ಲದೆ ಎರಡು ದಿನಗಳಿಂದಲೂ ನಡೆದು ಬಂದಿವೆ ಎನೆಂಬ್ಲಿ ಸದನದ ಒಳಗೆ, ಹೊರಗೆ ನಾಗರಿಕರೂ, ಸುದ್ದಿಗಾರರೂ ಏನಾಗುತ್ತದೆಂದು ನೋಡುವುದಕ್ಕೆ ಕಿವಿಚಾಚಿ ನಿಂತಿದ್ದಾರೆ ಎರಡು ದಿನಗಳ ಬರಿಗುಲ್ಲು ಸಿದ್ದೆಗೇಡಿನ ಚರ್ಚೆಗೆ ಅಧ್ಯಕ್ಷರು ತಡೆಹಾಕಿ ಪ್ರಧಾನಿಯನ್ನು ಪ್ರತ್ಯುತ್ತರ ಸಲ್ಲಿಸಲು ಕರೆದಿದ್ದಾರೆ ಅಂಥ ಪ್ರಸಂಗದಲ್ಲೂ ವಾಮನರಾಯ ದಿಟ್ಟತನದಿಂದ ಪ್ರತಿಪಕ್ಷದ ನವನ್ಯರನ್ನು ಹಳಿಯುತ್ತಿದ್ದಾನೆ, ಅವರ ಆರೋಪನಗಳು ಏಕ ಪಕ್ಷವಾದ ಭೂತಗನ್ನಡಿಯ ಚಿತ್ರಗಳೆಂದು ಸಾರುತ್ತಿದ್ದಾನೆ ಆಹಾರ ಸಮಸ್ಯೆಯನ್ನು ಬಗೆ ಹರಿಸಲು ತಾನು ಮಾಡಿದ ಕೆಲಸಗಳ ಅಂಕೆ, ಸಂಖ್ಯೆಗಳನ್ನು ಬಿಲ್ಲುತ್ತಿದ್ದಾನೆ ನಡುನಡುವೆ ಕಣ್ಣು ಹೊರಳಿಸಿ-ದೇಶವಾದಿಗಳು ಎಷ್ಟು ಮಂದಿ ಕುಳಿತಿದ್ದಾರೆ, ಬಹುಮತ ತನಗಿದೆ-ಎಂಬ ಧೈರ್ಯದಿಂದ ವಿರಾಮವಿಲ್ಲದೆ ಮಾತನಾಡುತ್ತಿದ್ದಾನೆ ಪಂಗಡಿಗರು ಕೈ ಚಪ್ಪಾಳೆ ಹಾಕುತ್ತಿದ್ದಾರೆ ಇದಿರಾಳಿಗಳು 'ನಾಚಿಗೆಗೇಡು' 'ನಾಚಿಗೆಗೇಡು' ಎನ್ನುತ್ತಿದ್ದಾರೆ. ಆತ ಇನ್ನಷ್ಟು ಕೆರಳಿ ಪ್ರತಿಪಕ್ಷದವರನ್ನು ಕ್ಷುಲ್ಲಕವಾಗಿ ನಿಂದಿಸಿ ಮಾತನಾಡುತ್ತಿದ್ದಾನೆ ಸಾಕಷ್ಟು ವೇಳೆಯಾಗಿದೆ. ಅವನ ಉತ್ತರಕ್ಕೂ ಕೊನೆ ಬರಬೇಕೆಂದು ಸೇತುರಾಯನ ವಾದ. ಆದರೆ ಗಂಟಲು ಬತ್ತಿದ ಮೇಲೆಯೇ ವಾಮನರಾಯನ ಪ್ರತ್ಯುತ್ತರ

ಮುಗಿದದ್ದು ಮತ ತೆಗೆಯುವ ಕ್ಷಣ ಬಂದಿತು ನಿರ್ಣಯಕ್ಕೆ ಅನುಕೂಲವಾಗಿ ಪ್ರತಿಪಕ್ಷದವರು, ಸ್ವತಂತ್ರರು ಕೈಯೆತ್ತಿದ್ದರು. ನಿರ್ಣಯದ ವಿರೋಧ ಕೈಯೆತ್ತುವ ಕಾಲಕ್ಕೆ ಅರ್ಧದಷ್ಟು ಜನ ಅಲ್ಲಿ ಇರಲಿಲ್ಲ ಪ್ರಧಾನಿಯ ಮಾತು ಮುಗಿಯುವ ಮೊದಲೇ ದೇಶವಾದಿ ಗಳಲ್ಲಿ ಅನೇಕರು ಎದ್ದು ಹೋಗಿದ್ದರು ಪಕ್ಷದ ವಿಪ್ ಇದ್ದಿರಲಿಲ್ಲ. ಇನ್ನೇನೋ ಅವರನ್ನು ಆಕರ್ಷಿಸಿತ್ತು

ಅಲ್ಲಿ ಕುಳಿತವರ ನೋಟಕ್ಕೆ ಇದಿರಾಗಿ, ಊರಿನ ಮುಖ್ಯ ಬೀದಿಯ ಮಗ್ಗುಲೊಂದರಿಂದ ಹೊಗೆ ಕಾಣಿಸುತ್ತಿತ್ತು, ಜನರ ಕೂಗು ಕೇಳಿಸುತ್ತಿತ್ತು ಮೊದಲಿಗೆ ಎದ್ದು ಏನೆಂದು ನೋಡಲು ಹೊರಗೆ ಬಂದವಳು ಕಾಂಚನಮಾಲೆ ಮಂತ್ರಿ ಶೀನಪ್ಪ ಆರೋಗ್ಯ ವಿರಲಿಲ್ಲವೆಂದು ಮನೆಯಲ್ಲೇ ಉಳಿದುಕೊಂಡಿದ್ದ. ಅಲ್ಲೇ ತುಸು ದೂರದಲ್ಲಿ ನಡೆಯುತ್ತಿದ್ದ ಔದ್ಯೋಗಿಕ ಪ್ರದರ್ಶನದ ಚಪ್ಪರಕ್ಕೆ ಬೆಂಕಿ ಹೊತ್ತಿದುದನ್ನು ಕಂಡು ಎಲ್ಲರೂ ಅಲ್ಲಿಗೆ ಧಾವಿಸಿದ್ದರು

ಎಸೆಂಬ್ಲಿ ಸದನದ ಒಳಗೋ ! ವಿರೋಧಿಗಳ ವಿಜಯದ ಕರ ತಾಡನ ಶ್ರಮವಾದಿಗಳು, ಜನವಾದಿಗಳು, ಕೂಡಿ 'ರಾಜಿನಾಮೆ ಕೊಡಿ' ಎಂದು ಕೂಗುತ್ತಿದ್ದಾರೆ ಅದಕ್ಕೆ ವೈಪರೀತ ಶ್ರೋತೃವರ್ಗ ಬೆಂಬಲ ಕೊಟ್ಟಿದೆ ಒಂದು ಕ್ಷಣಕ್ಕೆ ವಾಮನರಾಯನ ಮುಖ ಪೆಚ್ಚು ಕಟ್ಟಿತು ಸಭೆ ಮುಗಿಯಿತು ಆತ ತಲೆ ತಗ್ಗಿಸಿಕೊಂಡು ಹೊರಕ್ಕೆ ಬಂದ ಸುತ್ತಲಿನ ಜನ ಅವನನ್ನು ಮರೆತು ಉರಿಯುತ್ತಿರುವ ಚಪ್ಪರದ ಕಡೆಗೆ ಓಡುತ್ತಿದ್ದರು ಅದೇ ಮೂರು ದಿನಗಳ ಮುಂಚೆ, ಅವನೇ ಉದ್ಘಾಟಿಸಿದ ಪ್ರದರ್ಶನ ಈ ಮುಖ್ಯ ವೇಳೆಯಲ್ಲಿ ಉರಿದು ಅವನಿಗೇ ಮೃತ್ಯುವಾಗಿ ಬಂದಿತು

ಎಸೆಂಬ್ಲಿಯಲ್ಲಿ ನಡೆದ ಕೋಲಾಹಲವನ್ನು ಮೀರಿಸುವ ವಿಪತ್ತು ಹೊರಗೆ ಕಾದಿತ್ತು. ಜನ ತುಂಬಿದ್ದರೂ ಬೆಂಕಿ ನಂದಿಸುವ ಗಲಭೆ, ಸಾಮಾನನ್ನು ಉಳಿಸುವ ಗಲಭೆ ಹೇಗೆ ಹೊತ್ತಿತು ? ಎಷ್ಟು ನಷ್ಟ ವಾಯಿತು ? ಎನ್ನುವ ಮಾತು ಕತೆಗಳ ಗಲಭೆ. ಕಾಂಚನಮಾಲೆ ಅಲ್ಲಿಗೆ ಧಾವಿಸಿ ಜನರೊಡನೆ ನಿಂತು ಬೆಂಕಿ ತಡೆಯುವ ಕೆಲಸ ಮಾಡು ತ್ತಿದ್ದಳು. ಪೋಲೀಸರನ್ನು, ಅಗ್ನಿ ಶಾಮಕ ದಳದವರನ್ನು ನಿರ್ದೇಶಿ

ಸುತ್ತಿದ್ದಳು ಈ ಅವಕಾಶದಲ್ಲಿ ಸುಲಿಗೆ, ಕಳ್ಳತನಗಳು ಆಗದಂತೆ ಎಚ್ಚರ ಹೇಳುತ್ತಿದ್ದಳು. ಬೆಂಕಿ ಹತೋಟಿಗೆ ಬಂದು ಅವಳು ಮನೆಯನ್ನು ಸೇರುವಾಗ ಕತ್ತಲು ಸರಿದು ಎಷ್ಟೋ ಸಮಯವಾಗಿತ್ತು ದಣಿದು ಮನೆಗೆ ಬಂದರೆ, ಫೋನ್ ಗಂಟೆ ಬಾರಿಸ ತೊಡಗಿತು. ಕಿವಿಗೊಟ್ಟು ಕೇಳಿದರೆ ವಾಮನರಾಯನ ಆರ್ಭಟೆ ಕೇಳಿಸುತ್ತಿತ್ತು "ನೀವೆಲ್ಲ ವಂಚಕರು, ಟ್ರೈಟರ್ಸ್ ಅವರ ಜತೆಗೆ ನೀವೂ ಸೇರುವಿರೆಂದು ನಾನು ತಿಳಿದಿರಲಿಲ್ಲ" ಎನ್ನುತ್ತಿದ್ದ

"ರಾಂಗ್ ನಂಬರ್ ಪ್ಲೀಸ್" ಎಂದು ಕಾಂಚನಮಾಲೆ ಫೋನನ್ನು ಕೆಳಗೆ ಕುಕ್ಕಿದಳು

ಆ ರಾತ್ರಿಯೆಲ್ಲ ವಾಮನರಾಯ ಉದ್ವೇಗದಿಂದ ತಪಿಸುತ್ತಿದ್ದ ತನಗೆ ಬೆಂಬಲ ಕೊಡಲು ತಪ್ಪಿದ ಪಂಗಡಿಗರ ಮೇಲೆ, ಶಿಸ್ತು ಭಂಗದ ಆರೋಪ ಹೊರಿಸಿ ಕಾಗದ ಬರೆದ ಬೆಂಕಿಯ ಪ್ರಕರಣ ಅವನಿಗೂ ತಿಳಿದು ಬಂದಿತಾದರೂ ತನ್ನ ಪಕ್ಷದ ಅಪಮಾನ, ಸೋಲುಗಳ ಮುಂದೆ ಅದು ಕ್ಷುಲ್ಲಕವೆನಿಸಿತು ಇನ್ನೂ ವಿಶ್ವಾಸ ಉಳಿದ ನಾಲ್ಕು ಮಿತ್ರರನ್ನು ಕರೆಯಿಸಿಕೊಂಡು ಸಮಾಲೋಚನೆ ನಡೆಯಿಸಿ, ಇಂಥ ಪ್ರಸಂಗದಲ್ಲಿ ವರಿಷ್ಠರಿಂದ ಹೊಸ ಆದೇಶ, ಅಧಿಕಾರಗಳನ್ನು ಪಡೆದು ಬರುವುದಕ್ಕಾಗಿ ಡಿಲ್ಲಿಗೆ ಹೊರಟ ಅವನ ಬೆನ್ನಿಗೇ ಅವನ ಮಂತ್ರಿಮಂಡಳದ ಇನ್ನೊಬ್ಬರು ಪಕ್ಷದ ಬಹು ಜನರು ಸಹಿ ಮಾಡಿದ ಒಂದು ಬಿನ್ನವತ್ತಳೆಯನ್ನು ಹಿಡಿದುಕೊಂಡು ಡಿಲ್ಲಿಗೆ ಹೊರಟರು "ಈಗ ಸರಕಾರ ವಿಸರ್ಜನೆಗೊಳ್ಳಬೇಕಾದುದು ಅನಿವಾರ್ಯವಾಗಿದೆ ಮುಂದಿನ ಚುನಾವಣೆಯಲ್ಲಿ ದೇಶವಾದಿಗಳು ಗೆಲ್ಲಬೇಕಾದರೆ ವಾಮನರಾಯನ ಅಧ್ಯಕ್ಷತನ ರದ್ದಾಗಬೇಕು" ಎಂಬುದು ಅವರ ವಾದ

*   *   *   *

ಮೊದಲ ಬಾರಿಗೇ, ಜನರಿಂದಲೇ ಚುನಾಯಿತವಾಯಿತು ಎನ್ನುವ ದೇಶವಾದಿ ಸರಕಾರ ಹೀಗೆ ಉರುಳಿತಾದರೂ, ಅದೇ ಮಂತ್ರಿ ಸಂಪುಟ ಮುಂದಿನ ಚುನಾವಣೆಯ ತನಕ ಸಾರ್ವಜನಿಕ ಹಿತರಕ್ಷಣೆ ನೋಡಿಕೊಂಡು ಬರಬೇಕೆಂಬ ಮೇಲಿನವರ ಆದೇಶವನ್ನು ವಾಮನರಾಯ ಹೊತ್ತು ತಂದ. ಮೇಲೆಯೂ ಅವನ ವರ್ಚಸ್ಸು ವಿಶೇಷ

ವಾಗಿದ್ದದರಿಂದ ಮರಳುವಾಗಲೂ, ಅವನ ರೀವಿ, ಹೆಮ್ಮೆಗಳಿಗೆ ಕಡಿಮೆ ಯಿರಲಿಲ್ಲ. ತಾನೇ ದೇಶವಾದಿ ಸಂಗಡ ಎಂಬುದು ಅವನಿಗೆ ಖಚಿತ ವಾದ ಮೇಲೆ-ಮಂತ್ರಿಗಳನ್ನು ಕರೆಯಿಸಿ, ಅವರೊಡನೆ ಕಾದಾಡಲು ಧೈರ್ಯವಿಲ್ಲದೆ, ಮುಂದಿನ ಮಂತ್ರಿಮಂಡಳದಲ್ಲಿ ಇರಬೇಕೆನ್ನುವವರು ತನ್ನ ನಾಯಕತ್ವಕ್ಕೆ ಬೆಂಬಲ ಕೊಡಬೇಕೆಂದು ಬೇಡಿದ ಆ ಸಭೆಗೆ ಹೋಗದವಳೆಂದರೆ ಕಾಂಚನಮಾಲೆ

ಇಂಥ ಸ್ಥಿತಿಯಲ್ಲಿ, ಜನಕ್ಕೆ ಬೇಡದ ಮಂತ್ರಿಯಾಗಿ ತಾನು ಉಳಿದರೆ ಇದ್ದ ಮರ್ಯಾದೆಯೂ ಹೋದೀತೆಂದು ಆಕೆ ರಾಜಿನಾಮೆ ಸಲ್ಲಿಸಿದಳು ಇದು ಸ್ಪಷ್ಟವಾದ ವಿರೋಧವೆಂದೇ ವಾಮನರಾಯ ತಿಳಿದ ಅವಳ ಈ ವಿಚಿತ್ರ ವರ್ತನೆಗೆ ಅರ್ಥ ಹೊಳೆಯಲಿಲ್ಲ ಅವಳ, ತನ್ನ ಸಂಬಂಧಗಳನ್ನೆಲ್ಲ ನೆನೆದಾಗ "ಇವಳಂಥವಳು ? ರಾಜಿನಾಮೆ ಕೊಡುವುದಕ್ಕೆ ಆರೋಗ್ಯದ ನೆಪ ಹೇಳುತ್ತಾಳೆ ಇವಳ ಸ್ವಭಾವ ಇನ್ನೂ ನನಗೆ ತಿಳಿಯದಾಯಿತೇ ? ಇಷ್ಟು ಜನಗಳಲ್ಲಿ ಸ್ವಾರ್ಥವಿಲ್ಲದೆ ದುಡಿದವಳು ಅವಳು ನಂಬಿಕೆ ಇರಿಸಿಕೊಂಡವಳು" ಎನ್ನುವುದರಿಂದ ತಾನಾಗಿಯೇ ಹೋಗಿ ಅವಳನ್ನು ಕಂಡ, ಬೇಡಿದ, ಒಲಿಸಲು ಪ್ರಯತ್ನಿಸಿದ ಆದರೆ ಅವಳು ಹೃದಯ ದೌರ್ಬಲ್ಯದ ನೆಪ ಹೇಳಿ ದೂರ ಉಳಿದಳು.

ಉಳಿದ ಮಂತ್ರಿಗಳು, ವಾಮನರಾಯನ ಮೇಲೆ ಪ್ರೀತಿ ಇರಲಿ, ಇಲ್ಲದೆ ಇರಲಿ, ಉಳಿದಷ್ಟು ದಿನ ಮಂತ್ರಿತ್ವಕ್ಕೆ ಅಂಜಿ ಕುಳಿತರು. ಅಂಥವರಲ್ಲಿ ಸಾಹುಕಾರ ಶೀನಪ್ಪನವರೂ ಒಬ್ಬರು ವಾಮನರಾಯ ನಿಗೆ ಮೇಲಿನವರ ಬೆಂಬಲವಿದ್ದುದನ್ನರಿತು ಮುಂದಿನ ಮಂತ್ರಿ ಸಂಪುಟ ದಲ್ಲಿ ತಮ್ಮ ಸ್ಥಾನ ಗಟ್ಟಿಮಾಡಿಕೊಳ್ಳುವ ಹವಣಿಕೆ ಅವರದು ಮಂತ್ರಿ ಸಂಪುಟದ ಪ್ರತಿಯೊಬ್ಬರೂ ಎರಡೆರಡು ನಾಲಿಗೆ, ಎರಡೆರಡು ನಡಿಗೆ ತಳೆದರು ಅವರಲ್ಲಿ ಕಲವರಿಗೆ ಮಾತ್ರ-ಮುಂದೆ ದೇಶವಾದಿ ಪಕ್ಷ ವಹಿಸಿ ಚುನಾವಣೆಯಲ್ಲಿ ನಿಂತು ಗೆಲ್ಲುವುದು ಕಷ್ಟವೆನಿಸ ತೊಡಗಿತು. ಜನರಾಡುತ್ತಿದ್ದ ಮಾತುಗಳು, ಪತ್ರಿಕೆಯಲ್ಲಿ ಬರುತ್ತಿದ್ದ ಟೀಕೆಗಳು ಯಾವ ಹೆಚ್ಚಿನ ಭರವಸೆಯನ್ನೂ ಕೊಡುವಂತಿಲ್ಲ.

ರಾಜಕೀಯ ಭವಿಷ್ಯ ಹೀಗೆ ಬರಡಾಗಿ ಕಾಣಿಸುತ್ತಿದ್ದರೂ,

ಗೊಂಡಾರಣ್ಯದ ಹವಾಮಾನ ಶುಭದ ಚಿಹ್ನೆ ತೋರಿಸುತ್ತಿತ್ತು. ಬೇಸಿಗೆಯ ಕೊನೆಯಲ್ಲಿ ಮುಗಿಲುಗಳು ಕವಿಯ ತೊಡಗಿ ಮಳೆಬಿದ್ದು ಬೆಟ್ಟಗಳಲ್ಲಿ, ಬಯಲುಗಳಲ್ಲಿ ಹಸುರು ಮೂಡಿಸಿತು. ನದಿ, ತೊರೆಗಳು ತುಂಬಿ ಬಂದವು ಮಳೆಯ ಕೃಪೆ ಹೀಗೆಯೇ ಸಾಗಿದರೆ, ಇನ್ನು ಮೂರು ತಿಂಗಳೊಳಗೆ ನಾಡಿಗೆ ಬಂದ ಕ್ಷಾಮ ಮಾಯವಾದೀತಲ್ಲ ಎಂಬ ಆಶೆ ಜನಗಳಲ್ಲಿ ಕಾಣಿಸಿತು ನಿಜಕ್ಕೂ ಚೆನ್ನಾದ ಮಳೆಗಾಲವೇ ತೊಡಗಿತು ಮಳೆಗಾಲದ ಪ್ರಯಾಣದ ತೊಡಕು, ತೊಂದರೆಗಳನ್ನು ಮರೆತು ನೇತುರಾಯರ ಚುನಾವಣೆಯ ಪೂರ್ವ ಪ್ರಚಾರಕ್ಕೆ ಸಿದ್ಧತೆ ನಡೆಸಿದ ಹೊಸ ಚುನಾವಣೆ ಆರು ತಿಂಗಳಲ್ಲೇ ಬರಲಿ, ವರ್ಷದಲ್ಲೇ ಬರಲಿ ಅಲ್ಲಿಯ ವನಕ ತನ್ನ ಪ್ರಚಾರವನ್ನು ಅವ್ಯಾಹತವಾಗಿ ನಡೆಯಿಸಬೇಕೆಂದು ನಿರ್ಣಯಿಸಿದ. ವೈರಿಯ ಕೊರತೆಗಳನ್ನು ತನ್ನ ಆಯುಧಗಳನ್ನಾಗಿ ಮಾಡಿಕೊಂಡು ಪ್ರಚಾರ ನಡೆಯಿಸುವ ಕೆಲಸ ಅವನಿಗೆ ತೀರ ಸುಲಭ ಹಳದಿ ವಡೆಯವರೋ,-ಅಂಥ ಆಯುಧಗಳ ಉಗ್ರಾಣವನ್ನೇ ಅವರಿಗಾಗಿ ತೆರೆದಿರಿಸಿದ್ದರು.

ಅರುಣಾಚಲಯ್ಯನವರ ತಲೆಬೇನೆ ಈಗ ನಿಜಕ್ಕೂ ತೊಡಗಿದೆ-ತಾವು ಕದನಕ್ಕೆ ಧುಮುಕಬೇಕು, ಅದರಲ್ಲಿ ಗೆಲ್ಲಬೇಕು, ಗೆದ್ದ ಮೇಲೆ ಉಳಿಯಬೇಕು ಹಾಗಿರಲು ಸಮರ್ಥರು, ನಂಬಿಕೆಗೆ ಪಾತ್ರರು ಆದ ಸ್ಪರ್ಧಿಗಳು ಸಿಗುತ್ತಾರೆಯೇ ಎಂಬ ಅನ್ವೇಷಣೆಯಲ್ಲಿಯೇ ದಿನ ಕಳೆಯ ಬೇಕಾಯಿತು ಈಗಾಗಲೇ ಕೆಲವೊಂದು ದೇಶವಾದಿಗಳು ಹಳದಿ ಡೇರೆಯಲ್ಲೊಂದು ಕಾಲು, ಕಂದು ಡೇರೆಯಲ್ಲಿ ಇನ್ನೊಂದು ಇರಿಸುವುದಕ್ಕೆ ತೊಡಗಿಯಾಯಿತು. ಬುದ್ಧಿವಂತರು ಒಬ್ಬರು ಹೇಳಿದಂತೆ-'ಒಡಕು ದೋಣಿಯಲ್ಲಿ ಜನ ಪ್ರಯಾಣ ಮಾಡಲಿಚ್ಛಿಸುವುದಿಲ್ಲ ಹೊಸ ದೋಣಿ ಹುಡುಕುತ್ತಾರೆ' ಅಂಥವರು ಇತರರನ್ನು ಹಿಡಿದುಕೊಂಡು, ಪ್ರಶಂಸೆ ಮಾಡಿಸಿಕೊಂಡು ಅರುಣಾಚಲಯ್ಯನವರ ಮನೆಯ ಬಾಗಲಿಗೆ ಬಂದು ಹೋಗತೊಡಗಿ, ಜನವಾದಿ ಸಂಗಡದ ಆಧಾರ ಸ್ತಂಭರಾಗಲು ಯತ್ನಿಸುತ್ತಿದ್ದಾರೆ ಅಂಥವರ ನೀತಿ, ನೆಲೆಗಳನ್ನು ಅರಿತು ಹೇಗೆ ಮಾತನಾಡಬೇಕು? ಎಂಬ ಕಷ್ಟ ಅರುಣಾಚಲಯ್ಯನವರದು. ಒಂದೆಡೆ ತಮ್ಮ ಗುಂಪಿನಲ್ಲಿ ಜನ ದೌರ್ಬಲ್ಯ

ವಿದೆ, ಶಕ್ತಿ ದೌರ್ಬಲ್ಯವಿದೆ, ದ್ರವ್ಯ ದೌರ್ಬಲ್ಯವೂ ಇದೆ ದೇಶವಾದಿಗಳ ಅಪಕೀರ್ತಿಗಳಿಂದಾಗಿ ತನಗೆ ಜಯ ದೊರಕಿದರೂ ನಾಕಷ್ಟು ಸಮರ್ಥ ಜನರಿಲ್ಲದೆ, ಯೋಗ್ಯರಿಲ್ಲದೆ, ಸರಕಾರವನ್ನು ನಡೆಯಿಸಲಾರೆವು ಎಂಬ ನಿರಾಶೆ ಅವರದು ಅಂಥ ಸಂಶಯಗಳಿಂದ ನಿರ್ಬಾಧಿತನು ಸೇತುರಾಯ 'ಗೆಲ್ಲುವ ಶಕ್ತಿಯಿದ್ದರೆ ಆಳುವ ಶಕ್ತಿಯಿದೆ' ಎಂಬುದು ಅವನ ವಿಶ್ವಾಸ ಅವನ ದಾರಿಯೇ ಬೇರೆ, ಪ್ರಜೆಗಳಿಂದ ಅಧಿಕಾರ ಪಡೆಯಬೇಕಾದ್ದು ನಿಮಿತ್ತಮಾತ್ರಕ್ಕೆ ಇನ್ನು ನೂರು ವರ್ಷಗಳು ಹೋದರೂ ಪ್ರಜೆ ಆಳುವುದು ಹೇಗೆಂದು ಹೇಳಲಾರ ಆಳುವ ದಾರಿ, ರೀತಿ, ವಿವರ ಸೇತುರಾಯನಿಗೆ ಗುರುಪರಂಪರೆಯಿಂದ ನಿರ್ಣಯವಾಗಿ ಬಂದೇ ಇದೆ ಇದಕ್ಕೆ ನಿಶ್ಚಿತವಾದ ಸೂತ್ರ ಹಂಚಿಕೆಗಳಿವೆ 'ನಾವು ಯಾವುದನ್ನು ಸಾರ್ವಜನಿಕ ಹಿತವೆಂದು ತಿಳಿಯುತ್ತೇವೆಯೋ ಅದನ್ನು ಅಧಿಕಾರ ಬಲದಿಂದ ಚಲಾಯಿಸುವುದಷ್ಟೇ ನಮ್ಮ ಕೆಲಸ ಅದಕ್ಕೆ ತಡೆಬರುವ ವಿಘ್ನಗಳನ್ನು ಎಂಥ ದಾರಿಯಿಂದಲೂ ನಿವಾರಿಸಿಕೊಳ್ಳಬೇಕು ಮುಖ್ಯವಾಗಿ ಅಧಿಕಾರ ಸಂಪಾದನೆಗೆ ತಕ್ಕ ಪ್ರಚಾರ, ಎಚ್ಚರ ಬೇಕು ಹಿಂದಣ ಬಾರಿ ಬಿದ್ದ ಕುಣಿಗಳಿಗೆ ತಿರುಗಿ ಬೀಳಬಾರದು' ಎಂಬುದು ಅವನ ವಿಚಾರ ಸರಣಿ ಹಿಂದಣ ಚುನಾವಣೆಯಲ್ಲಿ ತನ್ನ ಸೋಲಿಗೆ ಕಾರಣವೇನೆಂಬುದನ್ನು ಅರಿತು, ಅವೇ ವಿಘ್ನಗಳು ತಿರುಗಿ ಬಾರದಂತೆ ಆತ ತಂತ್ರ ಹೂಡುತ್ತಿದ್ದಾನೆ ವಾಮನರಾಯನ ವಾಮ ಮಾರ್ಗಕ್ಕೆ ಅವನ ವಾಮ ಮಾರ್ಗಗಳೂ ಸಿದ್ಧವಾಗುತ್ತಿವೆ

ಇಷ್ಟೆಲ್ಲ ಗೊಂದಲದಲ್ಲಿ ವಿಶೇಷ ಚಿಂತೆಯಿಲ್ಲದ ಧೈರ್ಯಶಾಲಿಯೆಂದರೆ ವಾಮನರಾಯನೆ ಎನ್ನಬೇಕು ಸೋಲುಂಟಾದ ನಾಲ್ಕು ದಿನಗಳ ಕಾಲ ಅವನು ತತ್ತರಿಸಿದ್ದರೂ ಈಗ ಹಾಗಿಲ್ಲ ತಿರುಗಿ ಶಕುನಿಯಾಗಿ ದ್ಯೂತಕ್ಕೆ ಸಿದ್ಧ ಹಿಂದಿನದೇ ಧೈರ್ಯ, ಹಿಂದಿನದೇ ಕೆಚ್ಚು. ವರ್ಚಸ್ಸುಳ್ಳ ಒಬ್ಬೊಬ್ಬರನ್ನೂ ಹಿಡಿದು ತನ್ನ ಕೆಲಸಕ್ಕೆ ಬೇಕಾದ ಗಾಳ ಹಾಕುತ್ತಿದ್ದಾನೆ ಇದಿರಾಳುಗಳು ಪ್ರಚಾರಕ್ಕೆಂದು ಗ್ರಾಮ ಸಂಚಾರ ತೊಡಗಿದರೆ ಇವನೂ ಸಂಚಾರಮುಖಿಯಾದ, ನೌಕರರನ್ನು ಕೂಡಿಕೊಂಡು ಹಳ್ಳಿಗಳನ್ನು ಸುತ್ತಾಡಿದ ಇಷ್ಟರ ತನಕದ ಔದಾಸೀನ್ಯವನ್ನು ಬಿಟ್ಟು ನಾಲಿಗೆಗೆ ಜೇನು, ಬೆಣ್ಣೆ ಸವರಿಕೊಂಡೇ

ಜನರೊಡನೆ ಮಾತನಾಡತೊಡಗಿದ. ಈ ದೇಶವಾದಿ ಪ್ರಧಾನಿಯೆಂದರೆ ನೆಚ್ಚಿನ 'ಅಣ್ಣ, ತಮ್ಮ'ನೆಂದು ಕಾಣಿಸಬೇಕು. "ಅಯ್ಯೋ, ವಾಮನ ರಾಯ ಎಂಥ ಸರಳ ನಮ್ಮ ನಿಮ್ಮ ಹಾಗಿದ್ದಾನೆ. ಇವರೆಲ್ಲ ಅವನನ್ನು ಹಿಟ್ಲರನನ್ನಾಗಿ ಮಾಡಿ ತೋರಿಸಿದರು ಅವನು ತುಂಬ ಒಳ್ಳೆಯವ. ಬಹುಶಃ ಹಿಂದೆ ನೇರಿದ ಜನ ಕೆಟ್ಟವರಿರಬೇಕು" ಎನ್ನುವಂತೆ ಜನ ಗಳಿಂದ ಮಾತು ಹೊರಡಿಸಿದ ಆದರೂ ತಾನು ಬೆಳೆಯಿಸುತ್ತಿರುವ ಜನ ಸಂಪರ್ಕವೊಂದೇ ತನ್ನ ಶಕ್ತಿಗೆ ನೆರವಾಗದೆಂದು ಗೊತ್ತು ಅದ ಕ್ಕಿಂತ ಹೆಚ್ಚಿನ ವಿಶ್ವಾಸವನ್ನು ಕೆಲವು ನಿಷ್ಠಾವಂತ ಅಧಿಕಾರಿಗಳಲ್ಲಿ ಇರಿಸಿಕೊಂಡಿದ್ದ. ಹಿಂದಿನ ಎರಡು ವರ್ಷಗಳಲ್ಲಿ ಅವರ ನಿಷ್ಠೆಗೆ ತಕ್ಕ ರಕ್ಷಣೆ, ಬಹುಮಾನ ಸಲ್ಲಿಸಿದ್ದ ಈಗ ಅಂಥವರನ್ನು ಕರೆಯಿಸಿಕೊಂಡು ಬೆನ್ನು ಚಪ್ಪರಿಸಿ, ಬಹುಮಾನ ಕೊಡಲು ಮರೆತವರನ್ನು ನೆನೆದು, ಬಡತಿಕೊಟ್ಟು, ಚುನಾವಣೆ ಕಾಲದ ಕದನಕ್ಕೆ ಬೇಕಾದ ಆಯಕಟ್ಟಿನ ಸ್ಥಳಗಳಲ್ಲಿ ಸ್ಥಾಪಿಸಿದ್ದ

ಜತೆಗೆ ಸಂಗಡ ಬೆಳೆಯಿಸುವ ಹೊಸ ಪೈಪೋಟಿ ಬೇರೆ. ಅದ ಕ್ಕಾಗಿಯೇ ನಿಧಿಕೂಡಿಸುವ ಕೆಲಸ, ಸದಸ್ಯತನ ಹೆಚ್ಚಿಸುವ ಕೆಲಸ; ತನ್ನ ಮಾತಿಗೆ ತಲೆದೂಗುವವರನ್ನು ಆರಿಸುವಂಥ ಕೆಲಸ ನಾಳಿನ ಆಟಕ್ಕೆ ನೆರವಾಗುವ ಯೋಗ್ಯತೆ ಯಾರಲ್ಲಿದೆ, ಯಾರಲಿಲ್ಲ—ಎಂದು ತೂಗುವ ಕೆಲಸ ಮಾಡುತ್ತಲೇ ಇದ್ದಾನೆ

ಸಾರ್ವಜನಿಕರ ಮುಂದೆ ಅವನಿಗೆ ಭೀತಿಯೆಂಬುದಿಲ್ಲ ಹಿಂದೆ ತಾನು ಮಾಡುವೆನೆಂದ ಕಾರ್ಯಗಳಲ್ಲಿ ಕಾಲಂಶ ನಡೆಯದೆ ಹೋಗಿ ದ್ದರೂ, ರಾಜ್ಯದ ಖಜಾನೆ ಬರಿದಾಗಿದ್ದರೂ, ಯಾವ ಹೊಸ ಕೊಪ್ಪರಿಗೆ ಯನ್ನು ಹರಡಿಯಾದರೂ ಆಶಾಡಾಯಕ ಭವ್ಯ ನಿರ್ಮಾಣಗಳನ್ನು ಮಾಡುತ್ತೇನೆಂದು ಪ್ರಚಾರ ಮಾಡುತ್ತಿದ್ದಾನೆ ದೇಶದಲ್ಲಿ ಪ್ರಗತಿ, ಅಭಿವೃದ್ಧಿಗಳನ್ನು ಸಾಧಿಸಲು ದೇಶವಾದಿ ಸಂಗಡವೊಂದೇ ತಕ್ಕುದೆಂದೂ ಅದರಂಥ ಪುರೋಗಾಮಿ ಶಕ್ತಿಯಿಲ್ಲವೆಂದೂ, ಇಲ್ಲಿಯತನಕ ಕೆಲಸ ಮೆಲುನಡೆಯಿಂದ ನಡೆದಿದ್ದರೆ ಅದಕ್ಕೆ ಕಾರಣ ಜನವಾದಿ, ಶ್ರಮವಾದಿ ಸಂಗಡಗಳಂತಹ ಪ್ರತಿಗಾಮಿ ಶಕ್ತಿಗಳು ಎಂದೂ ಸಾರುತ್ತಿದ್ದಾನೆ. ಇಂಥ ಪ್ರಚಾರ ನಡೆಸಲು ಒಂದು ದಳವನ್ನೇ ಹೊರಡಿಸಿದ್ದಾನೆ.

ಇಂಥ ಹೊಂಗನಸನ್ನು ಹೊತ್ತು ಆತ ರಾಜಕಾರ್ಯದ ನೆಪ ದಿಂದ, ಪಕ್ಷದ ಪ್ರಚಾರಕ್ಕೆ ಭೀಮನೂರಿಗೆ ಬಂದಿದ್ದ ಅಲ್ಲೊಂದು ವಿಸ್ಮಯದ ಪ್ರಕರಣ ನಡೆಯಿತು ನಗರವನ್ನ ಸಿಂಗರಿಸಿದ್ದರು; ವಾಸದ ಬಂಗಲೆ ಅಲಂಕೃತವಾಗಿತ್ತು ಹತ್ತೆಂಟು ಮಂದಿ ದಾರಿಯಲ್ಲಿ ಕಪ್ಪು ಬಾವುಟ ಹಿಡಿದು "ವಾಮಣ್ಣಾ, ಹೂರಟುಹೋಗು" ಎಂದು ಕೂಗಿಕೊಂಡರೂ, ಮೈದಾನಿನಲ್ಲಿ ನಡೆದ ಸಭೆಗೆ ಬಹುಮಂದಿ ಬಂದಿ ದ್ದರು ಪೋಲೀಸರ ಕೃಪೆಯಿಂದ ಯಾವ ಗದ್ದಲವೂ ಆಗಲಿಲ್ಲ ಆಗುವ ಸಂದರ್ಭಗಳನ್ನು ಅವರು ತಡೆದಿದ್ದರು. ಅವನ ಕಾರ್ಯಕ್ರಮದ ವಿಶಿಷ್ಟ ಏರ್ಪಾಡಿಗೆ ಜಿಲ್ಲಾ ಕಲೆಕ್ಟರ್ ಪಟವರ್ಧನ ಕಾರಣನಾಗಿದ್ದ ಆತ ಅವನ ಚೇಲ ಕೆಲಸ ಮುಗಿದು ಅವನ ಏರ್ಪಾಟಿಗಾಗಿ ಬೆನ್ನು ಚಪ್ಪರಿಸಿ ಕಳುಹಿಸಿದ್ದೂ ಆಯಿತು ಆತ ರಾತ್ರಿ ತ್ತುಗಂಟೆಗೆ ಬಂಗಲೆಗ ಬಂದು, ಭೇಟಿಯ ಅವಕಾಶ ಕೇಳಿದಾಗ ವಾಮನ ರಾಯ ನಗುಮೊಗ ದಿಂದ "ಯಾಕೆ ಬಂದಿರಿ ಇಂದೇ, ತುಂಬಾ ದಣದಿದ್ದೀರಿ ಬೆಳಗ್ಗೆ ಬಂದರೆ ಸಾಕಿತ್ತಲ್ಲ" ಎಂದುದಕ್ಕೆ "ಬೆಳಗ್ಗೆ ಜನ ತಿರುಗಿ ಕಲೆಯುತ್ತಾರೆ ತಮಗೆ ರಹಸ್ಯವಾಗಿ ತಿಳಿಸುವ ಸಂಗತಿ ಇತ್ತು, ಅದಕ್ಕೆ ಬಂದೆ" ಎಂದ

"ಏನು ಅಂಥ ಸಂಗತಿ ?"

ಪ್ರತ್ಯುತ್ತರವಾಗಿ ಆತ ಕಿಸೆಯಿಂದ ಒಂದು ಕಾಗದವನ್ನು ತೆಗೆದು ಅವನ ಕೈಮೇಲೆ ಇರಿಸಿದ ಟೈಪು ಮಾಡಿದ ಕಾಗದ, ಸಹಿ ಇಲ್ಲದ್ದು ಅದರ ಒಕ್ಕಣೆ ಹೀಗಿತ್ತು.

"ತಾವು ನಾಳಿನ ಚುನಾವಣೆಯ ಮುಖ್ಯಾಧಿಕಾರಿಗಳು ಅಧಿ ಕಾರಿಗಳಾದವರು ಈ ಚುನಾವಣೆಗಳಲ್ಲಿ ಯಾವ ಪಕ್ಷವನ್ನೂ ವಹಿಸದೆ, ಪ್ರತ್ಯೇಕ ಉಳಿದು ಸಾರ್ವಜನಿಕರ ಹಕ್ಕನ್ನು ಕಾಯುಬೇಕು ಹಿಂದಣ ಬಾರಿ ಅಂಥ ಕೆಲಸ ಆಗಿಲ್ಲ ಆಗ ಐಂದ್ರಜಾಲವಾಗಿತ್ತು ಅದರಲ್ಲಿ ತಮ್ಮ ಕೈವಾಡವೂ ಇದ್ದೀತೆಂದು ತಿಳಿದ ನಾವು ನಿಮಗೆ ಈ ಎಚ್ಚರಿ ಕೆಯ ಪತ್ರ ಬರೆಯಬೇಕಾಗಿದೆ ತಾವು ಪಕ್ಷಾತೀತರಾದ ಸರಕಾರಿ ನೌಕರರು ಎಂಬುದನ್ನು ಮರೆತು ವರ್ತಿಸಿದರೆ ದೇಶದ್ರೋಹಿಗಳಾಗು ತ್ತೀರಿ ಅದಕ್ಕಾಗಿ ಜೀವವನ್ನು ದಂಡ ತೆರಬೇಕಾದೀತು ಇತಿ

ಗೊಂಡಾರಣ್ಯದ ಪ್ರಜಾಧಿಕಾರ ರಕ್ಷಕ ದಳ."

ಆ ಪತ್ರವನ್ನು ಕೊಟ್ಟಾಗ ಪಟವರ್ಧನನ ಮುಖ ಎಷ್ಟು ಚಿಂತೆಗೊಳಗಾಗಿತ್ತೋ, ಅದನ್ನು ಓದಿದಾಗ ವಾಮನರಾಯ ಅಷ್ಟೇ ಕಾತರಕ್ಕೊಳಗಾದ ಆ ಭಾವನೆಯನ್ನು ಮರೆಯಿಸಿ ನಗುತ್ತ "ಅದು ಎಲ್ಲಿಂದ ಬಂತೆಂದು ಹುಡುಕಬೇಕು"ಎಂದ ಭೀಮನೂರನ್ನು ಬಿಟ್ಟು ಹೊರಡುವ ಗಳಿಗೆಯಲ್ಲಿ ಆತನೊಡನೆ "ನನ್ನ ನಿಜವಾದ ಬೆಂಬಲಿಗರು ನೀವೇ. ಪಕ್ಷದ ಜನಗಳಲ್ಲ"ಎಂದು ಹೇಳಿದ್ದೂ ಆಯಿತು ಪಟವರ್ಧನ ಅದಕ್ಕೆ ತಕ್ಕ ವಿಶ್ವಾಸದ ಮಾತುಗಳನ್ನಾಡಿದ

ಆದರೆ ದಿವಸಗಳು ಸರಿದಂತೆ, ಈ ವಿಚಾರದಲ್ಲಿ ತಾನು ಮೊದಲಿನಂತೆ ಮಾಡುವುದು ಅಪಾಯಕರವೆಂದು ತೋರಿ ಬಂದಿತು ಆತ ನಡೆಯಿಸುತ್ತಿದ್ದ ಪ್ರತಿಯೊಂದು ಸಂಚೂ, ಮಾತೂ ಮರುದಿನದ ಅಂಚೆಯಲ್ಲಿ ಮಾರುತ್ತರ ಪಡೆದು ಬರುತ್ತಿತ್ತು ತನ್ನ ಕಚೇರಿಯಲ್ಲಿಯೇ ತನಗೆ ವೈರಿಗಳಿದ್ದಾರೆ ಎಂಬುದು ಸ್ಪಷ್ಟವಾಗುತ್ತಾ ಬಂದಿತು

ಇದೇ ಬಗೆಯಲ್ಲಿ ವಾಮನ ರಾಯನ ಒಳಸಂಚಿಗೆ ಸೇರಿದ ಪೂರ್ವದ ಎಲ್ಲ ಪ್ರಮುಖ ನೌಕರರಿಗೂ, ಪ್ರಜಾರಕ್ಷಣ ದಳದವರ ಬೆದರಿಕೆಯ ಕಾಗದಗಳು ಬರತೊಡಗಿದವು ಜನಮತ ಹೇಗೆಯೇ ಇರಲಿ, ಅದನ್ನು ಒಳಸಂಚಿನಿಂದ ಸಂಪಾದಿಸುವ ಯಾವ ವಿಧದ ಕೈವಾಡಕ್ಕೂ ಅವರಿಗೆ ಧೈರ್ಯ ಸಾಲದಾಯಿತು

ಚುನಾವಣೆ ಸಮೀಪಿಸಿದಂತೆ ನಾಡಿನ ಮೂರು ರಾಜಕೀಯ ಪಂಗಡಗಳು ದುಡಿಯತೊಡಗಿದವು ಅರುಣಾಚಲಯ್ಯನವರ ಕಂಗಾಲುತನ ಕಡಿಮೆಯಾಗಿತ್ತು ಸಾಕಷ್ಟು ಜನಬಲ, ಧನಬಲ ದೊರಕುತ್ತ ಬಂದಿತು ವಾಮನ ರಾಯನ ಮುಷ್ಟಿಗೆ ಯಶಸ್ಸು ತನ್ನದೇ ಎಂಬ ನಿರ್ಧಾರ ತುಂಬಿತ್ತು ಎಲ್ಲ ಕ್ಷೇತ್ರಗಳಲ್ಲೂ ಅವನ ಸಂಚಿಕೆಯ ಅಧಿಕಾರಿಗಳು ಸ್ಥಾಪನೆಗೊಂಡಿದ್ದರು

ಯಾರೆಷ್ಟು ಹೇಳಿದರೂ, ಕಾಂಚನಮಾಲೆ ನಾಮಪತ್ರ ಸಲಿಸದೆ ಕುಳಿತಳು "ಅವಳ ಒಲವೆಲ್ಲ ಅರುಣಾಚಲಯ್ಯನವರ ಕಡೆಗೆ" ಎಂದರು ಕೆಲವರು "ಗುಲಾಬಿ ಟೋಪಿಯವರಿಗೆ" ಎಂದರು ಕೆಲವರು. ಆದರೆ ಆಕೆ ಎಲ್ಲರ ಮುಂದೆಯೂ ತನ್ನ ಆರೋಗ್ಯ ಚೆನ್ನಾಗಿಲ್ಲವೆಂದು ಹೇಳಿ ತನ್ನ ಹೆಸರನ್ನು ಮುಂದೆ ಹಾಕಲಿಲ್ಲ. ಎರಡನೆಯ ಮಹಾ

ಚುನಾವಣೆಯ ಧೂಳು, ಕೊಳಕು, ರಾಡಿಗಳು ನಾಡಿನಲ್ಲೆಲ್ಲ ತಿರುಗಿ ತುಂಬಿಕೊಂಡುವು. ಪುಣ್ಯಕ್ಕೆ ನಾಡಿನಲ್ಲಿ ಮಳೆ ಚೆನ್ನಾಗಿ ಬಿದ್ದು, ಬೆಳೆ ಸಮೃದ್ಧವಾಗಿ ಬಂದುದರಿಂದ ರೈತರ ಮನಸ್ಸು ನೆಮ್ಮದಿಯಲ್ಲಿತ್ತು. ಜನಕ್ಕೆ ತಂತಮ್ಮ ಮತಗಳನ್ನು ಮಾರುವ, ಅಪವ್ಯಯ ಮಾಡುವ, ಸ್ವಜಾತಿ, ಸ್ವಾರ್ಥ, ಸ್ವಾಭಿಪ್ರಾಯಗಳಿಗಾಗಿ ಬಳಸುವ ಹಕ್ಕು ತೊಡಕಿಲ್ಲದೆ ಉಳಿಯಿತು.

ಫಲವೋ–ಎಲ್ಲರ ನಿರೀಕ್ಷಣೆಯನ್ನು ಮೀರಿತ್ತು. ಬಹು ಮಂದಿ ಹಿಂದಣ ಬಾರಿಯಂತೆ ಮತದ ಕಟ್ಟೆಗೇನೆ ಹೋಗಲಿಲ್ಲ. ವಿಕ್ರಮನಗರದಲ್ಲಿ ವಾಮನರಾಯ ಅರುಣಾಚಲಯ್ಯನವರನ್ನು ಇದಿರಿಸಿ ಸೋಲು ಗಳಿಸಿದ. ಆಗ ಅರುಣಾಚಲಯ್ಯನವರ ಬಳಿಗೆ ಮೊದಲು ಬಂದು ಅಭಿನಂದನೆ ಸಲ್ಲಿಸಿದವಳು ಕಾಂಚನಮಾಲಿ. ಪ್ರಗತಿವಾದಿಗಳ ನಾಯಕ ಸೇತುರಾಯನೇ ಸೋತು ಹೋದ. ಅವನ ಹತ್ತು ಮಂದಿ ಗೆಳೆಯರು ಗೆದ್ದರು. ಹಳೆಯ ಮಂತ್ರಿಮಂಡಳದವರೆಲ್ಲರೂ ತಲೆ ಮರೆಸಿಕೊಳ್ಳುವ ಸೋಲನ್ನು ಗಳಿಸಿದರು. ಜನವಾದಿಗಳಿಗೆ ಸಂಪೂರ್ಣ ಬಹುಮತ ದೊರೆಯದಿದ್ದರೂ ಅರುವತ್ತು ಮಂದಿಯಲ್ಲಿ ಇಪ್ಪತ್ತೈದು ಮಂದಿ ಆರಿಸಿ ಬಂದರು. ದೇಶವಾದಿಗಳು ಬರಿಯ ಹದಿನೈದು ಮಂದಿ, ಹತ್ತು ಮಂದಿ ಸ್ವತಂತ್ರರು. ಇವರ ನಡುವೆ ರಾಜ್ಯಸೂತ್ರ ಹಿಡಿಯುವುದಕ್ಕೆ ಅರುಣಾಚಲಯ್ಯನವರಿಗೆ ಅವಕಾಶವಿದೆ. ಅವರ ಎಡದಿಂದಲೋ, ಬಲದಿಂದಲೋ ಬೆಂಬಲ ನಡೆಯಬೇಕು.

## ಅಧ್ಯಾಯ ೬

ಕಾಂಚನಮಾಲಿ ಈ ಬಾರಿಯ ಚುನಾವಣೆಯಲ್ಲಿ ಸ್ಪರ್ಧಿಸದಿರಲು ಎರಡೆರಡು ಕಾರಣಗಳಿದ್ದುವು–ದೇಶವಾದಿಗಳ ಸಹವಾಸ ಸಾಕಾದುದೊಂದು, ಮುಂದಿನ ದಾರಿ ಅನಿಶ್ಚಯವಾಗಿ ಕಾಣಿಸಿದ್ದೊಂದು. ಯಾರ ಜತೆಗೆ ಸೇರಿದರೂ ಗೆಲುವನ್ನು ನಿಶ್ಚಯವೆಂದು ಹೇಳುವಂತಿಲ್ಲ.

ದೇಶವಾದಿಗಳಲ್ಲಿ ಸ್ಪರ್ಧೆ ಬೆಳೆಸಿ ಅಪಖ್ಯಾತಿ ಗಳಿಸದವಳು ಅವ ಳೊಬ್ಬಳೇ ಎನ್ನಬೇಕು ಅವಳಿಗೆ ಹಣದ ಬಾಯಾರಿಕೆ ಇರಲಿಲ್ಲ. ಸ್ವಾರ್ಥಕ್ಕಾಗಿ ಅಧಿಕಾರವನ್ನು ದುರುಪಯೋಗಗೊಳಿಸಲೂ ಇಲ್ಲ. ಕುಹಕವಿಲ್ಲದೆ ಗೆಲ್ಲಬಲ್ಲ ಸಾಮರ್ಥ್ಯ ಅವಳೊಬ್ಬಳಿಗೇ ಇದ್ದುದು. ಅವಳನ್ನು ಒಲಿಸಿ, ಸಂಗಡದ ಪ್ರತಿನಿಧಿಯನ್ನಾಗಿ ಮಾಡಲು ವಾಮನ ರಾಯ ಪ್ರಯತ್ನಿಸಿ ವಿಫಲಸಾಗಿದ್ದ ಅದೇ ವೇಳೆಗೆ ಅರುಣಾಚಲಯ್ಯ ನವರು, ಯೋಗ್ಯ ಪ್ರತಿನಿಧಿಗಳ ಅಭಾವವನ್ನು ಅರಿತುಕೊಂಡವ ರಾದುದರಿಂದ, ಅವಳನ್ನು ಕರೆಯಿಸಿಕೊಂಡು "ನೀವಂದಂತೆ ನಾವು ನಿಮಗೆ ಬೆಂಬಲವನ್ನು ಕೊಟ್ಟೆವು ಅದರಿಂದ ಉಂಟಾದ ಈ ಮರು ಚುನಾವಣೆಯಲ್ಲಿ ನೀವೂ ಭಾಗವಹಿಸಬೇಕು ನಮ್ಮ ಸಂಗಡ ಸೇರಿದರೆ ತುಂಬ ಸಂತೋಷ, ಇಲ್ಲದೆ ಹೋದರೆ ಸ್ವತಂತ್ರರಾಗಿ ಯಾದರೂ ನಿಲ್ಲಿ ದೇಹದ ಅನಾರೋಗ್ಯದ ನೆಪ ಹೇಳಬೇಡಿ ನಿಮ್ಮ ಮನಸ್ಸಿನ ಅಸಮಾಧಾನವೇ ಅನಾರೋಗ್ಯಕ್ಕೆ ಕಾರಣವಿರಬಹುದು. ನಿಮ್ಮಂತೆ ಯೋಗ್ಯತೆಯುಳ್ಳ ನಾಲ್ಕು ಜನ, ಹಿಂದೆ ನಿಂತಿರುವ ಕಾಲ ಇದಲ್ಲ" ಎಂದರು

"ಆ ಒಂದು ಮಾತು ಬಿಡಿ, ನನ್ನ ಹೃದಯ ನಿಮ್ಮೊಡನೆ ಇದೆ; ನ್ಯಾಯದಿಂದ ದೇಶಕ್ಕಾಗಿ ದುಡಿಯುವವರೊಡನೆಯೇ ಇದೆ ಸದ್ಯ ನಾನು ತಟಸ್ಥಳಾಗಿರುವುದು ಉಚಿತವೆಂದು ಕಾಣುತ್ತದೆ ನೀವು ಗೆದ್ದು ಮುಂದೆ ಬಂದರೆ, ನಿಮ್ಮ ಪಕ್ಷ ಸೇರದೆಯೂ, ನಿಮ್ಮೊಡನೆ ದುಡಿಯುವುದಕ್ಕೆ ನಾನು ಸಿದ್ಧ"

"ನನ್ನ ವ್ಯಥೆ ಅದಲ್ಲ–ನನಗೆ ಪಕ್ಷಕ್ಕಿಂತ ದೇಶ ಹಿರಿದು, ಇಂದು ಎಲ್ಲ ಪಕ್ಷಗಳನ್ನು ಕೂಡಿಸಿದರೂ ಈ ಗೊಂಡಾರಣ್ಯದಲ್ಲಿ ಸಮರ್ಥ ಪ್ರತಿ ನಿಧಿಗಳನ್ನು ದೊರಕಿಸುವುದು ಕಷ್ಟ ಅಲ್ಲದೆ ಈ ತನಕ ನಡೆದ ಆಡಳಿತೆ ಯಿಂದ 'ಯಾರು ಹೋದರೂ ಆಗುವುದೇನು?'—ಅನ್ನುತ್ತಾರೆ ಜನ. ಅದೂ ಸುಳ್ಳಲ್ಲ ಇತ್ತ ಸೇತುರಾಯ ಸಖ್ಯಕ್ಕಾಗಿ ಜನ ಕಳುಹಿಸುತ್ತಿ ದ್ದಾನೆ ನನಗೆ ಅವನಲ್ಲಿ ವಿಶ್ವಾಸವಿಲ್ಲ, ಶ್ರಮವಾದಿಗಳ ಆದರ್ಶದಲ್ಲಿ ಒಪ್ಪಿಗೆಯಿಲ್ಲ, ನೀತಿ ಏನೇನೂ ಸಲ್ಲದು ದೇಶದಲ್ಲಿ ಯಾವ ವಿಧದಿಂದ ಲಾದರೂ ಅಶಾಂತಿಯನ್ನು ಹೆಚ್ಚಿಸಿ, ಅಧಿಕಾರಕ್ಕೆ ಬಂದು ನಿರಂಕುಶ

ರಾಗುವ ಸಂಕಲ್ಪ ಅವರದು ”

ಕಾಂಚನಮಾಲೆ ನಗುತ್ತಾ. “ತೀರ ದೊಡ್ಡ ಆರೋಪವಲ್ಲವೇ ? ಆದರೂ ಅವರಲ್ಲಿ ನಮಗಿಂತ ಹೆಚ್ಚಿನ ಕಾರ್ಯ ತತ್ಪರತೆ, ಪ್ರಾಮಾಣಿಕ ತನ ಕಾಣುವುದಲ್ಲವೇ” ಎಂದು ಹೇಳಿದಳು

“ಅವರ ಪಕ್ಷದ ವಿಷಯದಲ್ಲಿದೆ ದೇಶದ ವಿಷಯದಲ್ಲಿ, ರೀತಿಗಳ ವಿಷಯದಲ್ಲಿ ನನಗೆ ನಂಬಿಕೆಯಿಲ್ಲ ರಕ್ತಸ್ನಾನ ಅವರದಾರಿ, ಅವರ ಆದರ್ಶ ರಷ್ಯ ಅವರ ತತ್ವ, ಮಾರ್ಗದರ್ಶನ ಅಲ್ಲಿನವೇ ”

“ನನಗೆ ಸೇತುರಾಯನಷ್ಟು ತಿಳಿಯದಾದರೂ, ಅವನ ದಾರಿ ತೀರ ಸಮ್ಮತವಲ್ಲವಾದರೂ, ಆತ ರಷ್ಯದ ಅಡಿಯಾಳು ಅಲ್ಲವೆಂದು ತಿಳಿಯು ತ್ತೇನೆ ”

ಈ ವಾದ, ಅಭಿಪ್ರಾಯ ಭೇದದಲ್ಲಿ ನಗುವಿನಲ್ಲಿ ಕಳೆಯಿತು ಸೇತು ರಾಯನು ಅವಳ ಸಹಾಯವನ್ನು ಯಾಚಿಸಿದ್ದ ಅವಳು ಅದನ್ನು ನಿರಾಕರಿಸಿದ್ದಳು

ಈಗ ಚುನಾವಣೆಯ ಫಲಿತಾಂಶ ಎಲ್ಲರನ್ನೂ ವಿಸ್ಮಯಗೊಳಿ ಸಿತು ದೇಶವಾದಿ ಹಿರಿಯರು ಗಾಬರಿಯಾದರು ತಮಗಿಂತ ಹೆಚ್ಚಿನ ಬಲ ಜನವಾದಿಗಳಿಗೆ ದೊರೆಯಿತೆಂದು ಸೇತುರಾಯನಿಗೂ ಗಾಬರಿ ಯಾಯಿತು ಅವನ ಪಾಲಿಗೆ ಉಳಿದವರೆಲ್ಲರೂ ವೈರಿಗಳೇ ಮೊದಲು ದೇಶವಾದಿಗಳನ್ನು ಓಡಿಸಿ, ಅನಂತರ ಇವರನ್ನು ನೋಡುವ ಎಂದಿತ್ತು. ಬಹುಮತ ಅವರಿಗೂ ಇಲ್ಲ ತಾವು, ಅವರೂ ಕೂಡಿದರೆ ಅದು ಸಾಧ್ಯ ಆದರೆ ಆ ಮಾತನ್ನೂ ಅರುಣಾಚಲಯ್ಯನವರು ಕೇಳಲಾರರೆಂದು ಆತ ತಿರುಮೂರ್ತಿಯನ್ನು ಹಿಡಿದುಕೊಂಡು ಅವನ ಕಿವಿಯಲ್ಲಿ ಸಮ್ಮಿಶ್ರ ಸರಕಾರದ ತುತ್ತೂರಿ ಊದತೊಡಗಿದ ಅಲ್ಲಿಂದ ಮಾತು ಅರುಣಾ ಚಲಯ್ಯನವರ ಕಿವಿಗೆ ಹೋಯಿತು ಅವರು ತಮ್ಮ ಪಂಗಡಿಗರನ್ನು ಕರೆದು ಉಪದೇಶಿಸುತ್ತ “ರಾಜಕೀಯದಲ್ಲಿ ಬರಿಯ ಇಂದಿನ ದೃಷ್ಟಿ ಯೊಂದಿದ್ದರೆ ಸಾಲದು ಅದು ಹೆಚ್ಚಿಯೇ ದೇಶವಾದಿಗಳು ಸೋತರು. ನಾನು ಎಡವೂ ಅಲ್ಲ, ಬಲ್ಲವೂ ಅಲ್ಲ, ಮಧ್ಯಗಾಮಿ”ಎಂದು ನುಡಿದು ಮೊದಲಬಾರಿಗೆ, ಅವರೊಡನೆ ಚುನಾವಣೆಯ ಕಾಲದಲ್ಲಿ ಶ್ರಮಗಾರ ಪಕ್ಷ ನಡೆಯಿಸಿದ ತಂತ್ರಗಳನ್ನೆಲ್ಲ ವಿಸ್ತರಿಸಿ ಹೇಳಿ “ಅಂಥ ನೀತಿ,

ಚಾಣಾಕ್ಷತನ, ದಾರಿ ನನ್ನಲ್ಲಿಲ್ಲ" ಎಂದರು

ಅಂತು ಅರ್ಧ ನಿರಾಶೆಯಿಂದಲೇ ಅವರು ದೇಶವಾದಿಗಳನ್ನು ಕೂಡಿಕೊಂಡು ನಾಯಕರಾಗಿ, ಸಮ್ಮಿಶ್ರ ಸರಕಾರದ ಯೋಜನೆಯನ್ನು ಮಾಡಬೇಕಾಯಿತು ಅವರಿಗೆ ಆಮಂತ್ರಣ ಕೊಟ್ಟರು ಮಧ್ಯವರ್ತಿಗಳೊಡನೆ ಚರ್ಚೆ ನಡೆಸಿದರು "ನನ್ನ ನಾಯಕತ್ವದಲ್ಲಿ ನಿಮಗೆಷ್ಟು ವಿಶ್ವಾಸವೋ ತಿಳಿಯದು, ನಾನು ವೃದ್ಧ ನನಗೆ ಈ ಅಧಿಕಾರವೂ ಬೇಕಿರಲಿಲ್ಲ ರಾಜ್ಯದ ಕಷ್ಟ ತಿಳಿದಿದ್ದೇನೆ ಈ ಗೊಂಡಾರಣ್ಯವನ್ನು, ಐದು ಹತ್ತು ವರ್ಷಗಳಲ್ಲಿ ನಂದನವನವನ್ನಾಗಿ ಮಾಡುವ ಧೈರ್ಯ ನನಗಿಲ್ಲ ನನ್ನದಾರಿ ನಿಧಾನ ಮೊದಲ ಹೆಜ್ಜೆಗೆ–ಇಲ್ಲಿನ ಹೊಲಸು, ಆಡಳಿತೆಯ ಕೊಳೆ, ಜಡತೆಗಳನ್ನು ಹೋಗಲಾಡಿಸಿದರೆ ಒಂದು ಮಜಲು ನಾಗಿದಂತೆ ಇದು ನನ್ನ ನೀತಿ, ನನ್ನ ಪ್ರಯತ್ನಗಳನ್ನು ಹೊಂದಿದೆ. ಇನ್ನು—ನನಗೆ ಮಂತ್ರಿ ಪದವಿ ಬೇಕು ಎಂದು ತಂತ್ರ, ಕುತಂತ್ರ ನಡೆಯಿಸುವವು ದಿದ್ದರೆ ನಾನು ಅವರಿಂದ ದೂರ ಪಕ್ಷ ಭೇದ ಮರೆತು ಯೋಗ್ಯರನ್ನಾರಿಸುವುದು ನನ್ನ ಕಲಸ ನನ್ನಿಂದ ಕೆಲಸ ನಡೆಯಿಸುವುದು ಅಸಾಧ್ಯವಾದರ ನನ್ನ ಅಯೋಗ್ಯತೆಯನ್ನು ಒಪ್ಪಿಕೊಂಡು ಕೆಳಗಿಳಿದು ಬರುತ್ತೇನೆ ಜನರಿಟ್ಟ ನಂಬಿಕೆಯನ್ನು ಸ್ವಾರ್ಥಕ್ಕೆ ಬಳಸಲಾರೆ. ಮಂತ್ರಿಮಂಡಲದಲ್ಲಿ ಇಂಥ ಪಕ್ಷದಿಂದ ಇಂತಿಷ್ಟೇ ಜನ ಎಂಬ ಕಟ್ಟು ನಿಟ್ಟಿಲ್ಲ, ಜಾತಿ, ಕೋಮುಗಳ ದೃಷ್ಟಿಯೂ ನನಗಿಲ್ಲ ಆ ದೇಶ ಮುಂದೆ ಬಂದರ ನಾನು ಹಿಂದ ಇದು ದೇಶದ ಕೆಲಸ, ಮದುವೆ ನೆಂಟಸ್ತಿಕೆಗಳ ವಿಚಾರವಲ್ಲ ಇದ್ದುದರಲ್ಲಿ ಸಮರ್ಥರಾದವರು, ಪ್ರಾಮಾಣಿಕರು ನನಗೆ ಬೆಂಬಲ ಕೊಟ್ಟರ ಆಗ ಮಾತ್ರ ನಾನು ನಾಯಕ ಇಲ್ಲದೆ ಹೋದರ ಇನ್ನೂ ಒಂದು ಚುನಾವಣೆ ನಡೆಯಲಿ" ಎಂದಾಗ, ಅಲ್ಲಿ ನೇರಿದ ಕೆಲವರಿಗೆ ನಿರಾಶೆಯಾಯಿತು ಆದರೆ ಯಾರೊಬ್ಬರಿಗೂ ಮತ್ತೊಂದು ಚುನಾವಣೆಯ ಸಾಹಸವಿಲ್ಲ ಅವರ ಯಜಮಾನಿಕೆಯನ್ನು ಎಲ್ಲರೂ ಒಪ್ಪಿಕೊಂಡರು ಆ ಬಳಿಕ ತಮಗೆ ತಿಳಿದಂತೆ ಸಚ್ಚರಿತ್ರೆಯುಳ್ಳ, ಶ್ರಮ ವಹಿಸಬಲ್ಲ, ಈಗಾಗಲೇ ಮುಖಕ್ಕೆ ಮಸಿ ಬಳೆದುಕೊಳ್ಳದ ಆರು ಜನಗಳನ್ನು ಆರಿಸಿದರು ಮೂವರು ದೇಶವಾದಿಗಳಿಂದ, ಮೂವರು ತಮ್ಮ ಪಂಗಡದಿಂದ. "ಆಕೆ ಬಂದರೆ

ಅವಳನ್ನು ನೇಮಕ ಮಾಡಿಯಾದರೂ ಇನ್ನೊಂದು ಸ್ಥಾನ ಕೊಡ ಬಲ್ಲೆ" ಎಂದು ಅಂದರು ಆದರೆ ಕಾಂಚನಮಾಲೆ ಇನ್ನೂ ದೂರವೇ ದೇಶಪಾದಿಗಳಿಗೆ ಇದು ಸೋಲಿನಲ್ಲಿ ದೊರೆತ ವಿಜಯ ಸಮ್ಮಿಶ್ರ ಸರಕಾರ ರಚನೆಯಾಯಿತು ಸೇತುರಾಯ ಅಸಮಾಧಾನದಿಂದ ಕುದಿಯ ತೊಡಗಿದ

ಅರುಣಾಚಲಯ್ಯನವರು ಗದ್ದುಗೆಯನ್ನೇರಿದ ಮರುದಿನವೇ ಮುಂದಿನ ಐದು ವರ್ಷಗಳಲ್ಲಿ ಏನೇನು ಸಾಧಿಸಬಹುದು, ಎಷ್ಟನ್ನು ಒಮ್ಮತದಿಂದ ಮಾಡಬಹುದು ಎಂದು ನಿರ್ಧರಿಸಲು ಎಲ್ಲ ಸದಸ್ಯ ರಿಂದಲೂ ಕೂಡಿದ ಅನೌಪಚಾರಿಕ ಸಭೆಯನ್ನು ಕರೆದರು ಅದಕ್ಕೆ ಸೇತುರಾಯನ ಸಂಗಡದವರು ಬರಲಿಲ್ಲ, ದೂರವೇ ಉಳಿದರು. ಅರುಣಾಚಲಯ್ಯನವರು ಪ್ರಧಾನಿಯಾದುದನ್ನು ಕೇಳಿ ಕಾಂಚನಮಾಲೆ ಅಭಿನಂದಿಸುವುದಕ್ಕೆ ಬಂದಿದ್ದಳು ಆಗಲೂ ಅವರು "ಇನ್ನಾದರೂ ಯೋಚಿಸಿ, ನಮ್ಮ ಜನ ನಮಗಾಗಿ ಒಂದು ಸ್ಥಾನ ಹಿಂದೆಗೆದು ಕೊಳ್ಳಲು ಸಿದ್ಧ" ಎಂದು ಹೇಳಿದರು ಅವಳಲ್ಲಿನ ಯಾವುದೋ ಒಂದು ಹಿರಿಯ ಗುಣ ಅವರನ್ನು ಆಕರ್ಷಿಸಿತ್ತು ಕೊಟ್ಟ ಕೆಲಸ ಮಾಡಬಲ್ಲ ಳೆಂದು ವಿಶ್ವಾಸ ಉಂಟಾಗಿತ್ತು ಆದರೆ ಅದಕ್ಕೂ ಆಕೆ ಒಪ್ಪ ಲೊಲ್ಲಳು "ನೀವು ರಚಿಸುವ ಯಾವ ಸಮಿತಿಯಲ್ಲಾಗಲಿ, ಕೆಲಸ ವಲ್ಲಾಗಲಿ ದುಡಿಯುತ್ತೇನೆ ಮಂತ್ರಿ ಪದವಿ ಈಗ ಬೇಡ" ಎಂದಳು.

ತನ್ನ ದಾಳಗಳನ್ನೆಲ್ಲ ಬಳಸಿ ನಿರಾಶನಾದ ವಾಮನರಾಯ ಆ ದಿನದ ತನಕವೂ ವಿಕ್ರಮನಗರದಲ್ಲಿ ಕುಳಿತಿದ್ದ ಬೆಂಗಡೆಯಲ್ಲಿ ಕುಳಿತು ಸೂತ್ರದ ಗೊಂಬೆಗಳನ್ನು ಆಡಿಸಿದ್ದೂ ಆಯಿತು ಹಗ್ಗ ಗಳನ್ನು ಹೇಗೆ ಜಗ್ಗಿ ಎಳೆದರೂ ಅವು ಅವನ ಇಚ್ಛೆಗೆ ಸಮನಾಗಿ ಕುಣಿಯಲಿಲ್ಲ. ಪೋಲಿಸನವರನ್ನು ಕೆರಳಿಸಿ ಇನ್ನೊಂದು ಚುನಾವಣೆ ಯನ್ನು ಎದುರಿಸುವುದಕ್ಕೂ ಆತ ಸಿದ್ಧನೇ ಸಂಗಡದ ಇತರರಿಗೆ ಆ ಧೈರ್ಯವಿರಲಿಲ್ಲ ಯಾವುದೂ ಪ್ರಯೋಜನಕ್ಕೆ ಬಾರದಾಗ "ನನಗೇನು ಬೇಕು! ಭಾರತದ ಮಂತ್ರಿಪದ ನಾನು ಬಯಸಿದರೆ ನನ್ನ ಮುಷ್ಟಿಯಲ್ಲುಂಟು ಎಂದ ಇಷ್ಟೊಂದು ನಿರಾಶೆಗೆ ಕಾರಣ ವೆಂದರೆ ಅರುಣಾಚಲಯ್ಯನವರ ಸರಳ ಮಾರ್ಗ ಅವರು ದೇಶವಾದಿ

ಪ್ರಮುಖರನ್ನು ನೆಟ್ಟಗೆ ಕರೆದೋ, ತಾವಾಗಿ ಭೇಟಿಯಾಗಿಯೋ "ಇನ್ನೊಬ್ಬರ ಉಪದೇಶದಿಂದ ಬರಬೇಡಿ ನಿಮ್ಮ ಮನಸ್ಸು ಒಪ್ಪಿದರೆ ಮಾತ್ರ ಸೇರಬಹುದು" ಎಂದರು ಆ ತಂತ್ರದ ಯಶಸ್ಸಿಗೆ ಅವರ ಪೂರ್ವಕೀರ್ತಿ ಎಷ್ಟು ಕಾರಣವಾಗಿತ್ತೋ, ವಾಮನರಾಯನ ಅಪ ಕೀರ್ತಿಯೂ ಅಷ್ಟೇ ಕಾರಣವಾಗಿತ್ತು

ಈ ಹೊಸ ಮಂತ್ರಿ ಮಂಡಳವನ್ನು ಸಹಾನುಭೂತಿಯಿಂದ ಕಾಣುತ್ತಿದ್ದ ನಿಲುವು ಸೇತುರಾಯ, ವಾಮನರಾಯ ಇಬ್ಬರಿಗೂ ತಿಳಿಯದಾಯಿತು ರಾಜಕೀಯದಿಂದ ಅವಳು ಹೊರಗಿದ್ದಂತೆ ಕಂಡರೂ, ನಿಜವೆಂದು ನಂಬಲಾರರು ಅವಳ ವಿಷಯದಲ್ಲಿ ಎಲ್ಲ ಅನುಮಾನವೂ ಕೇಂದ್ರೀಕರಿಸಿದೆ. ಅವಳೇ ಇದೆಲ್ಲಕ್ಕೆ ಕಾರಣಳೆಂದು ಊಹಿಸುತ್ತಾರೆ ಇತ್ತ ಅರುಣಾಚಲಯ್ಯನವರಿಗೂ ಅವಳು ಅಷ್ಟೇ ದೊಡ್ಡ ಸಮಸ್ಯೆ "ಈ ಹುಡುಗಿ ಎಂಥವಳೆಂದು ನನಗೆ ತಿಳಿಯ ದಾಗಿದೆ! ಅವಳಲ್ಲಿ ಅಭಿಲಾಷೆಯಿಲ್ಲವೇ ? ಇದೆ ಯೋಗ್ಯತೆಯಿಲ್ಲವೇ? ಇದೆ ಆದರೆ ಅವಳ ನಿಜವಾದ ಒಲ ಯಾವುದೆಂದೇ, ತಿಳಿಯದು. ಆಕೆ ಒಮ್ಮೊಮ್ಮೆ ಶ್ರಮವಾದಿಗಳನ್ನು ಹೊಗಳುತ್ತಿದ್ದುದೂ ಉಂಟು. ಆ ಮಾತಿನಲ್ಲಿ ಸತ್ಯವಿಲ್ಲದೆ ಇಲ್ಲ"

ಕಾಂಚನಮಾಲೆಯ ವ್ಯಕ್ತಿತ್ವವೇ ಒಂದು ತೆರ ಅವಳದು ವಿಚಿತ್ರವಾದ ಹೆಣ್ಣುಮನಸ್ಸು ಆ ಮನಸ್ಸಿಗೆ ತನ್ನ ಆಳವೂ ತಿಳಿದಿದೆ. ನಿರಾಳವೂ ತಿಳಿದಿದೆ ಅಭಿಲಾಷೆಗಳು ಇಲ್ಲವೇ ಎಂದು ಕೇಳಿದರೆ, ಉಂಟು ಉಂಟೇ ಎಂದು ಕೇಳಿದರೆ–ಇಲ್ಲ ಈ ವಿವಿಧ ಪಕ್ಷಗಳ ಧ್ಯೇಯಗಳಲ್ಲಿ ಯಾವುದು ಮೆಚ್ಚು ಎಂದು ಕೇಳಿದರೆ–ಅದಕ್ಕೆ ಉತ್ತರ ಸಂದಿಗ್ಧ ಗೊಂಡಾರಣ್ಯದ ವಿಷಯದಲ್ಲಿ ಗುರುತರವಾದ ಪ್ರೀತಿಯಿದೆ. ವಾಮನರಾಯನ ಜತೆಯಲ್ಲಿ ಕೆಲಸಮಾಡಿ ಅವನ ಸರಕಾರದ ಪ್ರತಿ ಯೊಂದು ಹುಳುಕನ್ನೂ ಬಲ್ಲಳು ಅದನ್ನು ಅಂತರಂಗದಲ್ಲಿ ಖಂಡಿಸಿಯೂ ಬಹಿರಂಗದಲ್ಲಿ ಖಂಡಿಸಲಿಲ್ಲ ಅವಳ ಮನಸ್ಸಿನ ಎಣಿಕೆಗಳೇ ಬೇರೆ. ಅವನ್ನು ಬಾಯಿತಪ್ಪಿ ಬರುವ ನಾಲ್ಕು ಮಾತುಗಳಿಂದ ಊಹಿಸ ಬೇಕೋ ಏನೋ ಅವಳಲ್ಲಿನ ಕೆಲವೊಂದು ಮನೋಲಹರಿಗಳು ಅಪೂರ್ವವೂ, ಅಪಕ್ವವೂ ಆಗಿವೆಯಾದರೂ ಅಪ್ರಾಮಾಣಿಕತೆಯ

ಲವಲೇಶವಿಲ್ಲ.

* * *

ಕಾಂಚನಮಾಲೆಗೆ ಸೇತುರಾಯ ಕಾಲೇಜು ವಿದ್ಯಾಭ್ಯಾಸದ ಕಾಲದಲ್ಲಿ ಪರಿಚಿತವಾದ ವ್ಯಕ್ತಿ. ೧೯೪೦ರ ಸುಮಾರಿಗೆ ಅವರಿಬ್ಬರೂ ಒಂದೇ ಕಾಲೇಜಿನಲ್ಲಿ ಓದುತ್ತಿದ್ದವರು ಆತ ಅವಳಿಗಿಂತ ಪ್ರಾಯ ದಲ್ಲಿ ಎರಡು ವರ್ಷ ಹಿರಿಯ. ತರಗತಿಯಲ್ಲಿ ಒಂದು ವರ್ಷ ಪ್ರಬುದ್ಧ ಅವಳ ಅಣ್ಣ ನಾಗರ, ಸೇತುರಾಯನ ಜತೆಗೆ ಕಲಿತವನು ಆತನೀಗ ಹೆಸರಾದ ವೈದ್ಯನಾಗಿದ್ದಾನೆ ಸೇತು, ಕಾಂಚನಮಾಲೆಯರಿಬ್ಬರೂ ಕಾಲೇಜು ಜೀವನದಲ್ಲಿ ಪ್ರಮುಖ ವ್ಯಕ್ತಿಗಳೇ ಅವಳಿಗೆ ತನ್ನ ಯೌವನ, ಚೆಲುವು, ಬುದ್ಧಿಮತ್ತೆಗಳ ಅರಿವು ಚೆನ್ನಾಗಿತ್ತು ಸೇತು ರಾಯ ಚೆಲುವನಲ್ಲವಾದರೂ ಬುದ್ಧಿವಂತ ಕಾಲೇಜಿನ ಆವರಣ ದಿಂದ ನಾಗರನ ಸಖ್ಯದಿಂದ ಅವರಲ್ಲಿ ಪರಿಚಯವಾಗಿತ್ತು ವಿದ್ಯಾರ್ಥಿ ದೆಸೆಯಲ್ಲಿಯೇ ಅವಳನ್ನು ಸ್ನೇಹಕಾಂಕ್ಷೆಯ ಕಣ್ಣುಗಳಿಂದ ಬೇಡಿ ಬಯಸಿದ ತರುಣ ಸೇತುರಾಯ ಅವಳನ್ನು ಒಲಿಸಲು ಅವಕಾಶ ಹುಡುಕುತ್ತಿದ್ದ ಅವಳ ಕಣ್ಮುಂದೆ ಹಿರಿತನ ನಟಿಸಿ ನಡೆಯುತ್ತಿದ್ದ. ಕಾಲೇಜು ಚರ್ಚಾಕೂಟಗಳಲ್ಲಿ ಸೇತುರಾಯ ಒಂದು ಪಕ್ಷವನ್ನು ಹಿಡಿದು ವಾದಿಸಿದರೆ, ಇವಳು ಅಷ್ಟೇ ಸಾಮರ್ಥ್ಯದಿಂದ ಪ್ರತಿಪಕ್ಷ ಹಿಡಿದು ವಾದಿಸುವವಳು 'ದೊಡ್ಡ ವಾಗ್ಮಿ' ಎಂದು ಅವನಿಂದಲೂ ಹೊಗಳಿಸಿಕೊಂಡಿದ್ದಾಳೆ ಸ್ವಾಭಾವಿಕವಾದ ತಾರುಣ್ಯ ಅವರಿಬ್ಬರನ್ನೂ ಸಮೀಪ ಸೆಳೆಯುತ್ತಿದ್ದಂತೆ ಒಂದು ಬಗೆಯ ಮಾತ್ಸರ್ಯ, ಅವನು ತನಗಿಂತ ಬುದ್ಧಿವಂತನೆಂಬ ಅಸೂಯೆ, ಅವರನ್ನು ದೂರಕ್ಕೆ ಒಯ್ಯು ತ್ತಿತ್ತು. ಅವಳ ಪಾಲಿಗೆ, ಅಂಥ ಹಲವರ ಅಭಿಮಾನದಲ್ಲಿ ತೇಲು ತ್ತಿದ್ದವಳಿಗೆ ಅವನೊಂದು ಹೆಚ್ಚೇನು? ಎಂಬ ಹೆಮ್ಮೆಯೂ ಮೂಡಿತ್ತು. ಪರಸ್ಪರ ಭೇಟಿಯಾದಾಗ ಸೇತು ಹೊಗಳುಭಟ್ಟನಾಗು ತ್ತಿದ್ದ. ಹೊಗಳಿಕೆಗೆ ಹಿಗ್ಗಿದರೂ ಕಾಂಚನಮಾಲೆ ಪ್ರತಿಯಾಗಿ ಅವ ನನ್ನು ಹೊಗಳಿದವಳಲ್ಲ

ಮುಂದೆ ವಿಚಿತ್ರ ರೀತಿಯಲ್ಲಿ ಅವರ ಸ್ನೇಹ ಸಂಪರ್ಕಗಳು ಬೆಳೆದುವು. ಸೇತುರಾಯ ಬಿ ಎ ಮುಗಿಸಿ, ಲಾ ಓದುವ ಕಾಲದಲ್ಲಿ

ರಾಜಕೀಯ ಹಂಬಲವೆಂದು ತೂರಾಡಿದ 1942ರ ಚಳವಳವು ಅವನನ್ನು ಸೆಳೆದು ಪ್ರತ್ಯಕ್ಷ ಭಾಗಿಯನ್ನಾಗಿಯೂ ಮಾಡಿತು. ಅವನು ವಿಧ್ವಂಸಕ ವೀರನಾದ. ಅವನು ರಾಜಕೀಯಕ್ಕೆ ಸಾಹಸಮಯ ಪ್ರವೃತ್ತಿ ಸೇರಿಕೊಂಡು, ಅಂಚೆ ಸುಲಿಗೆ, ಪೋಲೀಸು ಠಾಣೆಗಳ ನಾಶ ಇವೇ ಮೊದಲಾದ ಕೆಲಸಗಳಲ್ಲಿ ಹತ್ತೆಂಟು ತರುಣರಿಗೆ ನಾಯಕನಾಗಿ ಆರಾಧ್ಯನಾಗಿ ನಾಡಿನಲ್ಲಿ ಅಲೆದಾಡಿದ. ಹೆಸರು ಬಹಿರಂಗವಾಯಿತು. ಪೋಲೀಸರು ಹಸಿದ ತೋಳಗಳಂತೆ ಅವನನ್ನು ಗ್ರಾಮದಿಂದ ಗ್ರಾಮಕ್ಕೂ ಗವಿಯಿಂದ ಗವಿಗೂ ಹಿಂಬಾಲಿಸತೊಡಗಿದರು. ಆ ಕಾಲದಲ್ಲಿ ರಾಜಕೀಯವಿಲ್ಲದ ಸುಲಿಗೆಗಾರ ಹಲವರು ಸೇರಿಕೊಂಡರು, ಅವನ ಅನುಯಾಯಿಗಳು ಸಿಕ್ಕಿದರು, ಅದರಿಂದ ಅವನ ಗುಟ್ಟು ರಟ್ಟಾಯಿತು. ತಲೆಮರೆಸಿಕೊಂಡಿರುವುದು ಕಷ್ಟವಾಯಿತು. ಎಲ್ಲೂ ಆಶ್ರಯ ದೊರಕಿಸುವುದು ತೀರ ಕಠಿಣವಾದಾಗ ಉದ್ದ ಗಡ್ಡ ಬೆಳೆಯಿಸಿಕೊಂಡ ಫಕೀರನಂತೆ ನೇರವಾಗಿ ಕಾಂಚನಮಾಲೆಯ ಮನೆಗೆ ಬಂದ. ಅವನ ಚಟುವಟಿಕೆಯನ್ನು ಅರಿತ ಹಲವರು ಅವನಿಗೆ ಆಶ್ರಯಕೊಡಲು ಅಂಜುವುದರಿಂದ ಹಳೆಯ ನೆನಪಿನಿಂದ ಈತ ಅಲ್ಲಿಗೆ ಬಂದ.

ಕಾಂಚನಮಾಲೆ ಆಗ ಸ್ವತಂತ್ರಳು. ಮನೆಗೆ ಯಜಮಾನಿ. ಅಣ್ಣ, ಸಾಗರ, ವೈದ್ಯಕೀಯ ವಿದ್ಯಾಭ್ಯಾಸ ಮಾಡುತ್ತ ಮುಂಬಯಿಯಲ್ಲಿ ಇದ್ದಾನೆ. ತಾಯಿಗೆ ಮುಪ್ಪಿನ ಅಸ್ವಾಸ್ಥ್ಯ, ಕಣ್ಣು ಮಸುಕಾಗಿ ಕಾಣಿಸದು. ಕಾಂಚನಮಾಲೆ ಆಗ ಎಂ.ಎ. ಪರೀಕ್ಷೆಗೆ ಓದುತ್ತಿದ್ದಳು. ಸಂಜೆ, ಪೇಟೆ ನೋಡಿಕೊಂಡು ಮನೆಗೆ ಬರುವಾಗ, ಮನೆಯ ಬಾಗಿಲಲ್ಲಿ ಈ ಹೊಸ ಫಕೀರನ ಭೇಟಿಯಾಯಿತು. ಕಣ್ಣುಗಳಿಂದಲೇ ಅವನನ್ನು ಗುರುತಿಸಿದಳು. ಅವನ ಚಟುವಟಿಕೆಗಳನ್ನು ಕೇಳಿ ಗೊತ್ತು. ಆತನ ಗುಪ್ತಜೀವನಕ್ಕೆ ಆಸರೆ ಬೇಕಾಗಿತ್ತೆಂದು ತಿಳಿಯಬಲ್ಲಳು. ಅದನ್ನು ಅವಳು ಕೊಟ್ಟೇ ಕೊಟ್ಟಳು. ಅವಳು ಓದನ್ನು ಬಿಡದಿದ್ದರೂ ಅವಳ ಯೌವನಕ್ಕೆ ತಕ್ಕಂತೆ ರಾಜಕೀಯ ಉದ್ವೇಗ ಅವಳಲ್ಲೂ ತುಂಬಿಕೊಂಡಿತ್ತು. ಮನೆ ದೊಡ್ಡದಿದೆ, ಮಹಡಿ ಇದೆ, ಕೊಠಡಿಗಳಿವೆ. ಅವನನ್ನು ರಕ್ಷಿಸುವುದೊಂದು ಕಷ್ಟವಲ್ಲ. ಸುದ್ದಿ ಪ್ರಕಟವಾದರೆ ಗಂಡಾಂತರ ಬಂದೀತೆಂದು ಗೊತ್ತಿದ್ದರೂ, ಅದು ಬ್ರಿಟಿಷರ ಮೇಲಿನ

ಕದನವೆಂಬುದರಿಂದ, ಸಾಹಸಪ್ರವೃತ್ತಿ ಉಕ್ಕಿ, ತನ್ನಿಂದ ಆದ ನೆರವು ನೀಡಿದಳು ಅವನಿಂದ ಒಂದೊಂದಾಗಿ ಸಾಹಸದ ಕತೆಗಳನ್ನು ಕೇಳಿದ್ದಂತೆಲ್ಲ ಅವನ ವಿಷಯದಲ್ಲಿ ಅಭಿಮಾನ, ಪ್ರೀತಿಗಳು ಬೆಳೆದುವು ಅವು ಪಕ್ವವಾಗಿ ಪ್ರೇಮದಲ್ಲಿ ಪರಿಣಮಿಸುವ ಗಳಿಗೆಯೂ ಸಮೀಪಿಸ ಬಹುದಿತ್ತು ಆತ ಆಗಾಗ ವೇಷತಾಳಿ ಸಾಧುವಿನಂತೆ, ಫಕೀರನಂತೆ ಬಂದುಹೋಗುತ್ತಿದ್ದಾಗಲೆಲ್ಲ ಅವನನ್ನು ಬಚ್ಚಿಟ್ಟುಕೊಳ್ಳುವುದೇ ಮಹಾ ಕಾರ್ಯವೆಂದು ತಿಳಿದಳು ಮುಂದೆ ಕೆಲವು ದಿನಗಳಲ್ಲಿ ಶ್ಯಾಮನೂರಿನಲ್ಲಿ ರೈಲ್ವೆಸ್ಟೇಷನಿನ ದರೋಡೆಯಾಗಿ, ಸ್ಟೇಷನಮಾಸ್ತರನ್ನು ಕೊಂದರು. ಆ ಪ್ರಕರಣದಲ್ಲಿ ನೇತುರಾಯ ಇದ್ದನೆಂಬ ಸುದ್ದಿ ಹೊರಟು, ಪೋಲೀಸು ಶೋಧನ ಬಲವಾದುದರಿಂದ ಆತ ಗೊಂಡಾರಣ್ಯವನ್ನೇ ಬಿಟ್ಟು ದೂರ ಹೋದ

ಈ ಆರೋಪ ಸತ್ಯವಲ್ಲವೆಂದು ಅವನು ಹೇಳುತ್ತಾನೆ ಅವಳಿಗೂ ತನ್ನ ಗೆಳೆಯ ಅಂಥವನಲ್ಲವೆಂದು ತೋರುತ್ತಿತ್ತು ಮುಂದೆ ಅವರೊಳಗೆ ಗುಪ್ತಪತ್ರ ವ್ಯವಹಾರ ಆಗೊಮ್ಮೆ, ಈಗೊಮ್ಮೆ ನಡೆಯುತ್ತಿತ್ತಾದರೂ ಅದು ಹೆಸರು, ಸ್ಥಳಗಳ ಸುಳಿವಿಲ್ಲದೆ ನಡೆಯಬೇಕಾಗಿತ್ತು ಆಗಾಗ ಆರ್ಥಿಕ ಸಹಾಯವನ್ನು ಅವನಿಗೆ ಅವಳು ಕೊಡುತ್ತಿದ್ದಳು ಈ ಎರಡು ಮೂರು ವರ್ಷಗಳ ಅಜ್ಞಾತವಾಸದಲ್ಲಿ ಕಾಂಚನಮಾಲೆಯ ಪ್ರೇಮದ ಹಂಬಲ ಮಾತ್ರ ತುಸು ತಗ್ಗಿತು ಅವಳ ಬಲಿತ ವಯಸ್ಸು ತನ್ನ ಭಿಕ್ಷೆಯನ್ನು ಬದಲು ದಾರಿಯಲ್ಲಿ ಬಯಸಿತಾದರೂ ಅವನನ್ನು ಅವಳು ಮರೆಯಲಿಲ್ಲ ಅವನೇ ತನಗೆ ತಕ್ಕವನೆಂಬ ಆಸೆಯೂ ಇದ್ದಿತ್ತು ಮುಂದೆ ಅವನ ಪತ್ರಗಳ ದಾರಿ ಬದಲಾಯಿತು ಅವು ಬರಿಯ ಪ್ರಬಂಧಗಳಾದುವು, ಲೆನಿನ್, ಮಾರ್ಕ್ಸ್, ಏಂಜಲ್ಸ್, ಸ್ಟಾಲಿನರುಗಳ ಭಕ್ತಿಪ್ರದರ್ಶನಕ್ಕೆ ನೆಪವಾದುವು ಒಂದು ದಿನ ಅವರಂತ ಗೊಂಡಾರಣ್ಯದಲ್ಲಿ ಶ್ರಮಗಾರ ರಾಜ್ಯವನ್ನು ಕಟ್ಟುವ ಆಶೆ, ಆವೇಶ ಕನಸುಗಳು ತೋರತೊಡಗಿದವು ಇದರಿಂದ ಅವನ ವಿಷಯದಲ್ಲಿ ಅಭಿಮಾನ ಹೆಚ್ಚಿತೇ ಹೊರತು ತಗ್ಗಲಿಲ್ಲ ಮನಸ್ಸು ಹಿಂಸೆಯ ದಾರಿಯನ್ನು ಹೊಗಳುವಂತೆ ಕಾಣಿಸಿತು 'ಅಹಿಂಸೆಯಿಂದ ಕ್ರಾಂತಿ ಬರುವುದುಂಟೇ ? ತೀಕ್ಷ್ಣ ರೋಗಕ್ಕೆ ತೀವ್ರ ಚಿಕಿತ್ಸೆ ಬೇಡವೇ ?'

ಎಂದು ತೋರತೊಡಗಿ ಇವಳಲ್ಲಿ ಗಾಂಧೀ ಲೆನಿನರ ನಡುವೆ ಹೊಯ್ದಾಡ ತೊಡಗಿತು.

ಅವಳು ಎಂ ಎ ಅಭ್ಯಾಸ ಮುಗಿದು ಕೆಲವು ದಿನ ಅಧ್ಯಾಪಕ ವೃತ್ತಿಯನ್ನು ಕೈಕೊಂಡಳು. ಅವಳ ಓದು ವಿಸ್ತರಿಸಿತು 'ಅದನ್ನು ಓದು, ಇದನ್ನು ಓದು'ಎಂದು ಸೇತುರಾಯನಿಂದ ಉಪದೇಶವೂ ಬರುತ್ತಿತ್ತು. ಆದರೆ ಅವಳಿಗೆ ಕಾದಂಬರಿಗಳ ಹುಚ್ಚು ಬಹಳ ಪ್ರಬಂಧಗಳನ್ನು ಓದುವ ತಾಳ್ಮೆ ಕಡಿಮೆ ಅವಳಲ್ಲಿ ಸುಪ್ತವಾಗಿದ್ದ ಸಾಹಸಬುದ್ಧಿ ಅನೇಕ 'ಎಸ್ಪಿಯೊನೇಜ್' ಗ್ರಂಥಗಳ ಓದಿನಿಂದ ಆಕರ್ಷಣೆಗೊಂಡಿತು "ಮಾತಾಹರಿ"ಯಂಥ ಗುಪ್ತ ಸಂಚುಗಾರರ ಸಾಹಸ ಅವಳನ್ನು ಮರುಳುಗೊಳಿಸಿತು ಕುಳಿತಲ್ಲಿಂದಲೇ ಅಂಥ ಕೆಲಸಗಳನ್ನು ಕಂಡು ಮೆಚ್ಚುವಂತೆ ಮನಸ್ಸು ಬೆಳಯಿತು.

ಆ ವೇಳೆಗೆ ಮಹಾಯುದ್ಧವು ಮುಗಿಯಿತು ಸೇತುರಾಯ ತಿರುಗಿ ಗೊಂಡಾರಣ್ಯದಲ್ಲಿ ಕಾಣಸಿಕೊಂಡ ಅದೂ ಶ್ಯಾಮನೂರಿನ ಕೊಲೆಯ ಆರೋಪ ಸರಿದು ದೂರಾಯಿತೆಂದು ತಿಳಿದಮೇಲೆ ಆದರೆ ದೇಶವಾದಿಗಳ ಪ್ರಾಬಲ್ಯ ಕಂಡು ಸ್ವಂತ ಸಂಗಡಕಟ್ಟುವ ಹವಣಿಕೆಯಿಂದಾಗಿ, ಮಿತ್ರರನ್ನು ಕೂಡಿಸಿ, ಮುಂದಿನ ದಾರಿ ಗೊತ್ತುಮಾಡುವುದರಲ್ಲಿ ಸಮಯ ಕಳೆಯಿತು ಇದು ಕಾಂಚನಮಾಲೆಯ ಪಾಲಿಗೆ ಉಭಯ ಸಂಕಟವನ್ನುಂಟುಮಾಡಿತು ಚಿರಮನೆಗೆ ಅವಳು ಸಮೀಪಳಾಗಿದ್ದರೂ, ಭಾರತದ ಸ್ವಾತಂತ್ರ್ಯದ ಆವೇಶ ಅವಳಲ್ಲಿ ತುಂಬಿಕೊಂಡಿತ್ತು ಅವರ ಗೆಲುವು, ಅವಳ ಗೆಲುವೂ ಆಯಿತು. ಒಳಗಿಂದೊಳಗೆ ಮನಸ್ಸು ಕ್ರಾಂತಿ, ಕಮ್ಯೂನಿಜಮ್‌ನ ಕಡೆಗೆ ಧಾವಿಸುತ್ತಿತ್ತು ಆ ಇಬ್ಬಗೆಯ ಜೀವನದಲ್ಲಿ ತಾನು ಗುಪ್ತಗಾಮಿನಿಯಾಗಿ ಯಶಸ್ಸನ್ನು ಸಾಧಿಸಬೇಕೆಂದು ತೀರ್ಮಾನಿತು ದೊರೆ ಪ್ರತಾಪಚಂದ್ರ ಮಣಿದಾಗ ಹಿಗ್ಗುಂಟಾಯಿತು ಮಂತ್ರಿಪದದ ಅಭಿಲಾಷೆ ಕಹಿಯೆನಿಸಲಿಲ್ಲ. ವಾಮನರಾಯನ ಸ್ನೇಹ ತನ್ನ ಕಾರ್ಯ ಸಾಧನಗೊಂದು ಅನುಕೂಲವೆನಿಸಿತು ಆಗ ನಾಲ್ಕೈದು ವರ್ಷಗಳಲ್ಲಿ ಅವಳು ಅವನ ನಿಕಟವರ್ತಿಯಾಗಿದ್ದರೂ, ಅವನನ್ನು ಅವನ ಸಂಗಡವನ್ನು ಉರುಳಿಸುವುದಕ್ಕೆ ಸಿದ್ಧಳೇ. ದೇಶದ ಅಂತಿಮ ಹಿತಕ್ಕಾಗಿ ತನ್ನ ಹೆಣ್ತನವನ್ನು

ಬುದ್ಧಿಪೂರ್ವಕವಾಗಿ ಬೇಕಾದಂತೆ ಬಳಸಿದಳು ಅದೊಂದು ಹೆಮ್ಮೆಯ ಕೆಲಸವೆನಿಸಿತು ಇದರಿಂದ ಸ್ವೈಜ ಪ್ರೇಮ, ಒಲವುಗಳಿಗೆ ಬೇಕಾದ ಬೆಲೆ ಸಿಗಲಿಲ್ಲ ಕೆಟ್ಟ ಬಿರುದೂ ಬಂದಿತು ಆದರೂ ತನ್ನ ಹೃದಯ ವನ್ನು ತೆರೆದು ಸೇತುರಾಯನನ್ನು ಗೆದ್ದೇನೆಂದು ತಿಳಿದಳು ಆ ದಿನ ದೂರ ಇರಬಹುದು ಇದಿರಾಳಿಗಳ ಸಂಗಡ ನಾಶವಾದ ಮೇಲೆಯೇ ಅದು ಸಾಧ್ಯ ಇದೊಂದು ಮುಳ್ಳಿನ ಹಾಸಿಗೆ ಈ ನಾಟಕವನ್ನು ಸಾಕಷ್ಟು ಚೆನ್ನಾಗಿಯೇ ನಡೆಸಿಕೊಂಡು ಬಂದಳು ಅದಕ್ಕೆ ಮೊದಲಿಗೆ ಬಲಿಯಾದ ಜೀವ ವಾಮನರಾಯ

ಆತ ಕುಟಿಲರಲ್ಲಿ ಕುಟಿಲ, ಪಾತಾಳದಷ್ಟು ಆಳ ಅವನ ದೌರ್ಬಲ್ಯ ಬಲ್ಲ ಕಾಂಚನಮಾಲೆ ತನ್ನ ಕಣ್ಣಂಚಿನಿಂದಲೇ ಅವನ ತಳ ವನ್ನು ನಿಲುಕಿ ನೋಡಿದಳು ಅವನ ಪ್ರತಿ ದಾಳಕ್ಕೂ ಕುಣಿಯು ವಂತೆ ತೋರಿಸಿಕೊಂಡು ಅವನ ಪತನಕ್ಕೆ ಕಾರಣವಾದಳು ಆ ದಿನದ ಮೋಟಾರು ಕೆಲಸಗಾರರ ಸಂಪನ್ನು ನಿಲ್ಲಿಸಿದವಳು ಅವಳು. ಸೇತು ರಾಯನೊಡನೆ ಅವಳಿಗಿದ್ದ ಅದೃಶ್ಯ ಬಾಂಧವ್ಯ, ಪ್ರಭಾವ ಅದಕ್ಕೆ ಅನುಕೂಲವಾಯಿತು ಮೊದಮೊದಲು ಆತನ ಗೆರಿಲ್ಲಾ ಕದನಗಳಲ್ಲಿ ಪೋಲೀಸರ ಚಲನ ವಲನಗಳನ್ನು ಅವನಿಗೆ ತಿಳಿಸಿಕೊಟ್ಟವಳು ಅವಳೇ ಮುಂದೆ ಮುಂದೆ ಅವು ಪಡೆದ ಘೋರ ರೂಪ, ದರೋಡೆಗಳು, ಅನ್ಯಾಯ, ಕೊಲೆಗಳು ಇವನ್ನೆಲ್ಲ ಕಂಡಾಗ ಅವಳಿಗೆ ಸೇತುರಾಯನ ರಾಜಕೀಯವನ್ನು ಪ್ರತ್ಯಕ್ಷ ಸುಲಿಗೆಯಿಂದ ಬೇರೆಮಾಡುವುದು ಅಸಾಧ್ಯ ವಾಯಿತು "ಇದು ನಿನ್ನ ಉದ್ದೇಶವನ್ನು ಮೀರಿದ ವಿಶ್ವರೂಪ ತಾಳು ತ್ತಿದೆ ರಾಜಕೀಯ ಅಮುಖ್ಯವಾಗುತ್ತಿದೆ ಇನ್ನು ನಾನು ಇದರಿಂದ ದೂರ" ಎಂದು ಧೈರ್ಯವಾಡಿ ತಿಳಿಸಿದಳು ಹೇಗಾದರೂ ಈ ಅಸಹ್ಯ ರೂಪ ನಿಲ್ಲಲಿ ಎಂದೆನಿಸಿತು ಅವರಿಗೆ ಕೊಟ್ಟ ಬೆಲೆ ಹೆಚ್ಚೆಂದು ತೋರಿ, ಗುಲಾಲಿ ಟೋಪಿಯವರ ಮೇಲಿನ ನಿರ್ಬಂಧ ತೆಗೆದುಹಾಕು ವಂತೆ ಮಾಡಿದಳು ಅವಳ ಹೃದಯ, ಅವಳ ಬುದ್ಧಿಯನ್ನು ಗೆದ್ದಿತು.

ಅವಳನ್ನು ಬಹುವಾಗಿ ಕಾಡಿದ ಇನ್ನೊಂದು ಸಮಸ್ಯೆಯೆಂದರೆ– ಮೊದಲ ಚುನಾವಣೆಯ ಫಲಿತಾಂಶ, ವಾಮನರಾಯ ಅದನ್ನು ಗೆದ್ದ ರೀತಿ. ಗೊಂಡಾರಣ್ಯದಲ್ಲಿ ದೇಶವಾದಿಗಳ ವಿಚಾರದಲ್ಲಿ ಚೆನ್ನಾದ

ಅಭಿಪ್ರಾಯವಿರಲಿಲ್ಲವೆಂದು ಅವಳಿಗೂ ಗೊತ್ತು. ಆದರೂ ವಿಜಯ ದೊರಕಿತು ಹೇಗೆ? ಎಂಬ ಆಶ್ಚರ್ಯವಾಯಿತು. ಆ ರಹಸ್ಯವನ್ನು ಭೇದಿಸಲು ಹೊರಟಳು. ಆತ ಪ್ರೇಮಭರಿತ ಗಳಿಗೆಯಲ್ಲಿ, ತಲೆಯ ಮೇಲೆ ಕೈ ಸವರಿ "ನೀವು ಇಂದ್ರಜಾಲಕರು. ದೊಂಡಾಲರ ನಾಡಿನಲ್ಲಿ, ವಿಕ್ರಮನಗರದಲ್ಲಿ, ಸೋಮನೂರಿನಲ್ಲಿ ನಾವು ಗೆಲುವುದು ಸಾಧ್ಯವೆಂದು ನನಗೆ ಅನಿಸಿರಲೇ ಇಲ್ಲ" ಎಂದಳು.

"ಸರಿಯಾದ ಮಾತು."

"ಅದನ್ನು ತಿಳಿಯದೇ ನುಡಿದೆ. ಆದರೆ ಹೇಗೆ ಸಾಧಿಸಿದಿರಿ?"

"ಕಾಂಚೂ, ಇಂದ್ರಜಾಲಕ ಏನನ್ನು ಜನಗಳಿಗೆ ತೋರಿಸಿ ಬಹಿರಂಗಪಡಿಸುತ್ತಾನೋ ಅದರಲ್ಲಿ ವಂಚನೆಯಿಲ್ಲ. ತೋರಿಸುವುದೇ ನಂಬಿಕೆಯನ್ನು ಹುಟ್ಟಿಸುವುದಕ್ಕೆ. ಈ ಮತದಾರಿಕೆಯ ಜಾದುವಿನಲ್ಲಿ ತೋರಿಸದ ಹಲವಾರು ಸಂಗತಿಗಳಿವೆ. ಅಂಥ ವಿಷಯದಲ್ಲಿ ಸರಿಯಾದ ಬೆಂಬಲಿಗರು ದೊರೆತರೆ ಯಶಸ್ವಿಯಾಗಿ ಆಟವಾಡಬಹುದು. ರಾಜಕೀಯದಲ್ಲಿ ಯಶಸ್ಸು ಮೊದಲನೆಯದು, ಅದೇ ಮುಖ್ಯ. ಅದಿಲ್ಲದೆ ಏನೂ ಆಗದು."

'ಬೆಂಬಲಿಗರು' ಎಂಬ ಮಾತು ಅವಳಿಗೆ ಅರ್ಥವನ್ನು ಕೊಟ್ಟಿತು. ಚುನಾವಣೆಯ ಸಮಯಗಳಲ್ಲಿ ಅಪರೋಕ್ಷವಾಗಿ ನಿಲ್ಲುವ ಅಧಿಕಾರಿಗಳೇ ಅವರು ಎಂದು ತಿಳಿಯುವುದಕ್ಕೆ ಕಷ್ಟವಾಗಲಿಲ್ಲ. ಮುಂದೆ ಅಂಥ ಬೆಂಬಲಿಗರ ಪರಿಚಯವೂ ಆಯಿತು. ಅವರ ಮೇಲಿನ ಅಧಿಕಾರವೂ ಬಂದಿತು. ಇದರಿಂದ ರಹಸ್ಯ ತಿಳಿದು ಅವಳಿಗೆ ಭಯವಾಯಿತು. ಒಮ್ಮೆ ಸರಕಾರದ ಯಂತ್ರ ಈ ರೀತಿಯ ಆಟಕ್ಕೆ ಒಲಿದರೆ, ಮುಂದೆ ಅದು ತನಗೆ ಒಲಿಯುತ್ತದೆಂದು ಹೇಗೆ ನಿಶ್ಚಯ? ಯಾರು ಹಣ, ಅನುಗ್ರಹ ಕೊಡಬಲ್ಲರೋ ಅವರೆಲ್ಲರಿಗೂ ಒಲಿಯಬಹುದು. ಅದು ಅಪಾಯದ ಸೂಚನೆ ಎನಿಸಿತು. ಹಾಗೆಯೇ ವಾಮನರಾಯನೊಡನೆಯೂ ವಾದಿಸಿ ನೋಡಿದಳು. ಆದರೆ ಸ್ವಬುದ್ಧಿಯಲ್ಲಿ ಅಮೋಘ ವಿಶ್ವಾಸವುಳ್ಳ ಅವನಿಗೆ ತಾನೆಸೆದ ಬಾಣ, ತಿರುಗುಬಾಣವಾದೀತು ಎಂದೆನಿಸಲೇ ಇಲ್ಲ.

ಇಂಥ ಅನುಮಾನ, ಅನ್ವೇಷಣೆಗಳಲ್ಲಿ ಅವನ ಪ್ರತಿಸ್ಪರ್ಧಿಯಾದ

ಸೇತುರಾಯ ತಲ್ಲೀನನಾಗಿದ್ದ ಪ್ರತ್ಯಕ್ಷದಲ್ಲಿ ಹಳೆಯ ಮಂತ್ರಿ ಮಂಡಳಕ್ಕೂ ಅವನಿಗೂ ಘರ್ಷಣೆಯಿತ್ತು ಕಾಂಚನಮಾಲೆಗೂ, ಅವನಿಗೂ ದ್ವಂದ್ವಗಳಾಗುತ್ತಿದ್ದು, ಅವು ವಿಕೋಪಕ್ಕೆ ಹೋಗಿ ಮನಸ್ಸು ಮುರಿದುಮಂಟು ಅವಳು ಅಧಿಕಾರಸೂತ್ರ ವಹಿಸಿದ ಕೆಲವು ಸಮಯದಲ್ಲೆ ಸಂಪರ್ಕವೂ ಕಡಿದುಹೋಯಿತು ಆದರೆ ಕೆಲವು ಮುಖ್ಯ ವಿಷಯಗಳಲ್ಲಿ ಸೇತುರಾಯನಿಗೆ ಅನುಕೂಲವಾಗುವ ರೀತಿ ಯಲ್ಲಿ ಆಕೆ ಆಟವಾಡಿದಳು ಆದರಿಂದ ವಾಮನರಾಯನ ಪತನ ಸಾಧ್ಯವಾಯಿತು ಚುನಾವಣೆಯ ಅಧಿಕಾರಿಗಳಿಗೆ ಪ್ರಜೆಗಳ ಪರವಾಗಿ ಬೆದರಿಕೆಯ ಪತ್ರಗಳನ್ನು ಬರೆಯಿಸಿದವಳು ಅವಳೇ 'ಇಂಥ ಇಂಥ ವರ ವಿಷಯದಲ್ಲಿ ಎಚ್ಚರವಾಗಿರು' ಎಂಬ ಸೂಚನೆಯನ್ನು ಸೇತು ರಾಯನಿಗೆ ಕೊಟ್ಟವಳು ಅವಳೇ ಆದರೆ ನೇರಾಗಿ ಸುದ್ದಿ ಕೊಡಲಿಲ್ಲ ಅವನಿಗೂ ಅವಳಿಂದಲೇ ಆದು ಬಂದಿತೆಂಬುದೂ ತಿಳಿಯದು. ಸೇತು ರಾಯನ ಜನಗಳು ಒಳಗೂ ಹೊಕ್ಕೂ, ಹೊರಗೂ ನಿಂತೂ ಈ ಅಧಿಕಾರಿಗಳನ್ನು ಇನ್ನಷ್ಟು ಭಯಕ್ಕೆ ಗುರಿಪಡಿಸಿದರು ಹಾಗೆ ಅವರು ತಟಸ್ಥರಾದುದರಿಂದಲೇ ಜನಮತ ಪ್ರಕಟವಾಗಿ ವಾಮನರಾಯನನ್ನು ಸೋಲಿಸಿತು ಆಗ ಅವನ ಸಿಟ್ಟು, ಉರಿಗಳು ಅಷ್ಟಿಷ್ಟಲ್ಲ "ನನ್ನ ಎಂಜಲು ತಿಂದು ದೊಡ್ಡದಾದ ನಾಯಿಗಳು ನನ್ನನ್ನೇ ಮರೆತುವು" ಎಂದು ಶಪಿಸಿದ ತಾಳ್ಮೆಗೆಟ್ಟು ಕೆಲವು ಅಧಿಕಾರಿಗಳನ್ನು ಕರೆದು ಬಯ್ದುಬಿಟ್ಟ.

"ಸ್ವಾಮಿಾ ನಿಮ್ಮ ಚುನಾವಣೆ, ನಮಗೆ ಗಲ್ಲಿನುಣೆಯಾದರೆ?" ಎಂದು ಅವರು ತಮಗೆ ಬಂದ ಬೆದರಿಕೆ ಕಾಗದಗಳನ್ನು ತೋರಿಸಿದರು ಅಷ್ಟರಲ್ಲಿ ಅವನೇ ಅಜ್ಞಾತವಾಸ ತೊಡಗಬೇಕಾಯಿತು

ಅರುಣಾಚಲಯ್ಯನವರು ಗದ್ದುಗೆಯನ್ನೇರಿದ್ದಂತು ಸರಿಯೆ ಅವರೆದುರಿನ ಸಮಸ್ಯೆಗಳು ನೂರಾರು, ಹಣದ ಅಭಾವ, ವಿಫಲ ಯೋಜನೆಗಳ ಸಮುದಾಯ, ಅಪೂರ್ಣಗೊಂಡ ಯೋಜನೆಗಳು, ಆಳುವವರ ವಿಷಯದಲ್ಲಿ ಜನರಿಗೆ ಹುಟ್ಟಿದ ತಾತ್ಸಾರ, ಎಲ್ಲವೂ ಸೇರಿ ಕತ್ತಲು ಕವಿದಿತ್ತು ಚುನಾವಣೆಯಿಂದ ಕಲಕಿದ ಧೂಳು ಕಣ್ಣೆದುರಿಗೆ ಅಡ್ಡವಾಗಿತ್ತು. ಆದರೂ ವಿನಯದಿಂದ ತಾವು ಯಾವು

ದರಲ್ಲೂ ತಜ್ಞರಲ್ಲವೆಂದು ತಿಳಿದು, ಸರಕಾರದ ಯಂತ್ರದ ಗಾಲಿಗೆ ಕೀಲೆಣ್ಣೆ ಸವರತೊಡಗಿದರು ವಿವಿಧ ಇಲಾಖೆಗಳ ಮುಖಂಡರನ್ನು ಕರೆಯಿಸಿಕೊಂಡು "ನಮ್ಮಲ್ಲಿ ಜನಕ್ಕೆ ನಂಬಿಕೆ ಬರುವುದಕ್ಕೆ, ಚುರುಕು ಹುಟ್ಟುವುದಕ್ಕೆ ಏನು ಮಾಡುತ್ತೀರಿ?" ಎಂದು ಕೇಳಿದರು ಅಲ್ಲಲ್ಲಿ ಕಚೇರಿಗಳಿಗೆ ಭೇಟಿಕೊಟ್ಟು, "ಯೋಗ್ಯತೆ, ದಕ್ಷತೆ ತೋರದವರಿಗೆ ನನ್ನ ಸಹಾನುಭೂತಿಯಿಲ್ಲ" ಎಂದು ಎಚ್ಚರಿಸಿದರು. ಅಧಿಕಾರಕ್ಕೆ ಬಂದ ಮೇಲೆ, ಸ್ವಾಭಾವಿಕವಾಗಿ ಸುತ್ತಲೂ ಕವಿಯತೊಡಗಿದ ಜನಗಳ ವಿಷಯದಲ್ಲಿ ಸಂಶಯ ತಾಳಿದರು ವಕಾಲತ್ತು ವಹಿಸಿಕೊಂಡು ಬಂದವರನ್ನು ಕಂಡಾಗ "ನೊಂದವರನ್ನೇ ಕಳುಹಿಸಿ" ಎಂದರು ತನ್ನ ಮಂತ್ರಿಮಂಡಳದವರೊಡನೆ ಕಲೆತು, ಬೆರೆತು, ಕಾರ್ಯ ವಿಸ್ತಾರ ತಿಳಿಸಿ, "ಇಡಿಯ ಯಂತ್ರವೇ ಕೆಟ್ಟದೆ ಆದರಿಂದಾಗಿ ಮಾಡುವ ಕೆಲಸ ದಲ್ಲಿ ಮುಕ್ಕಾಲು ಪಾಲು ವ್ಯರ್ಥವಾಗುತ್ತಿದೆ ಅದರ ಜಡತೆಯನ್ನೂ ಕೊಳೆಯನ್ನೂ ತೊಳೆಯಬೇಕು ಲಂಚ, ವಂಚನೆ ಹುಟ್ಟಡಗಬೇಕು ನೀವಿರುವುದು ಕಟ್ಟಡಗಳ ಅನಾವರಣ ಮಾಡುವುದಕ್ಕಲ್ಲ, ಸಭೆಗಳ ಅಧ್ಯಕ್ಷತೆ ನಡೆಸುವುದಕ್ಕಲ್ಲ ಈ ನಾಲ್ಕೈದು ವರ್ಷಗಳಲ್ಲಿ ಏನು ಮಾಡಿದಿರಿ ಎಂದು ಕೇಳಿದರೆ ನಮ್ಮ ಆತ್ಮಕ್ಕಾದರೂ ನಾವು ಉತ್ತರ ಹೇಳುವಂತಿರಬೇಕು" ಎಂದು ವಿನಯದಿಂದ ಬೋಧಿಸಿದರು. ಇದರಲ್ಲೇ ಆವರ ಮನಸ್ಸು ಲೀನವಾಯಿತು ಹಿಂದಿನವರು ತೊಡಗಿದ, ಅರ್ಧ ಮರ್ಧಮಾಡಿದ ನೀರಾವರಿ, ವಿದ್ಯುತ್ ಮೊದಲಾದ ಯೋಜನೆಗಳನ್ನು ಮುಗಿಸುವ ಹಟ ತೊಟ್ಟರು 'ಆಡಳಿತೆಯ ವೆಚ್ಚ ಕಡಮೆ ಮಾಡ ಬೇಕು, ಖರ್ಚಿನ ಹಳ್ಳ ತುಂಬಿಸುವುದಕ್ಕೆ ದಾರಿ ಹುಡುಕಬೇಕು, ಪ್ರಜೆಯ ಹೊಟ್ಟೆಯ ಹೋರಾಟದಲ್ಲಿ ಅವನಿಗಿರುವ ಮಿದುಳನ್ನು ಮರೆಯಬಾರದು, ಪ್ರಜಾಪ್ರಭುತ್ವ ಸಫಲವಾಗಲು ಸಾರ್ವತ್ರಿಕ ವಿದ್ಯಾಭ್ಯಾಸವೊಂದೇ ದಾರಿ' ಎಂದು ಅದಕ್ಕೆ ಮೊದಲನೆಯ ಸ್ಥಾನ ಕಲ್ಪಿಸಿದರು. 'ಮರದ ನೆರಳಿನಲ್ಲಾದರೂ ಸರಿಯೆ, ಶಾಲೆಯಿಲ್ಲದ ಹಳ್ಳಿಯಿರಬಾರದು' ಎಂಬ ಯೋಜನೆ ಹೊರಡಿಸಿದರು ಕಟ್ಟಡ ನಿರ್ಮಾಣಗಳಲ್ಲಿ ದುಂದುಗಾರಿಕೆ, ಪ್ರದರ್ಶನ ಬುದ್ಧಿಗಳನ್ನು ತಡೆದರು ಆಡಳಿತೆಯ ಯಂತ್ರ ಚೆನ್ನಾಗಿ ನಡೆಯುತ್ತಿದೆಯೇ ಇಲ್ಲವೇ ಎಂಬು

ಡನ್ನು ನೋಡಲಿಕ್ಕೆ ಪಂಚಮದಳವೊಂದನ್ನು ನಿರ್ಮಿಸಬೇಕಾಯಿತು. ಅದನ್ನು ಸ್ವತಂತ್ರವಾದ ಹೊರಗಣ ಸಂಸ್ಥೆಯನ್ನಾಗಿ ಮಾಡಿ, ಕಾಂಚನ ಮಾಲೆಯನ್ನು ಕರೆಯಿಸಿ, "ಇಷ್ಟು ಮಾಡುತ್ತೀರಾ? ನಿಮಗೆಲ್ಲಾ ಸೌಲಭ್ಯ ಕೊಡುತ್ತೇನೆ ಆಡಳಿತೆಯಲ್ಲಿ ಲಂಚ, ವಂಚನೆಗಳನ್ನು ತೋರಿಸಿಕೊಡುವ ಹೊಣೆ ನಿಮ್ಮದು" ಎಂದರು

ಅವಳ ಪಾಲಿಗೆ ಇದು ಅಧಿಕಾರವೂ ಅಲ್ಲ, ಅನಧಿಕಾರವೂ ಅಲ್ಲ. ತಾನು ಹಿಂದೆ ಅಧಿಕಾರದಲ್ಲಿದ್ದಳಾದುದರಿಂದ ಆದರ ಬಗೆ ತಿಳಿದಿದೆ. ಅವಳ ಮಾತಿಗೂ ಬೆಲೆಯಿದೆ ಹೊರಗಿನ ಜನಗಳೊಡನೆ ಬೆರೆತು, ಅವರಿಗೆ ಬರುವ ನೋವು ಎಲ್ಲಿಂದ ಹುಟ್ಟುತ್ತದೆ ಎಂದು ತಿಳಿಯುವುದಕ್ಕೆ ಅವಕಾಶವಿದೆ ಅರುಣಾಚಲಯ್ಯನವರ ಪ್ರಾಮಾಣಿಕತೆಯಲ್ಲಿ ವಿಶ್ವಾಸ ಮೊದಲೇ ಇದೆ ಅವಳ ಸಾಹಸಪ್ರಿಯ ಮನೋವೃತ್ತಿ ಅದು ಯೋಗ್ಯ ಕೆಲಸವೇ ಅನಿಸಿತು ಅವಳ ಈ ಸಂಸ್ಥೆಯ ಕೆಲಸ ಇಂಥದೆಂದು ನಿಶ್ಚಯವಾಗಿದ್ದರೂ, ಅದು ತಲೆಮರಸಿಕೊಂಡಿರಲು ತೊಟ್ಟ ಹೆಸರು ಬೇರೆ ಗ್ರಾಮ ಕೈಗಾರಿಕೆಗಳ ವಿಸ್ತರಣ, ಅದರ ಬಹಿರಂಗ ಕೆಲಸ, ಆದೂ ಅಮುಖ್ಯವಲ್ಲ ದೇಶದಲ್ಲಿ ಎಂಥ ಕೈಗಾರಿಕೆಗಳು, ಉದ್ಯಮಗಳು ಸಾಧ್ಯವಿದೆ ಎಂದು ತಿಳಿದು ಸಹಾಯಮಾಡುವುದು. ಅದಕ್ಕಿಂತ ಮುಖ್ಯವಾದ ರಹಸ್ಯದ ಕೆಲಸ, ದೇಶಾದ್ಯಂತವಾಗಿ ತುಂಬಿಕೊಂಡ ಲಂಚ, ವಂಚನೆಗಳನ್ನು ಗೊತ್ತುಹಚ್ಚಿ, ನಿಷ್ಕರುಣೆಯಿಂದ ದಂಡನೆಯ ಗಾಲಿಯನ್ನು ಉರುಳಿಸುವುದು. ಅವಳಿಗೆ ಈ ಸಮಸ್ಯೆಯ ನಿವಾರಣೆಯಲ್ಲಿ ಅರುಣಾಚಲಯ್ಯ ನಿರರ್ಗಳ ಸ್ವಾತಂತ್ರ್ಯ ಕೊಟ್ಟಿದ್ದರಿಂದ, ತನ್ನ ಅಧಿಕಾರದ ಕಾಲದಲ್ಲಿ ನಂಬಿಕೆಗೆ ಬಂದವರನ್ನು, ಹೊರಗಿನವರನ್ನು ಆಯ್ದುಕೊಂಡು ಕೆಲಸ ನಡೆಯಿಸುವುದಕ್ಕೆ ಸಾಧ್ಯವಾಯಿತು.

ಅವಳ ಈ ಸಂಸ್ಥೆಯ ಹೆಸರನ್ನು ಕೇಳಿ "ನಿನ್ನ ಯೋಗ್ಯತೆಗೆ ಈ ಕೆಲಸವೇ? ಏನು ಗ್ರಾಮ ಕೈಗಾರಿಕೆ ಇದೆ? ಮಾಡುವುದೇನು? ಮಾಡಬಹುದಾದ್ದೇನು? ಅರುಣಾಚಲಯ್ಯನವರಿಗೆ ಹಳೆಗಾಲದ ಮನೋವೃತ್ತಿ ಇನ್ನೂಹೋಗಿಲ್ಲ" ಎಂದು ಅವಳ ಅಭಿಮಾನಿಗಳನೇಕರು ಅಪಹಾಸ್ಯಮಾಡಿದ್ದುಂಟು. ಅವಳಿಗೆ ಮಾತ್ರ ಅದು ಬೇಕಿತ್ತು. ಸುಮ್ಮನೆ ಕುಳಿತಿರಲಾರಳು. ನಾಡಿನ ಆದ್ಯಂತ ಅನಧಿಕಾರಿ ವ್ಯಕ್ತಿಯಂತೆ

ಅಲೆದಾಡಿದಳು. ಪ್ರತಿ ಸಂದುಗೊಂದಗಳನ್ನು ಹೊಕ್ಕು ಹೊರಟಳು. ಅಧಿಕಾರದಲ್ಲಿದ್ದಾಗ ಕಾಣಿಸದಂಥ ನೂರಾರು ಕೊಳೆ ರಾಶಿಗಳು ಕಣ್ಣಿಗೆ ಕಾಣಿಸಿದುವು. ನೋಡುತ್ತಾ ನಡೆದಂತೆ, ನಡೆಯುವ ನೆಲವೇ ಕಾಣಿಸದೆ ಕೊಳೆಯೇ ಕಾಣಿಸತೊಡಗಿತು. ದಿನದಿನ ಕುತೂಹಲ ಹೆಚ್ಚಿತು. ಕೆದಕಿ ಕಾಣುವ ಆಶೆ ಏರಿತು

ತನ್ನ ಪರಿಶ್ರಮದ ಫಲವನ್ನು ಆಗಾಗ ಹೋಗಿ ಅರುಣಾಚಲಯ್ಯನವರಿಗೆ ತಿಳಿಸುತ್ತಾಳೆ, ಅದರ ವಿಸ್ತಾರವನ್ನು ಹೇಳುತ್ತಾಳೆ. "ಕೆಳಗೆ ತುಂಬಿದಷ್ಟೇ ಕೊಳೆ ಮೇಲೆ, ಮೇಲೆ ತುಂಬಿದಷ್ಟೇ ಕೆಳಗೆ" ಎಂದು ಮರುಗುತ್ತಾಳೆ,

"ಅದರಿಂದಲೇ ಈ ಜನಕ್ಕೆ ಮೋಕ್ಷ, ಕಷ್ಟ."

"ನೀವಷ್ಟು ನಿರಾಶರೇ ?"

"ನಾನು ನಿರಾಶನಲ್ಲ, ಕೆಲಸ ಅಷ್ಟು ಕಷ್ಟದ್ದು. ನಮ್ಮ ಈ ಆಡಳಿತೆಯ ಯಂತ್ರ ಚಲಿಸಲಾರದಷ್ಟು ಜಡವಾಗಿದೆ ಆಗುತ್ತಿರುವ ವೆಚ್ಚಕ್ಕೆ ಸಮನಾದ ಪ್ರಯೋಜನ ದೇಶಕ್ಕೆ ಸಿಗುತ್ತಲಿಲ್ಲ, ಮೇಲೆ ಕುಳಿತವರು ಅಡ್ಡದಾರಿಯಿಂದ ಹಣಗಳಿಸುವುದರಲ್ಲಿ ನಿರತರಾದರೆ ಕೆಳಗಿನವರಿಗೂ ಅದೇ ಮೇಲ್ಪಂಕ್ತಿಯಾಗುತ್ತದೆ ಹೀಗಾಗಿ ಈ ಕಿಲುಬು, ತುಕ್ಕು ಹೋಗುವ ತನಕ ಚೊಕ್ಕಟವಾದ ಅಡುಗೆ ಆಗುವಂತಿಲ್ಲ.

"ಹಾಗೆಯೇ ತೀರ ಸರಿಪಡಿಸುವುದಕ್ಕೆ ಹೋದರೆ, ಅರ್ಧದಷ್ಟಾದರೂ ಕಿತ್ತೊಗೆಯುವ ಸಾಮಗ್ರಿಗಳೇ "

"ಅಷ್ಟು ಜನ ಹೊಸಬರನ್ನು ಎಲ್ಲಿಂದ ತರಬೇಕು? ಎಲ್ಲರೂ ಇದೇ ಹವೆಯಲ್ಲಿ ಬೆಳೆದವರು. ಟೊಪ್ಪಿಯ ಬಣ್ಣ ಬದಲಾದರೆ ಸಾಲದು, ಹೃದಯದ ಬಣ್ಣ ಬದಲಾಗಬೇಕು "

"ನನ್ನನ್ನು ಕುರಿತು ಹೇಳಿದಮಾತೇ ? ನಾನು ಶ್ರಮವಾದಿಗಳ ಪಕ್ಷಪಾತಿಯೆಂದು ಕಾಣಿಸಿಯೇ ?"

"ನಿಜಕ್ಕೂ ಹೇಳಲೇ. ಅವರ ವಿಷಯದಲ್ಲಿ ನಿಮಗಿರುವ ಒಲವು ನೀವು ಅಡಗಿಸಿದರೂ ನನಗೆ ಕಾಣುತ್ತದೆ. ನಿಜವಾದ ಶ್ರಮಗಾರರ ಮೇಲೆ ನನಗೂ ಕನಿಕರವಿದೆ. ಅವರ ಸ್ಥಿತಿ ಸುಧಾರಿಸದೆ ದೇಶ ಒಳ್ಳೆಯದಾಗದು. ಆದ" "...ಗಾಯಿನ ಶ ನುವೇನು ? ಅವರ ಮುಖಂಡ

ರಲ್ಲಿ ಯಾರು ಶ್ರಮಜೀವಿಗಳು? ಇಂದು ಬಂಡವಳಗಾರರು ಶ್ರಮಜೀವಿಗಳ ಮೇಲೆ ಸವಾರಿ ಮಾಡಿದಂತೆ ನಾಳೆ ಇವರೂ ಮಾಡುವವರೇ. ಹಣದ ಸುಲಿಗೆಯನ್ನು ಒಬ್ಬರು ಮಾಡಿದರೆ ತಮ್ಮ ರಾಜಕೀಯಕ್ಕಾಗಿ ಅಜ್ಞಾನದ ಸುಲಿಗೆಯನ್ನು ಇನ್ನೊಬ್ಬರು ಮಾಡುತ್ತಿದ್ದಾರೆ"

"ಈಗ ಹಾಗಿರುವುದು ನಿಜ ಆದರೆ ಅವರ ಪಂಗಡದಲ್ಲಿ ಉಳಿದವರಿಗಿಂತ ಹೆಚ್ಚಿನ ಪ್ರಾಮಾಣಿಕತೆಯಿದೆ"

"ಪ್ರಾಮಾಣಿಕತೆ ಪಕ್ಷದ ವಿಷಯದಲ್ಲಿಯೋ? ಶ್ರಮಜೀವಿಗಳ ವಿಷಯದಲ್ಲಿಯೋ? ಅವರದು ಪ್ರಾಮಾಣಿಕತೆಗಿಂತ ಹೆಚ್ಚಾದ ಮೂರ್ಖಶ್ರದ್ಧೆ ದೇಶದಲ್ಲಿಯೇ ದುರ್ಲಭವಾದ ಪ್ರಾಮಾಣಿಕತೆ ಅವರ ಪಕ್ಷಕ್ಕೆ ಮೀಸಲು ಎನ್ನುತ್ತೀರಾ? ಅಂಥವರು ಎಣಿಸುವ ಸ್ವಾರ್ಥ, ಲಾಭಗಳಿಗೆ ಬೇರೆಯ ಬಣ್ಣವಷ್ಟೇ ಬಂದಿತ್ತು."

ಅನೇಕ ಬಾರಿ ಕಾಂಚನಮಾಲೆ ಅರುಣಾಚಲಯ್ಯನವರ ಮಾತಿಗೆ ಮುಗ್ಧಳಾಗುವುದುಂಟು ಹಲವುಬಾರಿ ಅವಳೊಡ್ಡುವ ಪ್ರಶ್ನೆಗಳಿಗೆ ಅವರು ಸಮಂಜಸ ಉತ್ತರ ಕೊಡಲಾರರು ಆದರೆ ಉಭಯತರಲ್ಲಿ ಪರಸ್ಪರ ಗೌರವ, ಅಭಿಮಾನ, ವಿಶ್ವಾಸಗಳು ಬೆಳೆಯುತ್ತ ಬಂದಿವೆ ತನ್ನ ಅಂತರಂಗದಲ್ಲಿ ಏನೇ ಇದ್ದರೂ, ಅರುಣಾಚಲಯ್ಯನವರು ಒಪ್ಪಿಸಿದ ನಂಬಿಕೆಯನ್ನು ಹಾಳುಮಾಡುವ ಇಚ್ಛೆ ಅವಳಲ್ಲಿಲ್ಲ. ಅವಳ ಚಟುವಟಿಕೆಯಿಂದಾಗಿ ಅನೇಕ ಪ್ರಮುಖ ಅಧಿಕಾರಿಗಳು ಸಿಕ್ಕಿಬೀಳತೊಡಗಿದ್ದಾರೆ ವಾಮನರಾಯನ ಅಧಿಕಾರದಲ್ಲಿ ಬೇಕಾದಂತೆ ಮಾಡಿದವರು ಈಗ ಬಹಿರಂಗವಾಗಿ ಕಳ್ಳತನ, ವಂಚನೆ ಮಾಡುವುದು ಕಷ್ಟ. ಮಾಡಿದರೆ ಸಿಕ್ಕಿಬೀಳುವುದು ಸುಲಭವೆಂಬ ಭಯಕ್ಕೊಳಗಾಗಿದ್ದಾರೆ

ಅವಳು ಎಷ್ಟೆಷ್ಟು ವಿಚಕ್ಷಣತೆಯಿಂದ ತನ್ನ ಕೆಲಸ ನಡೆಯಿಸುತ್ತ ಹೋದಳೋ, ಅಷ್ಟಷ್ಟು ಸಿಕ್ಕಿಬಿದ್ದ ನೌಕರರು, ಪದಚ್ಯುತಿಗೊಂಡವರು ದ್ವೇಷಿಗಳಾಗುತ್ತ ಬಂದರು ಇತ್ತ ವಿರೋಧಿ ಪಕ್ಷದವರಿಗೂ ತೃಪ್ತಿಯೆಂಬುದಿಲ್ಲ. ಹಿಂದಿನ ಮಂತ್ರಿ ಮಂಡಳದವರ ವಂಚನೆಗಳನ್ನು ಅದರಲ್ಲಿಯೂ ಚುನಾವಣೆಯಲ್ಲಿ ಪಕ್ಷ ವಹಿಸಿ ಕೆಲಸ ಮಾಡಿದ ಅಧಿಕಾರಿಗಳ ಮೇಲೆ ಏನೇನೋ ಆರೋಪ ಹೊರಿಸಬಹುದೋ, ಸಾಕ್ಷಿ

ಕೂಡಿಸಬಹುದೋ, ಅವನ್ನು ಕೂಡಿಸಿ ಸೇತುರಾಯ ಸೇಡು ತೀರಿಸಲು ಹೊರಟಿದ್ದ. ಅವರು ಚುಚ್ಚಿ ತೋರಿಸಿದ್ದನ್ನೆಲ್ಲ ವಿಚಾರಣೆ ಮಾಡದೆ ಹೋದರೆ "ಈ ಮಂತ್ರಿಮಂಡಲ ಹಾವು ಸಾಯದಂತೆ, ಕೋಲು ಮುರಿಯದಂತೆ ನಾಟಕವಾಡುತ್ತದೆ" ಎಂದು ಸಾರುವುದಕ್ಕೆ ಆತ ನಾಲಿಗೆ ಚಾಚಿಕೊಂಡೇ ಇದ್ದಾನೆ

ಅರುಣಾಚಲಯ್ಯನವರು ಒಂದು ವರ್ಷದಲ್ಲಿ ನಡೆಯಿಸಿದ ಕೆಲಸಗಳು ತೆಗಳುವಂತಿರಲಿಲ್ಲ. ಜಡವಾಗಿ ಸಾಗುತ್ತಿದ್ದ ಆಡಳಿತೆಯ ಯಂತ್ರ, ಭತ್ತೆ ಹೀರುವುದರಲ್ಲಿ ನಿರತರಾದ ನೌಕರರು, ತಿಂಗಳು ತಿಂಗಳಿಗೆ ಅಭಿವೃದ್ಧಿಯ ವರದಿ ಕೊಡಬೇಕಾಯಿತು ನೀರಕಟ್ಟೆ, ನೀರಾವರಿ ಕೆಲಸಗಳು ಚುರುಕಿನಿಂದ ಸಾಗಿದವು. ಈ ಕ್ಷೇತ್ರದಲ್ಲಿಯೂ ಕಾಂಚನಮಾಲೆಯ ಕಣ್ಣು ನೆಟ್ಟಿತ್ತು ಅಲ್ಲಿನ ಗುತ್ತಿಗೆಗಳಲ್ಲಿ, ವ್ಯವಹಾರಗಳಲ್ಲಿ, ಕೆಲಸಗಳಲ್ಲಿ ದುಂದುಗಾರಿಕೆ, ಆಲಸ್ಯ ಕಳ್ಳತನ ತುಂಬಿತ್ತು ಅಲ್ಲಿ ಸುರಿಯುತ್ತಿದ್ದ ಹಣ ಮರಳಿನ ಮೇಲೆ ಹೊಯ್ದ ನೀರಿನಂತೆ ಇಂಗಿ ಹೋಗುತ್ತಿತ್ತು ಎಲ್ಲರೂ–ಬಿಸಿಲು ಬಂದಾಗ ಚಳಿ ಕಾಯಿಸುವವರೇ ಅವಳ ಪರಿಶ್ರಮದಿಂದ ಸರಕಾರಿ ಗೋದಾಮುಗಳ ಕಾವಲು ಹೆಚ್ಚಿತು ಸುಳ್ಳು ಹಾಜರಿಗಳ ಪತ್ತೆಯಾಗತೊಡಗಿತು. ಹೊಸತಾಗಿ ಅವುದು ಮಾಡಿದ ಕೆಲಸಗಾರರಿಗ [illegible] ಹಳಬರಿಗೂ ಘರ್ಷಣೆಯುಂಟಾಯಿತು ಪೂರ್ಣವಾಗುವುದಕ್ಕೆ ತು [illegible]ವೇ ಕೆಲಸವುಳಿದ ಶೀಲವತಿಯ ಅಣೆಕಟ್ಟೆನಲ್ಲಿ ಉದ್ವಿಗ್ನ ವಾತಾವರಣ ಉಂಟಾಯಿತು ಅದಕ್ಕೆ ಹೊರಗಿಂದ ಬಂದ ಮುಖ ಬೇರೆ ಸಾವಿರಾರು ಮಂದಿ ಕೂಲಿಯಾಳುಗಳು ಸಂಪು ಹೂಡಿದರು ಅವರ ಬೆನ್ನಹಿಂದೆ ಅಸಂತುಷ್ಟ ಸರಕಾರಿ ನೌಕರರು ನಿಂತಿದ್ದರು

ಪ್ರಥಮ ಬಾರಿಗೆ ಸೇತುರಾಯನ ದಳಕ್ಕೂ, ಕಾಂಚನಮಾಲೆಯ ಕಣ್ಣುಗಳೆಣಿಸಿದವರಿಗೂ ಇಲ್ಲಿ ಪ್ರತ್ಯಕ್ಷ ಸಂಗ್ರಾಮವೇ ತೊಡಗಿತು ಈ ಸ್ಥಳದಲ್ಲಿ ನಮ್ಮ ಪೂರ್ವಪರಿಚಿತ ಮಾನಪ್ಪ, ಕೆಲಸಗಾರರ ಮುಖಂಡನಾಗಿ ನೆಲೆಸಿದ್ದ ಸಂಪುಗಾರರ ಪರವಾಗಿ ಅವನ ವಾದವೆಂದರೆ–ವೇತನ ಹೆಚ್ಚಿಸುವುದು, ಶ್ರಮದ ಗಂಟೆಗಳನ್ನು ತಗ್ಗಿಸುವುದು ಅದಕ್ಕೂ ಹೆಚ್ಚಾಗಿ ಹೊಸತಾಗಿ ಕಾವಲಿಗೆ ತಂದಿರಿಸಿದ್ದ, 'ಘೂರ್ಕ' ಕಾವಲು

ಗಾರರನ್ನು ತೆಗೆಯುವುದು ಅಲ್ಲಿನ ಗೋದಾಮುಗಳ ಕಳ್ಳತನ ತಪ್ಪಿಸುವುದಕ್ಕೂ, ಕಳ್ಳ ಹಾಜರಿಗಳನ್ನು ತಪ್ಪಿಸುವುದಕ್ಕೂ ಇಂಥ ಕಾವಲುಗಾರರು ಅವರಿಗೆ ತಡೆಯಾಗಿದ್ದರು ಇದರಿಂದ ಮೊದಲನೆಯ ಕಣ್ಣು ಅವರ ಮೇಲೆ ಅವರೇ ಬೇಡವೆಂದು ಬೇಡಿಕೆಯನ್ನು ಸಲ್ಲಿಸದೆ ಹಳೆಯ ಕಾವಲುಗಾರರನ್ನು ತೆಗೆದುದು ತಪ್ಪು, ಮೊದಲಿನವರೇ ಇರಬೇಕು ಎಂಬ ವಾದ ಮುಖ್ಯವಾಗಿತ್ತು. ಉಳಿದ ಬೇಡಿಕೆಗಳು ನೆಪಕ್ಕೆ. ಕಾಂಚನಮಾಲೆ ತಾನು ನಚ್ಚಿದ್ದ ವಿಶ್ವಾಸಿ ನೌಕರರಿಂದ ಈ ಸಂಪಿಗೆ ನೌಕರ ವರ್ಗದಲ್ಲಿ ಯಾರ್ಯಾರ ಬೆಂಬಲವಿದೆಯೆಂದು ತಿಳಿದು, ಅವರನ್ನು ವರ್ಗ ಮಾಡಿಸಿ ತಕ್ಕ ವಿಚಾರಣೆಗೆ ಏರ್ಪಾಟು ಮಾಡಿದಳು ಆ ವಿಚಾರಣೆಯಲ್ಲಿ ದೊರೆತ ಸಾಕ್ಷ್ಯಗಳಿಂದ ಹಲವಾರು ವಿಚಿತ್ರಾನುಭವಗಳು ಬಂದುವು ಅಲ್ಲಿಗೆ ಬರುತ್ತಿದ್ದ ಸಾವಿರಾರು ಸಿಮೆಂಟು ಚೀಲಗಳು, ಭೀಮನೂರು ನಿಲ್ದಾಣದಿಂದಲೇ, ಅಡ್ಡದಾರಿ ಹಿಡಿದು ವ್ಯಾಪಾರಿಗಳನ್ನು ಸೇರುತ್ತಿದ್ದ ದೊಡ್ಡ ಪ್ರಕರಣ ಬಯಲಿಗೆ ಬಂದಿತು ಅದಂತೂ ತುಂಬ ನೋವಿಗೂ, ವಿನೋದಕ್ಕೂ ಅವಕಾಶ ಕೊಟ್ಟ ಪ್ರಕರಣವಾಗಿತ್ತು

ಒಂದು ದಿನ ಕಾಂಚನಮಾಲೆ ತನ್ನ ಪ್ರವಾಸವೊಂದರಲ್ಲಿ ಭೀಮನೂರಿನಿಂದ ತುಸು ದೂರದ ಚಿನ್ನಳ್ಳಿಯ ಡಾಕ್ ಬಂಗಲೆಯೊಂದರಲ್ಲಿ ಉಳಿಯಬೇಕಾಯಿತು ಅದೊಂದು ಸಾಮಾನ್ಯ ಹಳ್ಳಿ, ಪೇಟೆಗಳಿಂದ ದೂರವಾಗಿತ್ತು ಸಂಪತ್ತಿನ ಲಕ್ಷಣವಿಲ್ಲದ ಊರಾಗಿತ್ತು. ಅವಳು ಇಳಿದುಕೊಂಡ ಬಂಗಲೆಯ ಸಮೀಪದಲ್ಲೊಂದು ವಿಶಾಲ ಬಯಲಿತ್ತು. ಅಲ್ಲೊಂದು ಭವ್ಯ ಸದನ ನಿರ್ಮಾಣವಾಗುತ್ತಿತ್ತು. ಇಂಥ ಬಡ ಊರಿನಲ್ಲಿ ಇಷ್ಟು ಹಣ ವೆಚ್ಚ ಮಾಡಿ ಇಷ್ಟು ದೊಡ್ಡ ಮನೆಯನ್ನು ಯಾರು ಕಟ್ಟುತ್ತಿದ್ದಾರೆ? ಎಂಬ ಕುತೂಹಲ ಅವಳಲ್ಲಿ ಕೆರಳಿತು. ಊರ ಜನಗಳನ್ನು ವಿಚಾರಿಸಿದಳು "ಅದೇ ? ಒಬ್ಬ ನಾಮಧಾರಿಗಳದು" ಎಂಬ ಉತ್ತರ ದೊರೆಯಿತು

"ಅವರೇನು ಜಮೀನ್ದಾರರೇ ?"

"ಅವರ ಮಾವ ಈ ಊರಿನವರು, ನಮ್ಮಂತೆ ಸಾಮಾನ್ಯರು. ಆದರೆ ಅವರ ಅಳಿಯನಿಗೇನೋ ದೊಡ್ಡ ಕೆಲಸವಿದೆಯಂತೆ ಎಂಜ

ನಿಯರೋ ಏನೋ ಅಂತೆ ತುಂಬ ಹಣವಂದಿಗರು ತನ್ನ ಆ ಅಳಿಯನಿಗಾಗಿ ಮಾವ ಇದನ್ನು ಕಟ್ಟಿಸುತ್ತಿದ್ದಾರೆ."

"ಯಾರಪ್ಪ, ಆ ಅಧಿಕಾರಿಗಳು? ಪೇಟೆಯಲ್ಲಿ ಕಟ್ಟಿಸಿದರಾದರೂ ಇದಕ್ಕೊಂದು ಬೆಲೆ" ಎಂದಳು.

"ಅಗ್ಗದ ದುಡ್ಡಿರಬಹುದು" ಎಂದ ಒಬ್ಬ.

ಆಕೆ ಅದನ್ನು ನೆನಪಿನಲ್ಲೇ ಇರಿಸಿಕೊಂಡು, ಅದರ ಬೇರು ಬುಡಗಳನ್ನು ಕೆದಕ ತೊಡಗಿದಳು ಆ ವ್ಯಕ್ತಿ ಎಂಜನಿಯರಾಗಿರಲಿಲ್ಲ, ಶೀಲವತಿ ನೀರ್ಕಟ್ಟೆಯ ತಾಣದಲ್ಲಿ ಒಬ್ಬ ಸಾಮಾನ್ಯ ಮುನುಷಿಯಾಗಿದ್ದ–ಹೆಸರು ಶೇಷಾಚಲಯ್ಯನೆಂದು ಸಂಗತಿಯನ್ನು ಇನ್ನೂ ಕೆಣಕಿ ನೋಡಿದಾಗ–ಆತನ ಮಾವ ಬಡವರು! ಒಬ್ಬಳೇ ಮಗಳು ಅಳಿಯನ ದುಡಿಮೆಯಿಂದ ಬೇಕಷ್ಟು ಆಸ್ತಿ, ನಗದು ಹಣ ಮಾಡಿಕೊಂಡಿದ್ದಾರೆಂದು ತಿಳಿಯಿತು ಆ ಅಳಿಯ ನೀರ್ಕಟೆಯ ಉಗ್ರಾಣದ ಹೆಡ್ ಮುನುಷಿಯಾಗಿದ್ದುದರಿಂದ ಉಗ್ರಾಣದ ಅಂಕೆ ಸಂಖ್ಯೆಗಳಲ್ಲಿ ಸುಳ್ಳು ಜಮಾ ಖರ್ಚು ಬರೆದು ಸಿಮೆಂಟು, ಕಬ್ಬಿಣಗಳನ್ನು ಭೀಮನೂರಿನ ವ್ಯಾಪಾರಿಗಳ ಮೂಲಕ ಕಳ್ಳಸಂತೆಯಲ್ಲಿ ಮಾರಿ ಶ್ರೀಮಂತನಾಗುತ್ತಿದ್ದುದು ತಿಳಿಯಿತು.

ಊರಿನ ಗೌಡರೊಬ್ಬರು ಅದನ್ನು ವಿವರವಾಗಿ ಬಣ್ಣಿಸುತ್ತ "ಈಗಿನ ಕಾಲದಲ್ಲಿ ದುಡ್ಡು ಮಾಡದವರು ಯಾರು?" ಎಂದು ಇನ್ನೂ ಹತ್ತು ಹೆಸರು ಹೇಳಿದ ಆತನ ಮನಸ್ಸಿನಲ್ಲಿ "ಸಂಪಾದನೆಗೆ ಅವಕಾಶವಿದ್ದಾಗ ಪ್ರಾಮಾಣಿಕನಾಗಿಯೇ ಕುಳಿತಿರುವ ವ್ಯಕ್ತಿ ಬದುಕುವುದಕ್ಕೆ ನಾಲಾಯಕ್" ಎಂಬಂತಿತ್ತು. ಆಕೆ ಆ ಗ್ರಾಮವನ್ನು ಬಿಟ್ಟು ಭೀಮನೂರನ್ನು ಸೇರಿ, ಗ್ರಾಮ ಕೈಗಾರಿಕೆಗಳ ನೆಪದಿಂದ ಅಲ್ಲಿ ಒಂದು ವಾರ ಕಳೆದಳು. ಸಿಮೆಂಟು ಕಬ್ಬಿಣಗಳ ಕಳ್ಳ ಸಾಗಾಟ, ಮಾರಾಟಗಳ ವಿವರ ಹುಡುಕಿದಳು, ಶೇಷಾಚಲಯ್ಯನ ಮಾವನ ಸಂಪತ್ತಿನ ವಿಸ್ತಾರ ತಿಳಿದಳು. ಅಲ್ಲಿಂದ ನಗರಕ್ಕೆ ಧಾವಿಸಿ ಅರುಣಾಚಲಯ್ಯನವರೊಡನೆ ವಿವರಿಸುತ್ತಾ "ಇಂಥ ಎಷ್ಟು ಹೆಗ್ಗಣಗಳು ನಿಮ್ಮ ನೀರ್ಕಟ್ಟೆಯ ಪ್ರೊಜೆಕ್ಟಿನಲ್ಲಿ ಸೇರಿವೆಯೋ" ಎಂದಳು ವಿನೋದವಾಗಿ.

"ನನ್ನ ಅಲ್ಲ—ನಿಮ್ಮ ಅದೂ ಅಲ್ಲ–ವಾಮನರಾಯನ" ಎಂದರು

ಅವರು. ಕಾಂಚನಮಾಲೆ ತನ್ನ ಹೊಸ ಶೋಧನೆಗಳಿಂದ ದೊರೆತ ಹೆಸರುಗಳ ಪಟ್ಟಿಯನ್ನು ಕೊಟ್ಟಾಗ ಅದರಲ್ಲಿ ಹಲವು ಉಚ್ಚ ಅಧಿಕಾರ ಜತೆಗೆ ಉಗ್ರಾಣದ ಮುನಿಷಿ ಶೇಷಾಚಲನ ಹೆಸರನ್ನು ಕಂಡಾಗ ಒಂದು ಕ್ಷಣ ಮೌನ ತಾಳಿದರು

"ಮುಂದೆ ನೋಡುತ್ತೀರಾ" ಎಂದು ಕೇಳಿದಳು ಕಾಂಚನಮಾಲೆ

ಅದಕ್ಕೆ "ಈ ಹೆಸರು ನೋಡಿದಿರಾ?" ಎಂದು, ಶೇಷಾಚಲಯ್ಯನ ಹೆಸರಿನ ಮೇಲೆ ಬೆರಳಿರಿಸಿದಳು

"ಅವನೇ!" ಎಂದರು ಆಕೆ ಕುತೂಹಲದ ಕಣ್ಣುಗಳಿಂದ ನೋಡುತ್ತಾ "ಯಾಕೆ ಅನುಮಾನ?" ಎಂದು ಕೇಳಿದಳು

"ನೀವು ಗಟ್ಟಿಗರು ನನ್ನನ್ನು ತೂಕ ಮಾಡುವುದಕ್ಕೆ ಹೊರಟು ಯಶಸ್ವಿಯಾದಿರಿ. ಆದರೆ ನಾನು ಸೋಲುವುದಿಲ್ಲ"

ಕಾಂಚನಮಾಲೆಗೆ ಆ ಮಾತು ಕೇಳಿ ಗಡಿಬಿಡಿಯಾಯಿತು. 'ತಾನೆಲ್ಲಿ ತಪ್ಪಿದೆ? ಇಷ್ಟೆಲ್ಲ ಅಧಿಕಾರಿಗಳನ್ನು ಕಿತ್ತೊಗೆಯುವುದು ಸಾಧ್ಯವೇ–ಎಂದು ಕೇಳುತ್ತಾರೆಯೋ' ಎಂದು ವಿಚಾರಮಾಡಿ "ನಿಮ್ಮ ಮಾತಿನ ಅರ್ಥವಾಗಲಿಲ್ಲ" ಎಂದಳು

"ಒಳ್ಳೆಯ ಕೆಲಸ ಮಾಡಿದಿರಿ ಇವನಾರೆಂದು ಗೊತ್ತಿದೆಯಾ?"

"ಯಾರಾದರೇನು? ಸಾಮಾನ್ಯ ಮನುಷ್ಯ ದೊಡ್ಡವನಾದರೂ ಸರಿಯೆ. ಅವನೊಬ್ಬ ದೊಡ್ಡ ಹೆಗ್ಗಣ–ಅಷ್ಟು ತಿಳಿದಿದೆ"

"ಅದನ್ನಲ್ಲ ನಾನು ಕೇಳಿದ್ದು–ಅವನು ಯಾರು ಗೊತ್ತಿದೆಯೇ ಎಂದೆ"

"ಶೇಷಾಚಲಯ್ಯನೇ? ಇಲ್ಲ. ಭೀಮನೂರು ಬಳಿಯಲ್ಲಿ ಚಿನ್ನಳ್ಳಿ ಎಂಬಲ್ಲಿ ಅವರ ಮಾವ ವೆಂಕಟರಾಮಯ್ಯ ಇದ್ದಾರೆ ಆ ಊರಿಗೆ ಸೇರಿದವರು ಅವರ ಅಳಿಯ"

"ನನ್ನ ಅಳಿಯನೂ ಹೌದು, ನನ್ನ ತಂಗಿಯ ಮಗ."

"ಏನು ಮಾಡಬೇಕನ್ನುತ್ತೀರಿ?"

"ಅವನಿಗೊಂದು ಬೇರೆ ನ್ಯಾಯವೇ? ಆ ಸಂಗತಿ ನಿಮಗೆ ತಿಳಿದೇ ತೋರಿಸಿದಿರಿ ಎಂದು ನಾನು ಊಹಿಸಿದೆ. ಅವನು ನನ್ನ ಅಳಿಯನಾದರೇನು? ಯಾರಾದರೇನು? ಮೊದಲು ಅವನನ್ನು

ಕೆಲಸದಿಂದ ಅಮಾನತ್ತು ಮಾಡಿ, ಆಸ್ತಿಪಾಸ್ತಿಗಳ ರುಜುವಾತು ಹೊರಡಿಸಬೇಕು. ಊರಿನ ನಿಷ್ಠುರ ಹೊರುವುದಕ್ಕೆ ಸಿದ್ಧನಾದವನು ಆಪ್ತರ ನಿಷ್ಠುರ ಹೊರುವುದಕ್ಕೂ ಸಿದ್ಧನಿರಬೇಕು" ಎಂದಂದು ಉಳಿದ ಹೆಸರುಗಳನ್ನು ಪರಿಶೀಲಿಸುತ್ತಾ ಪ್ರತಿಯೊಬ್ಬರ ಮೇಲಿನ ಆರೋಪ, ವಿವರಗಳನ್ನು ಚರ್ಚಿಸ ತೊಡಗಿದರು

ಈ ಒಂದು ಘಟನೆಯಿಂದ ಕಾಂಚನಮಾಲೆಗೆ ಅವರಲ್ಲಿದ್ದ ಭಕ್ತಿ ಇಮ್ಮಡಿಸಿತು , ಇನ್ನಷ್ಟು ಗಾಢವಾಯಿತು. ಸಾಮಾನ್ಯ ವ್ಯಕ್ತಿಯಾಗಿ ಕಾಣಿಸುವ ಅರುಣಾಚಲಯ್ಯನವರ ಗಾತ್ರಕ್ಕೂ, ವಾಮನರಾಯನ ಗಾತ್ರಕ್ಕೂ ಇರುವ ಅಂತರ ಹೊಡೆದು ಕಂಡಿತು ಅವರ ಬೆಂಬಲದಿಂದ ಅಷ್ಟೊಂದು ಮಂದಿಯ ವಿಚಾರಣೆಯು ಮುಂದುವರಿಯಿತು ಅದೇ ವೇಳೆಗೆ ತೊಡಗಿದ ಶೀಲವತಿ ನೀರ್ಕಟ್ಟೆಯ ಶ್ರಮಗಾರರ ಸಂಪು ಆವಳನ್ನು ಬೆರಗು ಗೊಳಿಸಿತು. ಅದರ ಮೂಲವನ್ನೂ ಬಲ್ಲಳು. ಕೆಲವೇ ತಿಂಗಳು ಆ ಕೆಲಸ ನಿಂತುದಾದರೆ, ನಾಡಿಗೆ ಅದರಿಂದ ದೊರೆ ಯುವ ಒಂದು ವರ್ಷದ ಲಾಭವೇ ಹೋಗುತ್ತದೆ ಎಂಬುದನ್ನು ಬಲ್ಲಳು. 'ಆ ಮುಷ್ಕರವನ್ನು ಮುರಿಯಬೇಕು, ಹೊಸ ಕೆಲಸಗಾರರನ್ನು ತಂದು ಕೆಲಸ ಪೂರ್ತಿ ಗೊಳಿಸಬೇಕು. ಅದರ ಹಿಂದೆ ಸೇತುರಾಯನ ಕೈವಾಡ ಇದೆ ಎಂಬುದನ್ನರಿತು ಅವನಿಗೂ ಸುದ್ದಿ ಕಳುಹಿಸಿದಳು. "ಸಮಾಜ ವಿಘಾತಕರಿಗೆ ನಿಮ್ಮ ಬೆಂಬಲವೇ? ಈ ಸಂಪು ಹೆಚ್ಚಿನ ವೇತನ ಕ್ಕಾಗಿಯೇ ? ಇಲ್ಲವೆ ಕೆಲಸಗಾರರ ಕಳ್ಳತನ ಮುಚ್ಚುವುದಕ್ಕೇ? ಎಸೆಂಬ್ಲಿಯಲ್ಲಿ ಅಪ್ರಮಾಣಿಕತೆಗೆ ವಿರುದ್ಧವಾಗಿ ಕಾದಾಡುವ ನೀವು ಈ ಸಂಪಿಗೆ ಅವಕಾಶ ಕೊಟ್ಟುದೇಕೆ ? ಈ ದೇಶ ನಿಮ್ಮದಲ್ಲವೇ ? ನೀವು ರಸ್ತ್ಯದಲ್ಲಿ ಹುಟ್ಟಿದವರೆಂದು ನಾನು ತಿಳಿಯಬೇಕೇ " ಎಂದು ನೇರವಾದ ಪತ್ರವನ್ನೇ ಬರೆದು ಕಳುಹಿಸಿದಳು.

ಅದಕ್ಕೆ ಪ್ರತ್ಯುತ್ತರ ಬರಲಿಲ್ಲ. ಗುಲಾಲಿ ಪಡೆಯುವರ ಪೋಷಣೆ ಯಿಂದ ಸಂಪು ವಿಸ್ತರಿಸಿತು ಸರಕಾರ ಬಗ್ಗುವುದಿಲ್ಲವೆಂದು ಕಾಣಿಸಿ ದಾಗ, ಏನೇನೋ ಸುಳ್ಳುಸುದ್ದಿ ಹರಡಿ, ಶ್ರಮಗಾರರು ತಂತಮ್ಮ ಊರುಗಳಿಗೆ ವಲಸೆ ಹೋಗಲು ಪ್ರೇರಣೆ ಕೊಟ್ಟರು. ಸಾವಿರಾರು ಜನ ದುಡಿಯುವ ನೀರ್ಕಟ್ಟೆಯ ಕ್ಷೇತ್ರ ನಿರ್ಜನವಾಗಿ, ದೈತ್ಯ ಶವದಂತೆ

ಚೇತನವಿಲ್ಲದೆ ಬಿದ್ದಿತು. ಸೇತುರಾಯನ ಹೆಮ್ಮೆ ಬಲಿಯಿತು. ತನ್ನ ಬಲದ ಅರಿವಾಯಿತು ದೇಶಕ್ಕೆ ಅನ್ಯಾಯವಾಯಿತೆಂದು ತೋರುವ ಬದಲು "ಇಷ್ಟು ಸಾವಿರ ಜನಗಳು ತಾವಂದಂತೆ ಇದ್ದಾರೆ" ಎಂಬ ಪಕ್ಷಪ್ರಾಬಲ್ಯದ ಅಮಲು ನೆತ್ತಿಗೇರಿತು.

ಸಂಪಿನಿಂದ ಉಂಟಾದ ಪರಿಸ್ಥಿತಿ ನರಕಾರಕ್ಕೂ, ಕಾಂಚನ ಮಾಲೆಯ ಹೆಮ್ಮೆಗೂ ನೇರಾದ ಏಟು ಕೊಟ್ಟಂತಾಯಿತು ಅದರಿಂದ ನಾಡಿಗೆಷ್ಟು ಹಾನಿಯಾದೀತೆಂದು ಸೇತುರಾಯ ತಿಳಿಯಲಾರನಾದರೂ ಆವನ ವಿಷಯದಲ್ಲಿ ಅವಳ ಮನಸ್ಸು ಕಠಿಣವಾಯಿತು ವಿಪ್ಲವಕ್ಕಾಗಿ ವಿಪ್ಲವ, ಕ್ರಾಂತಿಗಾಗಿ ಕ್ರಾಂತಿ– ಇದು ಇವರ ಹವ್ಯಾಸ ಜಗಳ ಹೆಚ್ಚಿಸಿ, ಅನಾಯಕತ್ವ ಬೆಳೆಯಿಸಿ, ಎಲ್ಲರಲ್ಲಿಯೂ ಭಯ ಮೂಡಿಸಿ, ಅನಂತರ ಅಧಿಕಾರಕ್ಕೇರುವ ಗುಲಾಲಿ ದಳದ ನೀತಿಯು ಅಸಹ್ಯ ವೆನಿಸಿತು.

ಅನೇಕ ಬಾರಿ ಮನಸ್ಸಿನಲ್ಲಿ ಸಂಶಯ ಮೂಡುತ್ತದೆ–ಇಂಥಾ ದಾರಿಗಳಲ್ಲಿ ಸರಿದ ಜನ ರಾಷ್ಟ್ರವನ್ನು ಕಟ್ಟಬಲ್ಲರೇ–ಎಂದು ಅನುಮಾನ ವಾಗುತ್ತದೆ ಅದಕ್ಕೆ ಪ್ರತಿಯಾಗಿ ರಷ್ಯದ ಮಹಾ ಯೋಜನೆಗಳು ಕಾಣಿಸುತ್ತವೆ ರೀತಿಗೂ, ಆದರ್ಶಕ್ಕೂ ಸಂಬಂಧವಿಲ್ಲವೆಂಬ ಮಾತು ನಿಜವೇ ? ಅರುಣಾಚಲಯ್ಯನವರಂತೆ, ಗಾಂಧಿಯವರಂತೆ ಗುರಿ ಮತ್ತು ದಾರಿ ಒಂದೇ ಆಗಿರಬೇಕೆಂಬುದು ಮಂಕುತನವಲ್ಲವೇ–ಎಂಬ ಸಂಶಯವು ಉದಯಿಸುತ್ತದೆ ಆದರೆ ಈ ಸಂಪು ತನಗೆ ಎದುರಾದ ಸಮಸ್ಯೆ, ತನ್ನ ಸಂಶೋಧನೆಗಳ ಪ್ರತಿಕ್ರಿಯೆ. ಅದರಿಂದ ನೀರ್ಕಟ್ಟೆ ಈ ವರ್ಷ ಪೂರ್ಣವಾಗದೆ ಹೋದರೆ ಇನ್ನೂ ಒಂದು ವರ್ಷಕಾಲ ಕಾಯ ಬೇಕು ನಾಳೆ ದಿನ ತಮ್ಮ ಕಳ್ಳ ಸಹೋದ್ಯೋಗಿಗಳನ್ನು ಕಳೆದು ಕೊಂಡ ಇತರ ನೌಕರರು ಇವರಂತೆ ಸಂಪು ಹೂಡಿದರೆ ದೇಶದ ಗತಿ ಯೇನು–ಎಂಬ ಚಿಂತೆ ಬಲವಾಯಿತು ನಿಜ–ಮುಷ್ಕರ, ಸಂಪು, ಸತ್ಯಾಗ್ರಹಗಳು ಮಾತಿಗೆ ಸುಲಭ ನ್ಯಾಯ ಸಾಧನೆಗೂ, ಅದರಂತೆ ಸ್ವಾರ್ಥಸಾಧನೆಗೂ ಅವು ಪ್ರಬಲ ಆಯುಧಗಳೇ ಆದರೆ ಒಮ್ಮೆ ಅವುಗಳ ರುಚಿ ನೋಡಿದ ವ್ಯಕ್ತಿಯು ಅವನ್ನು ಸ್ವಾರ್ಥವಿಲ್ಲದೆ ಬಳಸು ತ್ತಾನೆ ಎಂಬ ನಿಶ್ಚಯವೆಲ್ಲಿ ?

ಈ ಮಾತನ್ನು ನೆನೆದಾಗ ಹಿಂದಣ ವಿಧ್ವಂಸಕ ಚಳವಳಗಳ ನೆನಪೂ ಆಯಿತು ಬ್ರಿಟಿಷರ ಮೇಲಿನ ದ್ವೇಷವನ್ನು ಸ್ವಲಾಭಕ್ಕಾಗಿ ತಿರುಗಿಸಿಕೊಂಡವರು ಎಷ್ಟಿಲ್ಲ ಸೇತುರಾಯ ಕಲಿಸಿದ ಪಾಠ ಎಷ್ಟು ಜನಕ್ಕೆ ಖಾಸಗಿ ಲಾಭದ ದಾರಿ ತೋರಿಸಲಿಲ್ಲ ಒಂದು ಕಾಲದಲ್ಲಿ ದರೋಡೆಯ ಹೆಸರಿಲ್ಲದ ಗೊಂಡಾರಣ್ಯದಲ್ಲಿ ಅನಂತರ ಎಷ್ಟು ಕೊಲೆ, ಸುಲಿಗೆಗಳಾದುವು ?

ಹೀಗೆ ಕಾಂಚನಮಾಲೆ ಎಷ್ಟೊಂದು ಮನಸ್ಸಿನ ಜಂಜಾಟ, ತಳ ಮಳಗಳಿಗೆ ಗುರಿಯಾದಳೋ ಅಷ್ಟೇ ಅರುಣಾಚಲಯ್ಯನವರು ವ್ಯಕ್ತಿಯಾಗಿಯೂ, ಪ್ರಧಾನಿಯಾಗಿಯೂ ತಳಮಳಕ್ಕೆ ಗುರಿಯಾದರು ಭೀಮನೂರಿನ ಲಂಚ, ವಂಚನೆಯ ಪ್ರಕರಣಗಳನ್ನು ವಿಶೇಷ ನ್ಯಾಯಾಲಯಕ್ಕೆ ಗುರಿಪಡಿಸಬೇಕಾಯಿತು ಅದರಿಂದ ಅವರ ವ್ಯಕ್ತಿತ್ವವನ್ನೇ ತೂಕಕ್ಕಿಡುವ ಸಂದರ್ಭ ಒದಗಿತು

ಶೇಷಾಚಲಯ್ಯನ ತಾಯಿ, ಅವರ ತಂಗಿ ಗಾಬರಿಯಿಂದ ಬಂದು ಮೊರೆಯಿಟ್ಟರು , ಆತನೂ ಬಂದ , ಬಂಧು ಬಾಂಧವರೂ ಬಂದರು ನೇರಾಗಿಯೂ, ಸೊಸೆಯ ಮೂಲಕವೂ, ಅವರ ಮನಸ್ಸನ್ನು ಮಿದು ಮಾಡುವ ಪ್ರಯತ್ನಗಳಾದುವು ಅದಕ್ಕೆ ಅರುಣಾಚಲಯ್ಯನವರು "ಅದೊಂದು ವಿಷಯದಲ್ಲಿ ನಾನು ಬಂಧುವೆಂಬುದನ್ನು ಮರೆತುಬಿಡಿ , ಕರುಣೆಯಿಲ್ಲದ ಕಟುಕ ಎಂದು ತಿಳಿಯಿರಿ" ಎಂದರು

"ಈಗಿನ ಕಾಲದಲ್ಲಿ ಲಂಚ, ವಂಚನೆಮಾಡದವರು ಯಾರಿದ್ದಾರೆ ? ಒಬ್ಬನು ಹೆಚ್ಚು, ಒಬ್ಬನು ಕಮ್ಮಿ ಒಮ್ಮೆ ಇವನು ತಪ್ಪಿ ಬಿದ್ದ. ತಪ್ಪಿದವನನ್ನು ಕ್ಷಮಿಸಬೇಡವೇ ?" ಎಂದು ಕಣ್ಣೀರಿಟ್ಟು ಕೇಳಿದಳು ಅವರ ತಂಗಿ.

"ಹೌದು, ಹೌದು–ಲಂಚ, ಅನ್ಯಾಯ ಮಾಡದವರು ಕಡಮೆ ಆದರೆ ಮಾಡಿದ್ದು ದಕ್ಕುತ್ತದೆ ಎಂದು ಜನ ತಿಳಿದರೆ ದೇಶ ಉಳಿಯಬೇಕು ಹೇಗೆ ? ಇದು ನನಗಾದ ಅನ್ಯಾಯವಲ್ಲ , ನಾನು ಕ್ಷಮಿಸುವ ಮಾತೂ ಇಲ್ಲ" ಎಂದರು

ಅರುಣಾಚಲಯ್ಯನವರು ಇದರಿಂದ ಬಂಧುಗಳ ಪಾಲಿಗೆ ನಿಷ್ಠುರಿಗಳಾದರು. ಸೇತುರಾಯನ ಪಾಲಿಗೆ ಇದೊಂದು ವಿನೋದ ಪ್ರಕರ

ಣವೇ ಆಯಿತು ಅವನ 'ಗುಲಾಲಿ ತಾರೆ' ಒಂದು ದಿನ ದೊಡ್ಡ ಅಕ್ಷರಗಳಲ್ಲಿ 'ಪ್ರಧಾನಿಗಳ ಅಳಿಯಂದಿರು ಸಿಮೆಂಟು ಛಪಾವಣೆಯ ಪ್ರಕರಣದಲ್ಲಿ' ಎಂದು ಪ್ರಕಟಿಸಿ ನ್ಯೂಜು ಕಾರಿತು ಪ್ರಕರಣ ತನಿಖೆಯಾಗಿ ಅನೇಕರೊಂದಿಗೆ ಶೇಷಾಚಲಯ್ಯ ಎರಡು ವರ್ಷಗಳ ಕಾಲ ಕಾರಗೃಹ ಅನುಭವಿಸಬೇಕಾಯಿತು. ಆಗ 'ಗುಲಾಲಿ ತಾರೆ' ದೊಡ್ಡ ತಲೆ ಬರಹ ಕೊಡಲಿಲ್ಲ. ಪ್ರಧಾನಿಯ ನ್ಯಾಯಪಕ್ಷಪಾತವನ್ನು ಹೊಗಳಲೂ ಇಲ್ಲ. ಆದರೂ ನಾಡಿನ ಕೆಲವು ಶೀಲಪ್ರಿಯರು "ಒಬ್ಬನಾದರೂ ನ್ಯಾಯುವಂತ ದೇಶದಲ್ಲಿ ಇದ್ದಾನಲ್ಲ" ಎಂದಂದುಕೊಂಡರು. ಶೇಷಾಚಲಯ್ಯನಿಗೆ ಸಜೆಯಾದ ದಿನ ಅರುಣಾಚಲಯ್ಯನವರು ಎಷ್ಟು ಮರುಗಿದರೋ ಕಾಂಚನಮಾಲೆಯೂ ಅಷ್ಟು ಮರುಗಿದಳು. "ಆದರ್ಶಕ್ಕೆ ತಕ್ಕ ದಾರಿ ಇರಬೇಕೇ ಇರಬೇಡವೇ?" ಎಂಬ ಅವಳ ಆಂತರಿಕ ಪ್ರಶ್ನೆಗೆ ಸಮಾಧಾನದ ಉತ್ತರ ಕಾಣಿಸಿರಬಹುದು

## ಅಧ್ಯಾಯ ೭

ಕಾಂಚನಮಾಲೆ, ನಾಡನ್ನು ಸುತ್ತುತ್ತ, ಆಳುವ ಯಂತ್ರದ ಕೊಳೆಯನ್ನು ಕಳಚಲು ಹೊರಟ ಕೆಲಸ ಎಷ್ಟು ಕುತೂಹಲ, ವಿಸ್ಮಯಕಾರಿಯಾಗಿತ್ತೋ ಅಷ್ಟೇ ಧೈರ್ಯಗೆಡುವ ಕೆಲಸವೂ ಆಗಿತ್ತು, ಇಂಥ ಕೆಲಸಗಳು ಅವಳ ಮೂಲಕ ನಡೆಯುತ್ತವೆ ಎಂದು ಪ್ರಕಟವಾದರೆ, ಕೆಲಸಕ್ಕೆ ತಡೆಯುಂಟು ಅವಳ ಸಾಹಸ ಪ್ರವೃತ್ತಿಗೆ ಈ ಕೆಲಸದಿಂದ ತುಂಬ ತೃಪ್ತಿಯಿದ್ದಿತು; ಅರುಣಾಚಲಯ್ಯನರಿಂದ ಬೇಕಷ್ಟು ಪ್ರೋತ್ಸಾಹವೂ ದೊರಕುತ್ತಿತ್ತು. ಆದರೆ ತೊಡಗಿದ ಕೆಲಸ ಹಿಮದ ತಪ್ಪಲಿನಿಂದ ಉರುಳಿಸುವ ಹಿಮದ ಚಂಡಿನಂತಾದೀತೆಂದು, ಅವಳು ಎಣಿಸಿರಲಿಲ್ಲ.

ಶೇಷಾಚಲಯ್ಯನ ಪ್ರಕರಣ ಒಂದೇ ಸಾಕು—ಅವನಿಗೆ ರಕ್ಷಣೆ ಕೊಟ್ಟವರ, ಅವನ ಕೊಳ್ಳೆಯಲ್ಲಿ ಪಾಲುಗಾರರಾದವರ ಹಲವರ

ಹೆಸರುಗಳನ್ನು ಹೊರತಂದಿತು. ವಿಚಾರಣೆ ಮುಂದುವರಿದಾಗ ಎಂಜನಿಯರಿಂಗ್ ಇಲಾಖೆಯಲ್ಲಿ ತಜ್ಞರು, ಮುಖ್ಯರು, ಎನ್ನುವ ಹಲವರನ್ನು ಕಳೆದುಕೊಳ್ಳಬೇಕಾಯಿತು ಇದಕ್ಕೆ ಇನ್ನೊಂದು ರೂಪವೂ ಬಂದಿತ್ತು. ಹಲವರು ಭೀತಿಯಿಂದ ರಜೆ, ವರ್ಗಾವರ್ಗಿಗಳನ್ನು ಬೇಡತೊಡಗಿದರು. ಅದರಿಂದಲೂ ನೀರ್ಕಟ್ಟೆಯ ಕೆಲಸಕ್ಕೆ ತಡೆಬಂದಿತು. ಇತ್ತ ತೊಡಗಿದ ಮುಷ್ಕರ ನಿಲ್ಲಲಿಲ್ಲ. ಕೆಲಸಗಾರರೆಲ್ಲ ಕಣ್ಮರೆಯಾದರು

ಇಂಥ ಒಂದು ದಿನ, ಆಕೆ ತನ್ನ ಮನೆಯಲ್ಲಿ ಕಾಗದ, ಪತ್ರ ತಿರುಗಿಸುತ್ತಾ ಕುಳಿತಿರುವಾಗ ಸಾಹುಕಾರ ಶೀನಪ್ಪನವರು ಭೇಟಿಗೆ ಬಂದರು ಹಿಂದಣ ಸಹೋದ್ಯೋಗಿಗಳು, ನಿವೃತ್ತ ಮಂತ್ರಿಗಳು, ಚುನಾವಣೆಯಲ್ಲಿ ಸ್ಥಾನ ಕಳೆದುಕೊಂಡವರು ಬರಿದೆ ಹಳೆಯ ನೆನಪಿನಿಂದ ಬಂದಿರಬಹುದೆಂದು ಊಹಿಸಿ ಸ್ವಾಗತಿಸಿದಳು

ಮಾತಿನ ಪ್ರಾರಂಭ ಜವುಳಿ ಅಂಗಡಿಯಿಂದ ತೊಡಗಿತು. "ಏನು ಒಂದು ವರ್ಷವೇ ಆಯಿತು ನೀವು ನಮ್ಮ ಅಂಗಡಿಗೆ ಬಾರದೆ. ಬನಾರಸಿನಿಂದ ಒಳ್ಳೆಯ ಸೀರೆಗಳು ಬಂದಿದ್ದಾವೆ. ಹೊಸ ಮಾದರಿಗಳು. ನಾನೇ ಕೆಲವನ್ನು ಆರಿಸಿ ಮಾದರಿಗಳನ್ನು ಕಳುಹಿಸುತ್ತಿದ್ದೆ ನೀವೇನು ತಿಳಿಯುತ್ತೀರೋ-ಎಂದು ಸುಮ್ಮನಾದೆ

ಬಂದ ಕಾರ್ಯೋದ್ದೇಶ ಅದಿರಲಾರದು ಎಂದು ಬಲ್ಲ ಆಕೆ, "ಸಾಹುಕಾರರೇ, ನಾನೇ ! ಮುದುಕಿಯಾಗುತ್ತ ಬಂದೆ ಇನ್ನೇನು ಶೋಕಿ? ಸಾಲದ್ದಕ್ಕೆ ಹಳೆಯ ಸೀರೆಗಳು ರಾಶಿ ಬಿದ್ದಿವೆ" ಎಂದಳು.

ಅವರು ನಗುತ್ತಾ, "ನಿಮಗೆ ಮುಪ್ಪೆ? ನನ್ನ ಅರ್ಧಪ್ರಾಯವೂ ಆಗಿಲ್ಲ ಅಂತು ತುಂಬ ಕೆಲಸದಲ್ಲಿದ್ದೀರಿ. ಆದರೆ ನಿಜಕ್ಕೂ ಈ ಗ್ರಾಮಾಭಿವೃದ್ಧಿ, ಕೈಗಾರಿಕೆ ಇವೆಲ್ಲಾ ಈ ಯಂತ್ರಯುಗದಲ್ಲಿ ಏನು ಆದೀತು, ಎಷ್ಟು ನಡೆದೀತು? ನನಗೆ ಧೈರ್ಯವಿಲ್ಲ. ವಾಮನರಾಯರು ರೇಷ್ಮೆ ವ್ಯವಸಾಯದ ಹಂಚಿಕೆ ಹಾಕಿದರಲ್ಲ ಇಂದು ಅವರ ಅವಸ್ಥೆಯೇನು? ಎಷ್ಟು ಕಾಂಪಿಟೇಷನ್ ಇದೆ. ಹೀಗಿರುವಾಗ ಅವು ಒಂದೂ ನಿಲ್ಲುವುದಿಲ್ಲ.

"ನಮ್ಮ ಎಣ್ಣೆ ಗಿರಣಿಯ ವಿವಾದವನ್ನು ನೋಡಿದಿರಲ್ಲಾ-ಅದಕ್ಕೊಂದು ರೂಪುಕೊಟ್ಟು, ನಿಲ್ಲಿಸಬೇಕಾದರೆ ಸಾಕುಬೇಕಾಯಿತು.

ತುಂಬ ಸಾಲವೂ ಆಯಿತು. ಈಗ ಆ ಮಾರವಾಡಿಗಳ ಕಾಂಪಿಟೀಷನ್ ಬೇರೆ, ಎಣ್ಣೆಗಾಳಿನ ತೇಜ, ಮುಂದಿ ಬೇರೆ. 'ವನಸ್ಪತಿ ಎಣ್ಣೆ ಕಣ್ಣಿಗೆ ಹಾಳು ಅದನ್ನು ಬಹಿಷ್ಕರಿಸಬೇಕು' ಎನ್ನುವ ಪ್ರಯತ್ನ ಬೇರೆ. ಹೀಗಾದರೆ ಬಂಡವಳ ತೊಡಕಿಸಿದವರ ಗತಿಯೇನು ? ಸಾಲದುದಕ್ಕೆ ನನ್ನ ಅಳಿಯನ ಮೇಲೆ ಒಂದು ಆರೋಪವೂ ಬಂದಿದೆ."

"ಅಳಿಯನೆಂದರೆ ?"

"ನಾನು ಮಂತ್ರಿಪದವಿ ಸ್ವೀಕರಿಸಿದಾಗ, ಮೇನೇಜಿಂಗ್ ಡೈರೆಕ್ಟರಿಯನ್ನೂ ಮಾಡಬಾರದ್ದಕ್ಕೆ ನನ್ನ ಮಗಳ ಗಂಡ ವೆಂಕಟೇಶನನ್ನು ಮ್ಯಾನೇಜಿಂಗ್ ಡೈರೆಕ್ಟರ್ ಮಾಡಿದೆ ಈಗ ಅವನ ಮೇಲೆ ಕೇಸು ಹಾಕಿದ್ದಾರೆ"

"ಏನು ಕೇಸು?"

"ಏನೆನ್ನಲಿ ? ಅರುಣಾಚಲಯ್ಯನವರ ಅಳಿಯನ ತನಿಖೆಯಾಯಿತಲ್ಲ ಆತ ತನ್ನ ಬಾಯ್ದರೆ ಹೇಳಿಕೆಯಲ್ಲಿ–ಸಿಮೆಂಟು ಮುಂತಾದನ್ನು ನನ್ನ ಅಳಿಯನಿಗೆ ಮಾರಿದ್ದೇನೆ. ಅದರಿಂದಲೇ ನಮ್ಮ ಗಿರಣಿ ಬಡಾವಣೆ ಆದುದು–ಎಂದನಂತೆ ಸಿಮೆಂಟು ಕಾಣೆಯಾದುದಕ್ಕೆ ಏನಾದರೂ ಹೇಳಬೇಕಲ್ಲ ಯಾರಿಗೆ ಕೊಟ್ಟನೋ ! ಅವರನ್ನು ಉಳಿಸಲಿಕ್ಕೆ ಹೋಗಿ, ನನ್ನ ಅಳಿಯನನ್ನು ಬಲಿಗೆ ಕೊಡುವ ಯೋಚನೆ ಇದು ಅಂಥವನ ಮಾತು ನಂಬಿ ಕೇಸುಹಾಕಿ ತನಿಖೆಗೆ ಹೊರಟಿದ್ದಾರೆ"

"ನನಗೆ ತಿಳಿದಿಲ್ಲ"

"ನಿಮಗೆ ತಿಳಿಯದಿರಬಹುದು ಆದರ ಸತ್ಯಾಸತ್ಯವನ್ನು ನೋಡಬೇಡವೇ ?"

"ಅವರು ತಕ್ಕೊಂಡಿಲ್ಲವಾದರೆ ಏನು ಭಯ ?"

"ಅದಷ್ಟು ಸುಲಭದ್ದಲ್ಲ. ಆ ಮಾರವಾಡಿ ಕಂಪೆನಿಯವರು ನಮ್ಮನ್ನು ಉರುಳಿಸುವುದಕ್ಕೆ ಎಷ್ಟು ಸುಳ್ಳು ಸಾಕ್ಷಿ ತೋರಿಸುವುದಕ್ಕೂ ಸಿದ್ಧ ಇದು ತೀರ ಅನ್ಯಾಯ. ನೀವು ಅರುಣಾಚಲಯ್ಯನವರಿಗೆ ಹೇಳಿ, ಈ ಕೇಸನ್ನು ಹಿಂದಕ್ಕೆ ತೆಗೆಯುವಂತೆ ಹುಕುಂ ಮಾಡಿಸಬೇಕು."

"ಅದನ್ನು ನೀವೇ ಅವರಿಗೆ ಹೇಳಬೇಕು. ತಮ್ಮ ಅಳಿಯ ನನ್ನೇ ಅವರು ವಿಚಾರಣೆಗೆ ಗುರಿ ಮಾಡಿದರು, ಶಿಕ್ಷೆಯೂ ಆಯಿತು ನಿಮ್ಮ ವಕಾಲತು ವಹಿಸಿ ನಾನು ಹೋದರೆ ಏನೆಂದಾರು ?

"ಅಲ್ಲ, ಕಾಂಚನದೇವಿಯವರೇ, ನಮ್ಮ ಮಂತ್ರಿತ್ವದ ಕಾಲದಲ್ಲಿ ಇಂಥ ಸಣ್ಣ ಪುಟ್ಟ ವಿಷಯಗಳಲ್ಲಿ ಸರಕಾರ ಕೈ ಹಾಕುತ್ತಿತ್ತೇ ?"

"ಇದು ಸಣ್ಣ ಪುಟ್ಟ ವಿಚಾರವೇ ?"

"ಅಂಥ ದೊಡ್ಡ ವಿಚಾರವೋ! ನಿಮಗೆ ನನ್ನ ಸ್ವಭಾವ ತಿಳಿದಿದೆ. ಯಾವ ಕಷ್ಟದಲ್ಲೂ ನನ್ನಿಂದ ಒಂದು ಪ್ರಯೋಜನ ಬಂದೀತು ನಾಳೆ ಒಂದಲ್ಲ ಒಂದು ದಿನ ನಿಮ್ಮ ಉಪಕಾರದ ಋಣ ತೀರಿಸಿಯೇನು. ನೋಡಿ, ಇವತ್ತಿನ ವಿಷಯ ಹೀಗಿದೆ–ಅರುಣಾಚಲಯ್ಯನವರ ಸರಕಾರ ನಡೆಯುವುದು ದೇಶವಾದಿಗಳಾದ ನಮ್ಮ ಬೆಂಬಲದಿಂದಲೇ ಅದು ಸುಳ್ಳೆನ್ನುತ್ತೀರಾ ? ನಮ್ಮನ್ನು ಬಿಟ್ಟು ಗುಲಾಲಿ ಟೋಪಿಯವರೊಂದಿಗೆ ಸರಕಾರ ನಡೆಯಿಸುತ್ತದೆಯೇ ? ಸ್ವಂತವಾಗಿ ಅವರಿಗೆ ಬಹುಮತ ವಿದೆಯೇ? ನಾವಿನ್ನೂ ಸೋತಿಲ್ಲ ಅವರು ಹೀಗೆ ಸೇತುರಾಯನ ಒತ್ತಾಯಕ್ಕೆ ಬಲಿ ಬಿದ್ದು, ಬೇಡದ ವಿಚಾರಣೆ, ತನಿಖೆಗಳಿಗೆ ಹೊರಟರೆ ಸತ್ಯವಂತರೆನಿಸಿ ಅವರೊಬ್ಬರೇ ಇರಬೇಕಾದೀತು ನೀವೂ ಯೋಚಿಸಿ ನೋಡಿ ನಿಮಗೂ ಸಂಗತಿ ತಿಳಿದಿದೆ ಅವರ ಪಕ್ಷವೇ ಬಹುಮತವಾಗಿ ಬಂದಿದ್ದರೆ ನೀವೂ ಹೀಗಿರುತ್ತಿರಲಿಲ್ಲ ಈಗ ನಡುವೆ ನಿಂತಿದ್ದೀರಿ ಆಚೆಯೂ ಇಲ್ಲ ಈಚೆಯೂ ಇಲ್ಲ ಎಂಬ ಹಾಗೆ. ಎಲ್ಲರೂ ನಿಮಗೆ ಬೇಕು ರಾಜಕೀಯದಲ್ಲಿ ಅಷ್ಟು ಖಂಡು, ತುಂಡು ಇರುವುದು ಸಾಧ್ಯವಿಲ್ಲ" ಎಂದು ವಾದಿಸಿದರು

"ಆಗಲಿ ನೋಡುವ" ಎಂದು ಸಮಾಧಾನ ಹೇಳಿದಳು ಅವಳು.

"ಆ ಕೆಲಸ ಮಾಡಿಸಿಕೊಡುತ್ತೇನೆ ಎಂದು ನೀವು ಭರವಸೆ ಕೊಡಬೇಕು. ನೀವು ಹೇಳಿದರೆ ಆ ಕೆಲಸ ಆಗುತ್ತದೆ ಅವರಲ್ಲಿ ನಿಮ್ಮ ಮಾತು ನಡೆಯುತ್ತದೆ."

"ಹಾಗೆಲ್ಲ ತಿಳಿಯಬೇಡಿ. ಅವರು ಅಷ್ಟು ಸುಲಭರಲ್ಲ" ಎಂದು ಮಾತು ಅಡ್ಡ ತಿರುಗಿಸಿ ಶೀನಪ್ಪನವರನ್ನು ಉಪಚರಿಸಿ, ಮರಳಿ ಕಳುಹಿಸುವುದಕ್ಕೆ ಸಾಕುಬೇಕಾಯಿತು. ಮಾತಿಗೆ ತಕ್ಕಂತೆ ಈ

ಸಂಗತಿಯನ್ನು ಅವಳು ಅರುಣಾಚಲಯ್ಯನವರಿಗೆ ಹೇಳಿದಳು. ಅವರು ಕೇಳಿ ನಕ್ಕರು, ಇವಳೂ ನಕ್ಕಳು.

"ನನಗೊಂದು ಭಯ. ನಾವು ಮಾಡುವ ಕೆಲಸವೇನೋ ಸರಿಯಾದದ್ದೇ. ಹಾಗೆ ಮಾಡದೆ ನಮಗೆ ಮೋಕ್ಷವಿಲ್ಲವೆಂದೂ ಬಲ್ಲೆ. ಆದರೆ ಈ ವಿಷವೃಕ್ಷದ ಬೇರು ಹರಡಿಕೊಂಡುದರ ವಿಸ್ತಾರ ನೋಡಿದರೆ ಭಯವಾಗುತ್ತದೆ. ಈ ಸಾಹುಕಾರರು, ಬಂಡವಳುಗಾರರು, ಶ್ರಮಗಾರರು, ದೇಶವಾದಿಗಳು ಎಲ್ಲರಲ್ಲಿಯೂ ನಿಷ್ಠುರ ಬೆಳೆಸಿಕೊಂಡರೆ ಮುಂದಿನ ಚುನಾವಣೆಯ ಗತಿಯನ್ನು ಮಾತ್ರ ಹೇಳಲಾರೆ" ಎಂದಳು.

"ಆ ಚಿತ್ರ ನನ್ನ ಕಣ್ಮುಂದೆಯೂ ಇದೆ ನಾಳಿನ ಯಶಸ್ಸನ್ನು ಆಶಿಸಿ, ಇವತ್ತು ಕೊಳೆಯಲ್ಲಿ ಅದ್ದಿಕೊಂಡಿರುವುದಾದರೆ, ನಾವೇ ಸರಕಾರ ನಡೆಯಿಸಬೇಕೆಂದೇನು? ಯಾವ ಸುಲಿಗೆಗಾರರೂ ನಡೆಯಿಸಬಹುದು ಅಂಥವರಿಗೆ ಮಾತ್ರ ತಮ್ಮ ಕೊಳ್ಳೆಯಲ್ಲಿ ಪಾಲು ಕೊಡಲು ಬರುತ್ತದೆ. ಆದರೆ ಒಳ್ಳೆಯ ಕೆಲಸಕ್ಕೆ ಫಲ ದೊರಕುವುದು ಬಹು ದೂರ ಅದರ ಫಲ ನೋಡುವುದಕ್ಕೆ ನೀವು ಚಿಕ್ಕವರು, ಉಳಿಯಬಹುದು, ನಾನು ಮುದುಕ, ಇರಲಾರೆ. ಮತದಾರರಿಗೆ ಕಳ್ಳರೇ ಬೇಕು, ಅಪ್ರಮಾಣಿಕರೇ ಬೇಕು-ಎಂದಿದ್ದರೆ ಅಂಥವರೇ ಬಂದು ಆಳುತ್ತಾರೆ"

"ಅವರಲ್ಲಿ ರಾಜಕೀಯದ ಅಜ್ಞಾನ ತುಂಬಿರುವುದರಿಂದಲ್ಲವೇ ಈ ಕಷ್ಟ" ಎಂದಳು ಕಾಂಚನಮಾಲೆ ಮಾತು ವಿಷಯಾಂತರಕ್ಕೆ ಸರಿಯಿತು ಜನಗಳಲ್ಲಿ ವಿಚಾರಶಕ್ತಿ ಬೆಳೆಯುವುದಕ್ಕೆ, ತಿಳಿವು ಬೆಳೆಯುವುದಕ್ಕೆ ವಿದ್ಯಾಭ್ಯಾಸಬೇಕು ಅದಕ್ಕಾಗಿ ಗ್ರಾಮಕ್ಕೊಂದು ಶಾಲೆಯಂತಾದರೂ ನಿರ್ಮಿಸಬೇಕು ಎಂಬ ತತ್ವದ ಚರ್ಚೆ ಬಂದಿತು. ಅದಕ್ಕೆ ಕಾಂಚನಮಾಲೆ "ನಿಮ್ಮ ವಾದವೆಲ್ಲ ಸರಿಯೆ ಕಟ್ಟಡ ಬೇಡ; ನೆರಳು ಸಾಕು, ಚಪ್ಪರ ಸಾಕು ಎಂದರೆ ನನ್ನ ಒಪ್ಪಿಗೆಯೇ. ಆದರೆ ಉಪಾಧ್ಯಾಯರನ್ನು ಎಲ್ಲಿಂದ ತರಬೇಕು? ಅವರ ಸ್ಥಿತಿ ಶ್ರಮಗಾರರಿಗಿಂತ ಕೀಳಾಗಿದೆ. ಈಗೀಗ ಆ ಉದ್ಯೋಗಕ್ಕೆ ಬರುವವರೂ ಇಲ್ಲ."

"ನನಗೊಂದು ಕಾಣುತ್ತದೆ-ನಾನೊಂದು ನಿರ್ಣಯ ಮಾಡಿದ್ದೇನೆ-ಇನ್ನು ಮುಂದೆ ಯಾವಾತನೇ ಆಗಲಿ, ತೇರ್ಗಡೆಯಾಗಿ ಸರ

ಕಾರೀ ಕೆಲಸ ಬಯಸುವವನಾದರೆ, ಒಂದಲ್ಲ ಒಂದು ರೀತಿಯ ಕಡ್ಡಾಯದ ರಾಷ್ಟ್ರಸೇವೆಯನ್ನು ವರ್ಷವೋ ಎರಡು ವರ್ಷವೋ ಮಾಡಬೇಕು ಯಾಕಾಗಬಾರದು? ಅನೇಕ ದೇಶಗಳಲ್ಲಿ ಕಡ್ಡಾಯ ಸೈನಿಕ ಶಿಕ್ಷಣವಿದೆ ಅದಕ್ಕಿಂತ ಇದು ಕೀಳಲ್ಲ, ಅಸಾಧ್ಯವೂ ಅಲ್ಲ"

"ಆದರೆ ಪಾಠಹೇಳುವುದಕ್ಕೊಂದು ಶಿಕ್ಷಣ ಬೇಡವೇ? ಗೊತ್ತು ಬೇಡವೇ?"

"ಅವರು ಬರಿಯ ಲೆಕ್ಕ, ಓದು, ಬರಹ ಹೇಳಿಕೊಟ್ಟರೂ ನನಗೆ ತೃಪ್ತಿಯೇ ಈ ಬಾರಿಯ ಅಂದಾಜು ಪಟ್ಟಿಯಲ್ಲಿ ಆ ಯೋಜನೆ ಸೇರಿಸುತ್ತೇನೆ" ಎಂದು ನುಡಿದ ಬಳಿಕ ಇನ್ನೊಮ್ಮೆ ಅವಳ ಸ್ವಂತ ವಿಚಾರವನ್ನೇ ಕೇಳ ತೊಡಗಿದರು: "ಯಾಕೆ ನೀವು ವಿದ್ಯಾಂಗ ವಹಿಸಿಕೊಳ್ಳಬಾರದು? ನನ್ನ ಪಕ್ಷದಿಂದ ಒಬ್ಬರು ನಿಮಗೆ ಸ್ಥಾನ ತೆರವು ಮಾಡಿಕೊಡುತ್ತಾರೆ"

ಆಕೆ ಮಾತನಾಡಲಿಲ್ಲ

"ಇನ್ನೂ ಯಾವ ಪಂಗಡ ಸ್ಥಿರವಾಗಿ ನಿಂತೀತು, ಗೆದ್ದೀತು ಎಂಬ ಅನುಮಾನ ನಿಮಗಿಲ್ಲವೇ?"

ಆಕೆ ನಕ್ಕಳು.

"ನಿಜ ನನಗೆ ಆ ಧೈರ್ಯವಿಲ್ಲ, ನೀವು ಯೌವನಸ್ಥರು ಅನುಮಾನ ಬರಬಹುದು ಆದರೂ ರಾಜಕೀಯದಲ್ಲಿ ನಿಮ್ಮ ಈ ಅನಿಶ್ಚಿತ ಮಾರ್ಗವನ್ನು ಬಿಟ್ಟು, ಒಂದು ದಿನ ನನ್ನ ಪಂಥ ಹಿಡಿಯುವ ಕಾಲ ಬಂದೀತು"

"ಪಂಥಕ್ಕೆ ನಾನು ಬರುವುದಿಲ್ಲ, ನಿಮ್ಮ ಒಳ್ಳೆಯ ಕೆಲಸಗಳಿಗೆ ಬೆಂಬಲ ಕೊಡುತ್ತೇನೆ"

"ಶ್ರಮವಾದಿಗಳು ನಾಳೆ ಗೆದ್ದು ಬಂದಾರು-ಎಂಬ ಆಶೆಯೇ?

"ಅವರು ಬಂದರೂ ಹಾಗೆಯೇ ನೀವೇ ಅಂದಿದ್ದೀರಿ ಪ ಮುಖ್ಯವಲ್ಲ-ದೇಶ ಮುಖ್ಯವೆಂದು"

"ಸರಿ, ಶ್ರಮವಾದಿಗಳಿಗೆ ಗೊಂಡಾರಣ್ಯ ಮುಖ್ಯವೆನ್ನುತ್ತೀರಾ ಇದನ್ನು ಅವರು ತಪ್ಪೆಂದು ತಿಳಿಯುತ್ತಾರೆಯೇ ಆ ವಿಶ್ವಾ ನನಗಿಲ್ಲ-ಅವರ ಸ್ನೇಹ ನಾನಾಗಿ ಬಯಸುತ್ತಿದ್ದೆ. ಎಲ್ಲಿಯ ತನ

ಅವರ ಕಣ್ಣು ಹೊರಗಿನ ದೈವಗಳ ಕಡೆಗೆ ನೋಡುತ್ತಿದೆಯೋ, ಅಲ್ಲಿಂದ ಶಕ್ತಿ ಹೀರುತ್ತಿದೆಯೋ ಅಲ್ಲಿಯ ತನಕ ಇಲ್ಲಿನ ಸೂತ್ರ ಅವರ ಕೈಯಲ್ಲಿ ನಾನಾಗಿ ಕೊಡಲಾರೆ. ಅವರಿಗೆ ಎಂಥ ದಾರಿಯೂ ಒಪ್ಪುತ್ತದೆ. ನನಗೆ ಅದು ಒಪ್ಪಿಗೆಯಿಲ್ಲ. ನಾನು ಅಷ್ಟು ಬುದ್ಧಿವಂತನಲ್ಲ. ನನ್ನ ಬುದ್ಧಿಯನ್ನು ಮೀರಿಸಬಲ್ಲ ಉಪಾಯ, ರೀತಿ, ಚಾಣಾಕ್ಯ ತಂತ್ರಗಳು ಅವರಲ್ಲಿವೆ. ಒಮ್ಮೆ ಅವರು ಒಳಗೆ ಹೊಕ್ಕರೆ, ಬೇಡವಾದಾಗ ನಾವು ಅವರನ್ನು ಕಿತ್ತೊಗೆಯಲಾರೆವು. ಅವರು ಪ್ರತಿಯೊಂದಕ್ಕೂ ರಾಷ್ಟ್ರ ಸ್ವಾಮ್ಯ ಎನ್ನುವ ಕೂಗಿನ ರಹಸ್ಯ ಅದೇನೇ. ಜನ ಜೀವನದ ಪ್ರತಿಯೊಂದೂ ರಾಷ್ಟ್ರಸ್ವಾಮ್ಯಕ್ಕೆ ಒಳಪಟ್ಟರೆ ಪ್ರಜೆಯ ಉಸಿರು, ಸ್ವತಂತ್ರ ಜೀವನ, ವಿಚಾರಗಳೆಲ್ಲ ಅದರ ಅಂಕೆಗೆ ಬರುತ್ತದೆ. ಅನಂತರ ತಪ್ಪಿಸಿಕೊಳ್ಳುವ ದಾರಿಯಿಲ್ಲ. ಬಂಡವಾಳಗಾರಿಕೆಯ ಹಾನಿ ತಪ್ಪಿಸಬೇಕಾದ್ದು ನಿಜ. ಕೆಲವೊಂದು ಮುಖ್ಯ ಉದ್ಯೋಗಗಳು ರಾಷ್ಟ್ರಸ್ವಾಮ್ಯದಲ್ಲಿ ಇರಬೇಕೆಂಬುದು ಸರಿ. ಇಷ್ಟೇ ಹೊರತು, ವ್ಯಕ್ತಿಯನ್ನು ನಿಸ್ಸಹಾಯ, ನಿರಾಧಾರಿಯಾದ ಗುಲಾಮನನ್ನಾಗಿ ಮಾಡುವ ಯೋಜನೆ ನನಗೆ ಸಮ್ಮತಿಯಿಲ್ಲ. ಜನರು ಸ್ವತಂತ್ರರಾಗಿ ದುಡಿಯಬೇಕು. ಸ್ವಂತ ಜೀವನಕ್ಕಾಗಿ ಸರಕಾರದ ಮೋರೆ ನೋಡುವುದು ಕಡಮೆಯಾಗಬೇಕು. ಆದರಿಂದ ಅವರಿಗೆ ಕ್ಷೇಮವಿದೆ. ಅವರಲ್ಲಿ ಸ್ಥೈರ್ಯ, ಸಾಹಸ, ಗಡಸುತನ ಉಳಿಯುತ್ತದೆ.

"ಸೇತುರಾಯ ಉದ್ಯೋಗ, ಸಾರಿಗೆ, ಕೃಷಿ ಎಲ್ಲವುಗಳು ರಾಷ್ಟ್ರೀಕರಣಗೊಳ್ಳಬೇಕೆಂದು ಕೂಗುವವನು ತನಗೆ ಅನುಕೂಲ ಕಂಪರ ಶೀಲಪತಿ ಸೀರ್ಕಟ್ಟೆಯ ಕೆಲಸ ನಿಲ್ಲಿಸುವುದಕ್ಕೂ ಮುಂದಾಳು. ಅವರಿಗೆ ಈ ಯಾವ ತತ್ವಗಳೂ ಧ್ಯೇಯಗಳಲ್ಲ. ಇವೆಲ್ಲ ನಿರಂಕುಶ ಪ್ರಭುತ್ವಕ್ಕೆ ಬರಿಯ ಉಪಾಯಗಳು" ಎಂದರು. ಅಲ್ಲಿಂದ ಸೀರ್ಕಟ್ಟೆಯ ಕೆಲಸ ನಿಂತುದರ ಮಾತು ಬಂದಿತು. 'ಸಂಪು ಹೂಡಿ ಓಡಿ ಹೋದವರ ಬದಲು ಬೇರೆ ಜನಗಳನ್ನು ತರಬಾರದೇ? ಅದರಲ್ಲಿಯೂ ಆದಿವಾಸಿಗಳನ್ನು ಪ್ರೇರಿಸಿ, ಕಲೆಯ ಹಾಕಿ ತರುವುದು ಸಾಧ್ಯವಿಲ್ಲವೇ' ಎಂಬ ವಿಚಾರ ಬಂದಿತು. ತಕ್ಷಣ ಫೋನ್ ಮಾಡಿ ಪಬ್ಲಿಕ್ ವರ್ಕ್ಸ್ ಇಲಾಖೆಯ ಮಂತ್ರಿ ರಾಮದಾಸನನ್ನು ಕರೆಯಿಸಿಕೊಂಡರು. ಅವರೆಲ್ಲರೂ

ಕೂಡಿ ಈ ಹೊಸ ಯೋಜನೆಯನ್ನು ಕೂಡಿಯೇ ತರ್ಕಿಸಿದರು ಈಗ ಕೊಡುತ್ತಿರುವ ದಿನಗೂಲಿ ಒಂದೊವರೆ ರೂಪಾಯಿಯನ್ನು ಹೆಚ್ಚಿಸು ವಂತಿಲ್ಲ ಅಷ್ಟಕ್ಕೆ ದುಡಿಯಬಲ್ಲ ಸಾವಿರಾರು ಶ್ರಮಗಾರರನ್ನು ಒಟ್ಟುಗೂಡಿಸುವುದು ಶಕ್ಯವೇ? ಕರೆತರುವುದು ಶಕ್ಯವಾದರೂ ಗುಲಾಲಿ ಪಡೆಯುವರೊಡನೆ ಪ್ರತ್ಯಕ್ಷ ಘರ್ಷಣೆ ಹುಟ್ಟೀತೇ–ಎಂದು ಯೋಚಿಸಿ ದರು. "ಯಾಕಾಗಬಾರದು? ಕೆಲಸಗಾರರ ಮೇಲೆ ಒಬ್ಬೊಬ್ಬ ಮೇಸ್ತ್ರಿಯನ್ನು ನೇಮಿಸಿ ಅವನಿಗೆ ಶ್ರಮಗಾರರ ಸಂಖ್ಯೆಯ ಮೇಲೆ ದಲ್ಲಾಲಿ ಕೊಟ್ಟು ಕೆಲಸ ಮಾಡಿಸಬಹುದು" ಎಂದ ರಾಮದಾಸ.

ಅಷ್ಟಕ್ಕೆ ಕಾಂಚನಮಾಲೆ "ಆ ದಾರಿಯಲ್ಲಿ ದೋಷವಿಲ್ಲವೆನ್ನು ತ್ತೀರಾ? ಅದು ಹೊಸತೇ?" ಎಂದು ಕೇಳಿದಳು

"ದೋಷವೇನು? ಮೇಸ್ತ್ರಿಯು ಮೇಲ್ವಿಚಾರಣೆ ನೋಡುತ್ತಾನೆ. ದುಡಿಯುವವರ ಸಂಖ್ಯೆಯ ಮೇಲೆ ಅವನಿಗೆ ವರಮಾನ"

"ಅವನ ವರಮಾನದ ದಾರಿ ಅದಲ್ಲ, ಬೇರೆಯಿರುತ್ತವೆ"

"ಯಾವುದು?"

"ಒಮ್ಮೆ ಹೋಗಿ ನೋಡಿ–ಕೂಲಿಗಳ ಸಂಖ್ಯೆ ಎಣಿಸಿ, ಹಾಜರು ಎಣಿಸಿ, ಅರುವತ್ತು ಜನ ಕೆಲಸಕ್ಕೆ ಬಂದಿದ್ದರೆ ನೂರು ಜನರ ಸಂಬಳ ಹೋಗುತ್ತದೆ"

"ಅದು ಹೇಗೆ ಸಾಧ್ಯ?"

"ಹೋಗಿ ನೋಡಿದಾಗ ಅದು ತಿಳಿಯುತ್ತದೆ ಈ ತನಕ ನಡೆದು ಬಂದ ಕ್ರಮ ಅದೇನೆ. ಸುಳ್ಳು ಹಾಜರಿಗಳು, ಸುಳ್ಳು ರಶೀದಿಗಳು ಇವೆಲ್ಲ ನಿಮ್ಮ ಇಲಾಖೆಯಲ್ಲಿ ನಿತ್ಯದ ಆಟಗಳಾಗಿವೆ"

ಅವರ ವಿಚಾರಸರಣಿ ಹಾಗೆಯೇ ಮುಂದುವರಿಯಿತು ತಮಿಳು ದೇಶದಿಂದ ಕೂಲಿ ತರಿಸಬಹುದು ಎಂದರು ಒಬ್ಬರು ಬರಿಯ ಮೂರು ತಿಂಗಳು ಕೆಲಸವಾದರೆ ಆದಿವಾಸಿಗಳನ್ನೇ 'ದೇಶಕ್ಕಾಗಿ ಸಹಾಯ ಮಾಡಿ' ಎಂದು ಬೇಡಿದರೆ, ಬಂದಾರು, ವಂಚನೆ ಮಾಡುವ ಜನ ಗಳಲ್ಲ–ಎಂದರು ಇನ್ನೊಬ್ಬರು ಅಂತೂ ಈ ಸಂಪನ್ನು ಮುರಿಯದೆ ಹೋದರೆ ನಾಳಿನ ಎಲ್ಲ ಕೆಲಸಗಳಿಗೂ ವಿಘ್ನವೆಂಬುದು ಮನಗಂಡಿತು.

ಆಗ... ಚಲಯ್ಯನವರಿಗಿಂತ ಕಾಂಚನಮಾಲೆಗೆ ಸೇತುರಾಯ

ಒಡ್ಡಿದ ಈ ಆತಂಕ ಕಠಿಣವಾಗಿ ಕಂಡಿತು, ಅವನ ಶಕ್ತಿಯನ್ನು ಮುರಿಯುವ ಹಟ ಮನಸ್ಸಿನಲ್ಲಿ ಮೂಡಿತ್ತು ಅದಕ್ಕಾಗಿ ಅವಳು ಅರುಣಾಚಲಯ್ಯನವರೊಡನೆ "ನಾನೂ ನೀವೂ ಕೂಡಿಯೇ ಹೋಗುವ, ರಾಮದಾಸರೂ ಬರಲಿ ಹತ್ತು ದಿನಗಳ ಕಾಲ ಗುಡ್ಡ ಕಾಡು ತಿರುಗುವ" ಎಂದು ಪ್ರೇರಣೆಕೊಟ್ಟಳು ತಮ್ಮ ಕಾರ್ಯ ಕ್ರಮಗಳ ವಿವರ, ಉದ್ದೇಶಗಳನ್ನು ಬಹಿರಂಗ ಪಡಿಸದೆಯೇ ಪಯಣ ಹೊರಟರು ತಮ್ಮ ಮಿತ್ರರಾದ ಜಯದೇವ, ವಾಮದೇವರಿಗೆ ಮುಂದಾಗಿ ತಿಳಿಸಿ ಸಂಚಾರ ಕೈಕೊಳ್ಳುವ ನಿಶ್ಚಯ ಮಾಡಿದರು. ಸಮಯವೂ ಅನುಕೂಲವಾಗಿತ್ತು ಆದಿವಾಸಿಗಳ ಬೇನಾಯ ತೊಡ ಗುವುದಕ್ಕೆ ಇನ್ನೂ ಮೂರು ನಾಲ್ಕು ತಿಂಗಳಿವೆ

ಕಿಗ್ಗಳ್ಳಿಯಲ್ಲಿ ಪಟ್ಟೆದಾರರಿಂದ ಅವರಿಗೆ ಆದರದ ಆತಿಥ್ಯ, ಸ್ವಾಗತ ಕಾದಿತ್ತು ಹಿಂದೆ ಬರಿಯ ಅರುಣಾಚಲಯ್ಯನವರಾಗಿ ಬಂದಿದ್ದರೆ, ಈಗ ಪ್ರಧಾನಿಗಳಾಗಿ ಬಂದುದರಿಂದ ನಾಲ್ಕು ಜನ ಸೇರಿ ದರು. ಅಧಿಕಾರವರ್ಗವೂ ಅನಿವಾರ್ಯವಾಗಿ ಸೇರಿಕೊಂಡಿತು. ಜಯದೇವ, ವಾಮದೇವರಿಗೂ ಮೂಕ ಸ್ವಾಗತ ಇಷ್ಟವಿಲ್ಲದುದರಿಂದ ಗ್ರಾಮವಾಸಿಗಳ ಸಭೆಯೊಂದನ್ನು ಏರ್ಪಡಿಸಿದರು ಆದರೆ ಆ ಸುದ್ದಿ ಭೀಮನೂರಿನಿಂದ ಬಂದ ಮಾನಪ್ಪನಿಗೂ ಸಿಗಬೇಕೇ? ಆತ ಕೆಲವಾರು ಬೆಂಬಲಿಗರನ್ನು ಕಟ್ಟಿಕೊಂಡು, ನೆರೆಗ್ರಾಮದ ರೈತರ 'ಜಾಥಾ' ಒಂದನ್ನು ಹೊರಡಿಸಿ ಕೂಗುತ್ತ, ಕಿರುಚುತ್ತ, ಮೆರವಣಿಗೆಯನ್ನು ಹೊರಡಿಸಿ ತಂದ ತಂದೆ ಅಲ್ಲಿರಬಹುದೆಂದು ತಿಳಿದು, ತಾನು ಅಡಗಿ ನಿಂತ. ಜಾಥಾದವರು ಎರವಲುಕೊಂಡ ಒಬ್ಬ ಶ್ರಮಗಾರ ಮುಖಂಡ ನೊಡನೆ ಪ್ರಧಾನಿಗಳ ಭೇಟಿಯನ್ನು ಬೇಡಿದರು ಅವರು 'ಆಗಲಿ' ಎಂದಾಗ ರೈತರ ಮನವಿಯೊಂದು ಬಂದಿತು ಹಿಂದಿನ ಮನವಿಗಳಂತೆ ಅದೂ ಇತ್ತು. ಇರುವ, ಇಲ್ಲದಿರುವ ಕೊರಗುಗಳ ಮನವಿಯದು. "ಉಳುವ ರೈತರಿಗೇನೇ ಭೂಮಿ ಹಂಚಿಕೊಡಬೇಕು. ಜಮೀನ್ದಾರರ ಭೂಮಿ ಕಿತ್ತು ಬಡವರಿಗೆ ಕೊಡಬೇಕು ಪರಿಹಾರಕೊಡದೆ ಜಮೀ ನ್ದಾರಿ ರದ್ದಾಗಬೇಕು" ಎಂಬಿತ್ಯಾದಿ ಹಲವು ಸೂಚನೆಗಳಿದ್ದುವು. ಆ ವಿಷಯದಲ್ಲಿ ಪ್ರಶ್ನೋತ್ತರಗಳಾದುವು

ಅರುಣಾಚಲಯ್ಯ “ಇಷ್ಟೊಂದು ಮಂದಿ ಇಲ್ಲಿಗೆ ದಣಿದು ಬಾರದಿದ್ದರೂ ರೈತರ ಕೊರಗನ್ನು ನಾನು ತಿಳಿದವನೇ. ನಾನು ಹಳ್ಳಿಯಲ್ಲಿ ಹುಟ್ಟಿದವ. ಈ ಪ್ರಶ್ನೆಯ ಪರಿಹಾರಕ್ಕೆ ಸುಲಭೋಪಾಯ ತಿಳಿದಿದ್ದರೆ ಈ ಕ್ಷಣವೇ ಮಾಡುತ್ತಿದ್ದೆ. ಬರಿದೇ ಭೂಮಿ ಹಂಚಿಕೊಟ್ಟುದರಿಂದಲೇ, ನಿಮ್ಮ ಬಡತನದ ಸಮಸ್ಯೆ ಮುಗಿದೀತೆಂದು ನಾನು ತಿಳಿಯುವುದಿಲ್ಲ. ಹಾಗೆ ಹಂಚಿಕೊಟ್ಟರೂ ಈ ಗೊಂಡಾರಣ್ಯದಲ್ಲಿ ತಲೆಯೊಂದರ ಅರ್ಧ ಎಕ್ರೆ ಜಮೀನೂ ಬರಲಾರದು. ಜಮೀನ್ದಾರಿ ಹೋಗಬೇಕಾದ ಕಾಲವೂ ಬಂದಿದೆ ಎಂಬುದು ನನಗೆ ಗೊತ್ತು. ಅವರೊಡನೆ ಒಂದು ಒಪ್ಪಂದಕ್ಕೆ ಬರುವುದು ಸಾಧ್ಯ. ಆದರೆ ಒಂದು ಪಂಗಡದ ಉದ್ಧಾರಕ್ಕೆ ಇನ್ನೊಂದು ಪಂಗಡ ಸುಲಿಯುವ ಕೆಲಸ ನನಗೆ ಇಷ್ಟವಿಲ್ಲ. ಸುಲಿದುಕೊಟ್ಟರೂ, ಒಂದು ಕುಟುಂಬಕ್ಕೆ ಒಂದು ಒಂದೂವರೆ ಎಕರೆ ಬರಡು ಜಮೀನಿಂದ ಜೀವನ ಸಾಗಲಾರದು” ಎಂದರು.

ಆದಕ್ಕೆ ನುರಿತ ಅವರ ಮುಂದಾಳು “ಕಲೆಕ್ಟಿವ್ ಫಾರ್ಮ್” ಎಂದು ಕಿರಿಚಿದ.

“ಸರಿಯೆ, ಕಲೆಕ್ಟಿವ್ ಫಾರ್ಮ್, ಕುಓಪರೇಟಿವ್ ಫಾರ್ಮ್ ಈ ಮಾತುಗಳು ನನಗೂ ತಿಳಿದಿವೆ. ನಮ್ಮ ಸಹಕಾರಿ ಸಂಸ್ಥೆಗಳಲ್ಲಿ ಎಷ್ಟು ಸಹಕಾರ ಉಳಿದಿದೆ ಎಂಬುದೂ ಗೊತ್ತು. ಇಂಥ ಪ್ರಯೋಗ ನಡೆಯಿಸಲು ರೈತರು ಮುಂದೆ ಬಂದರೆ, ಸರಕಾರಕ್ಕೆ ಸೇರಿದಂಥ ಸಾವಿರಾರು ಎಕರೆ ಜಮೀನು ನಾನು ಕೊಡಲು ಸಿದ್ಧನಿದ್ದೇನೆ. ಆದರೆ—ಯಾರೊಬ್ಬರಿಗೂ ಅದರಲ್ಲಿ ಸ್ವಂತ ಹಕ್ಕಿಲ್ಲ. ಅದು ಹತ್ತು ಜನರದು—ಎಂದು ನಂಬಿ ನಡೆಯಿಸಿ ತೋರಿಸಿದರಾದರೆ, ಶ್ರಮವಾದಿಗಳಾದ ನೀವು ದೇಶಕ್ಕೆ ಉಪಕಾರ ಮಾಡುತ್ತೀರಿ. ಆ ಹೊಣೆ ಹೊರುತ್ತೀರಾ? ಬರುತ್ತೀರಾ” ಎಂದು ಜಾಥಾ ಮುಖಂಡನನ್ನು ಕೇಳಿದರು.

“ಅದು ನಿಮ್ಮ ಹೊಣೆ, ಸರಕಾರದ ಕೆಲಸ”

“ಯಾವುದು? ಜಮೀನು ಒದಗಿಸುವುದೇ? ಸಹಕಾರದಿಂದ ರೈತರು ಕೃಷಿ ಮಾಡುವಂತೆ ಮಾಡುವುದೇ”

“ಎರಡೂ”

ಅರುಣಾಚಲಯ್ಯನವರು ನಕ್ಕರು. “ಜನ ತಮ್ಮ ಪಾಲಿನ ಹೊಣೆ

ಹೊರುವುದಕ್ಕೆ ಸಿದ್ಧರಾದರೆ ಮಾತ್ರ ಸುಧಾರಣೆಯಾದೀತು ಇಲ್ಲ ವಾದರೆ–ಬರಿಯ ಗುಲ್ಲು ಸಿದ್ಧೆಗೇಡಾದೀತು ಈಗ ಧನಿಯ ಹೊಲ ವನ್ನು ರೈತ ತನ್ನದೆಂದು ತಿಳಿಯಲಾರ ನಾಳೆ ಸಹಕಾರಿ ಹೊಲವನ್ನೂ ಹಾಗೆಂದು ತಿಳಿಯಲಾರ ಅಲ್ಲಿಯ ತನಕ ಅವಸೂ ಪುಟ್ಟ ಬಂಡ ವಳುಗಾರನೇ ಬರಿದೇ ಪುಕ್ಕಟೆ ಭೂಮಿಯನ್ನು ಕೊಟ್ಟರೆ, ಅದನ್ನು ಕೊಂಡಾನು, ಅದನ್ನು ವಿಕ್ರಯಿಸಿ ನಾಳೆ ಹಣಗಳಿಸಿಯಾನು ನಾನು ವಾದಕ್ಕಾಗಿ ಮಾತನಾಡುತ್ತಿಲ್ಲ. ಕಲೆಕ್ಟಿವ್ ಫಾರ್ಮ್ ಅನ್ನುವವರು ಅಂಥ ಪ್ರಯೋಗ ಮಾಡಲು ಸಿದ್ಧರಾಗಬೇಕು ಆಗ ಸರಕಾರ ತನ್ನ ಪಾಲಿನ ಸಹಾಯ ಮಾಡುತ್ತದೆ"

ಅದರ ಮುಖಂಡ ಪ್ರತ್ಯುತ್ತರ ರೂಪದಲ್ಲಿ ನಕ್ಕ ಆತನ ವೃತ್ತಿ ಬೇಸಾಯವಾಗಿರಲಿಲ್ಲ, ಚಳವಳಿ ಬೆಳೆಯಿಸುವುದು ಆದುದರಿಂದ "ಸಮ್ಮಿಶ್ರ ಸರಕಾರ ಮುರ್ದಾಬಾದ್" ಎಂದು ಕೂಗಿಕೊಂಡು ಹೊರಟ ಮುಂದಣ ವರ್ಷ ಧನಿಗಳಾದವರಿಗೆ ಲಾವಣಿ ಕೊಡದ ಹೊಸ ಸತ್ಯಾಗ್ರಹದ ಕನಸು ಹೊಸೆಯುತ್ತಾ ಮರಳಿದ ಪ್ರಧಾನಿಯ ಬಾಯನ್ನು ಕಟ್ಟಿದೆನಲ್ಲ ಎಂಬ ಹಿಗ್ಗು ಅವನದು

ಮಾನಪ್ಪ ಆ ಗ್ರಾಮಕ್ಕೆ ನೇತ್ರರಾಯನ ಗುಪ್ತಚಾರನಾಗಿ ಬಂದಿದ್ದ ಹೇಗೋ ಅವನ ಕಿವಿಗೆ ಇವರ ಪ್ರಯಾಣ ಉದ್ದೇಶ ತಿಳಿದು ಬಂದಿದೆ. ಅದರ ವಿವರ ತಿಳಿಯುವುದಕ್ಕೆ ಅರಣ್ಯ ಪರಿಚಿತಿ ಯುಳ್ಳ ಅವನನ್ನು ಗುಪ್ತಚಾರರನ್ನಾಗಿ ಕಳುಹಿಸಿದ್ದಾನೆ ಆತ ತಲೆ ಮರೆಯಿಸಿಕೊಂಡು ಕಾದು ಕುಳಿತಿದ್ದ

ಮೊದಲ ದಿವಸ ಅರುಣಾಚಲಯ್ಯನವರು ಒಕ್ಕಲುಗಳ ಬೇಡಿ ಕೆಯ ವಿಚಾರಗಳಲ್ಲಿ ಪಟ್ಟೆದಾರರ ಅಭಿಪ್ರಾಯವೇನು? ಲಾವಣಿಯ ಮಿತಿಯೇನು? ಸ್ವಂತ ಜಮೀನಿನ ಮಿತಿ ಏನಿರಬೇಕು, ಜಮೀನು ದಾರಿ ರದ್ದತಿಯಾಗುವಲ್ಲಿ ಪರಿಹಾರದ ಪ್ರಮಾಣ, ರೂಪುಗಳು ಹೇಗೆ– ಎಂಬುದನ್ನೆಲ್ಲ ತರ್ಕಿಸಿದರು ಜಯದೇವರಿಗೆ ಬಂದ ಹೊಸಗಾಲದ ಅರಿವುಂಟು, ಹಳೆಯ ದಿನಗಳು ಹೋದುವೆಂದು ಬಲ್ಲವರು· "ಅರಸು ಗಳೇ ಉರುಳಿರುವಾಗ ನಾವೇನು ಹೆಚ್ಚು? ಆದರೆ ಬರಿಯ ಭೂಮಾಲಿ ಕರು ಮಾತ್ರ ಭೂಮಿ ಕಳೆದುಕೊಳ್ಳಲಿ, ತ್ಯಾಗ ಮಾಡಲಿ, ಸಮಾಜದ

ಇತರರೂ, ಹೆಚ್ಚಿನ ವರಮಾನವುಳ್ಳ ವ್ಯಾಪಾರಿಗಳು, ಅಧಿಕಾರಿಗಳು ಇದ್ದಂತೆಯೆ ಇರಲಿ–ಎನ್ನುವುದು ನ್ಯಾಯವಾಗಲಾರದು. ಉಳಿದವರು ಎಷ್ಟು ತ್ಯಾಗಕ್ಕೆ ಸಿದ್ಧರೋ ಅಷ್ಟಕ್ಕೆ ನಾವು ಸಿದ್ಧರು. ನೀವು ಬಯಸಿದರೆ ನಾವಾಗಿಯೇ ಭೂಮಾಲಿಕರ ಪರಿಷತ್ತನ್ನು ಕರೆಯುತ್ತೇವೆ. ಇಲ್ಲದ ವರ್ಗಕಲಹ ಹುಟ್ಟಿಸಿ, ದ್ವೇಷ ಬೆಳೆಯಿಸಿ ಈ ಪ್ರಶ್ನೆ ಬಗೆಹರಿಯಬಾರದು ನಾವು ಪರದೇಶಿಯರಲ್ಲ, ನಮ್ಮ ಒಕ್ಕಲುಗಳೂ ಅಲ್ಲ" ಎಂದರು ಅರುಣಾಚಲಯ್ಯ ಆ ಮಾತುಗಳನ್ನು ಕೇಳುತ್ತ, ಅವರನ್ನೇ ನೋಡುತ್ತ "ಭೂಮಿಯನ್ನು ರಾಷ್ಟ್ರೀಕರಣ ಮಾಡಿದರೆ ಹೇಗೆ?" ಎಂದು ಬೇಕೆಂದೇ ಪ್ರಶ್ನಿಸಿದರು ಕಾಂಚನಮಾಲೆ ಅವರನ್ನೇ ನೋಡುತ್ತಿದ್ದಳು ಆಗ ವಾಮದೇವರು "ಅದನ್ನೇ ಅಣ್ಣ ಹೇಳಿದ್ದು–ಕೇವಲ ಒಂದು ವರ್ಗವನ್ನೇ ಬಲಿಹಾಕುವ ಧೋರಣೆ ನ್ಯಾಯವಲ್ಲವೆಂದು ಎಲ್ಲ ಬಗೆಯ ಖಾಸಗಿ ಸಂಪತ್ತನ್ನು ರಾಷ್ಟ್ರೀಕರಣಗೊಳಿಸುವಾಗ ಇದನ್ನೂ ಮಾಡಿ ಬರಿಯ ಭೂಮಾಲಿಕರೇಕೆ ನಿಮ್ಮ ಕಣ್ಣು ಕುಕ್ಕಬೇಕು? ಎಲ್ಲವನ್ನೂ ರಾಷ್ಟ್ರೀಕರಣ ಮಾಡಿದ್ದಾದರೆ ಆಗ ಬಂಡವಳಗಾರರು, ಶ್ರೀಮಂತರು ಈಗ ಏನು ಮಾಡುತ್ತಾರೋ ನಾಳೆ ಅದೇ ಕೆಲಸವನ್ನು ಸರಕಾರಿ ನೌಕರರು ಮಾಡುತ್ತಾರೆ ಸುಲಿಗೆ ಮಾಡುವ ಜನ ಬದಲಾಗುತ್ತಾರೆ, ನೀತಿ ಬದಲಾಗುವುದಿಲ್ಲ

"ಈಗಲೇ ಅನ್ನುತ್ತೀರಿ–ಒಕ್ಕಲು ಧನಿಗಳಿಗೆ ಲಾವಣಿ ಕೊಟ್ಟ ಮೇಲೆ ಅವನಿಗೆ ಏನೂ ಉಳಿಯುವುದಿಲ್ಲವೆಂದು. ಧನಿಯ ಸ್ಥಾನದಲ್ಲಿ ಸರಕಾರ ಬಂದರೆ ತೆರಿಗೆಯ ಭಾರ ಅಷ್ಟೇ ಹೆಚ್ಚಬೇಕು ಆಗಲೂ ರೈತನಿಗೆ ಉಳಿಯುವುದು ಅಷ್ಟೆ ಅದಕ್ಕೆ ಇನ್ನು ಮುಖ್ಯ ಕಾರಣ, ಈ ನೆಲ ಪದಿನೆರಡು ತಿಂಗಳು ಅವನ ಹೊಟ್ಟೆಗೆ ಅನ್ನ ಹಾಕಲಾರದ್ದು"

"ಜಯದೇವರೇ, ನಾನು ಪ್ರಶ್ನೆ ಕೇಳಿದೆನಷ್ಟೆ. ನನಗೆ ರಾಷ್ಟ್ರೀಕರಣದ ಅತಿ ಮೋಹವಿಲ್ಲ ಭೂಮಿಯ ವಿಚಾರದಲ್ಲಂತೂ ಇಲ್ಲವೇ ಇಲ್ಲ. ಈಗಿನ ಹಿಡುವಳಿಗೆಗಳ ಹಂಚಿಕೆ ವಿತರಣೆಯಿಂದ ನಡೆಯಬೇಕು ನಿಜ ಆದರೆ, ಅದು ನೀವಂದಂತೆ, ವರ್ಷಕ್ಕೆ ನಾಲ್ಕು ತಿಂಗಳ ಅನ್ನ ಕೊಟ್ಟೀತು ಉಳಿದ ಎಂಟು ತಿಂಗಳಿಗೆ ಅನ್ನದ ದಾರಿ ತೋರಿಸುವ ತನಕ ರೈತನ ದುಃಸ್ಥಿತಿ ಹೋಗಲಾರದು. ಇನ್ನೊಂದು ಮುಖ್ಯ

ಸಂಗತಿ–ಈ ನೆಲ ತನ್ನದು ಎಂಬ ಮಮತೆ ರೈತನಿಗೆ ಬಾರದಲ್ಲಿ, ಜಮೀನು ಹಾಳು ಬೀಳುತ್ತದೆ ಕಲೆಕ್ಟಿವ್ ಫಾರ್ಮ್‌ನ ದೋಷ ಅದು. ಅದರಿಂದ ವ್ಯಕ್ತಿಗೆ ನೆಲ ತನ್ನದು ಎಂಬ ಮೋಹ ಹುಟ್ಟಲಾರದು ಎಂದೇ ನನಗೆ ಅನಿಸುತ್ತದೆ" ಎಂದು ಅರುಣಾಚಲಯ್ಯನವರು ನುಡಿದಾಗ ಕಾಂಚನಮಾಲೆ ನಗುತ್ತಿದ್ದಳು

ಜನ ಸರಿದು, ಕೂಟ ಮುಗಿದು, ರಾತ್ರಿ ವಿರಮಿಸುವಾಗ ಹಿಂಬಾಲಿಸಿ ಬಂದ ಅಧಿಕಾರಿಗಳು "ನಾಳಿನ ಕಾರ್ಯಕ್ರಮ ?" ಎಂದು ಕೇಳಿದರು ಆಗ ಅರುಣಾಚಲಯ್ಯ ಕಲೆಕ್ಟರರನ್ನು ಕರೆದು "ನಾಳಿಂದ ಎಂಟು ದಿನ ನಮ್ಮ ಕಾರ್ಯಕ್ರಮ ರಹಸ್ಯದ್ದು ನೀವು ಬರುವುದಾದರೆ ಬನ್ನಿ ಒಬ್ಬಿಬ್ಬರು ಪೋಲೀಸರು ಸಾದಾ ಉಡಿಗೆಯಲ್ಲಿ ಬರಲಿ ಇಷ್ಟೆಲ್ಲ ಪರಿವಾರ ಬೇಡ" ಎಂದರು "ನಾನು ?" ಎಂದು ಕೇಳಿದ ಪೋಲೀಸು ಸೂಪರಿಡೆಂಟ್ "ಒಳ್ಳೆಯ ವಿಶ್ರಾಂತಿ ತೆಗೆದುಕೊಳ್ಳಿ" ಎಂದರು ಅವರಿಗೆಲ್ಲ ವಿಸ್ಮಯವೇ ಅಲ್ಲಿಂದ ಜಯದೇನ, ವಾಮದೇವರೊಡನೆ ತಾವು ಬಂದ ಮೂಲ ಉದ್ದೇಶವನ್ನು ತಿಳಿಸಿದರು ಅಲ್ಲೇ ಅಂಗಳದಲ್ಲಿ ತಾಂಬೂಲ ಮೆಲ್ಲುತ್ತ ಕುಳಿತಿದ್ದ ಮುಕ್ಕಣ್ಣನನ್ನು ಕರೆದು "ಮುಕ್ಕಣ್ಣ, ನಾಳೆ ಪ್ರಧಾನಿಗಳು ಮಲೆಗೆ ಹೋಗಬೇಕು ಅನ್ನುತ್ತಾರಲ್ಲ ಕಳೆದ ಆವೃತ್ತಿಯಂತೆ ನಾಲ್ಕು ದಿನ ಬೆಟ್ಟ ಸುತ್ತಾಡಬೇಕಂತೆ" ಎಂದರು

"ಈಗ ಏನೂ ಹಿಂದಿನ ಕ್ಷಾಮವಿಲ್ಲ, ಕಾಡು ಕಡಿಯುವುದೂ ನಿಂತಿದೆಯಂತೆ ಯಾರೆಲ್ಲ ಹೊರಡುವುದು ? ಎಷ್ಟು ಹೊತ್ತಿಗೆ ? ಮೊದಲೇ ಜನ ಕಳುಹಿಸ ಬೇಡವೇ"–ಎಂದು ಕೇಳಿದ್ದಕ್ಕೆ ಜಯದೇವರು ಅಲ್ಲಿ ಕುಳಿತವರನ್ನು ತೋರಿಸಿ "ಇವರೇ ನಾಲ್ಕಾರು ಮಂದಿ, ನಾನಾಗಲಿ, ತಮ್ಮನಾಗಲಿ" ಎಂದರು

"ಆ ಅಮ್ಮನವರು ಬರುತ್ತಾರೆಯೇ ? ನಡೆಯಬೇಕಲ್ಲ" ಎಂದ ಮುಕ್ಕಣ್ಣ

ಎಲ್ಲರೂ ನಕ್ಕರು. ಜಯದೇವರು ನಗುತ್ತ "ಮುಕ್ಕಣ್ಣ, ಆ ಅಮ್ಮ ಹಿಂದೆ ಮಂತ್ರಿಗಳಾಗಿದ್ದವರು. ಈಗ ಅದಕ್ಕಿಂತ ಹೆಚ್ಚು ದುಡಿಯುತ್ತಾರೆ ಅವರಿಗೂ ಈ ಕಾಡನ್ನು ನೋಡುವ ಹುಚ್ಚು.

ಸ್ವಲ್ಪ ಗುಡ್ಡಗಾಡು ಸುತ್ತಿ ಕಷ್ಟ, ಸುಖ ತಿಳಿಯಲಿ" ಎಂದರು

ಮುಕ್ಕಣ್ಣ ಬೇಗಿನ ಜಾವಕ್ಕೆದ್ದು ದೊಂಡಾಲ ಸೀಮೆಗೆ ದೂತರನ್ನು ಕಳುಹಿಸಿದ ಬೆಳಕು ಹರಿದು, ಉಪಾಹಾರ ಮುಗಿಸಿ, ಇವರೆಲ್ಲ ಕೂಲಿಗಳೊಂದಿಗೆ ಸಾಮಾನು ಹೊರಿಸಿಕೊಂಡು ಪಯಣ ಹೊರಟರು. ದಾರಿಯಲ್ಲಿ ಜಯದೇವರು ಮುಕ್ಕಣ್ಣನಿಗೆ ಅವರು ಬಂದ ಉದ್ದೇಶವನ್ನು ಹೇಳಿದರು ಅದಕ್ಕೆ ಆತ "ಅದು ಮಾತ್ರ ಹೇಗೋ, ಅವರು ಈತನಕ ಎಲ್ಲಿಗೂ ಪರವೂರಿಗೆ ಕೆಲಸಕ್ಕೆ ಹೋದವರಲ್ಲ" ಎಂದಾಗ ಧನಿಗಳು "ನೀನು ಅವರನ್ನು ಒಲಿಸಬೇಕು ಕಳೆದ ಬಾರಿ ಕ್ಷಾಮ ಬಂದಾಗ ಗೊಂಡಾರಣ್ಯದ ಎಷ್ಟೋ ಮಂದಿ ಕಣಿವೆಗೆ ಹೋಗಿದ್ದರು ಅಲ್ಲದೆ ನೋಡು, ಭೀಮನೂರಿನಲ್ಲಿ ಕೆಲಸಗಾರರು ಓಡಿ ಹೋಗುವುದಕ್ಕೆ, ನಿನ್ನ ಮಗ ಮಾನಪ್ಪ ಗುಲಾಲಿ ಟೋಪಿಯವರೊಡನೆ ಸೇರಿ ಮಾಡಿದ ಮಲಾಮತಿಯೇ ಕಾರಣ ನಾವೀಗ ಸರಕಾರದ ಮಾನ ಉಳಿಸಬೇಡವೇ ?" ಎಂದರು

"ಅಯ್ಯ, ಮಾನಪ್ಪ ಕಿಗ್ಗಳ್ಳಿಗೆ ಬಂದಿದ್ದನಂತೆ ನಿನ್ನೆ, ಮೊನ್ನೆ ಗ್ರಾಮದಲ್ಲಿ ಇದ್ದನೆಂದು ನನಗೆ ಸುದ್ದಿಯಿದೆ ಎಲ್ಲಿಯೋ ಅಡಗಿ ಕುಳಿತಿರಬೇಕು ನಿನ್ನೆ ರೈತರು ದಂಡು ಕಟ್ಟಿ ಬಂದರಲ್ಲ–ಅದು ಅವನದೇ ಕಾರುಭಾರು ಒಂದು ಸಾರಿ ನನ್ನ ಕೈಗ ಸಿಕ್ಕಿದರೆ ಅವನನ್ನು ಬಡಿದು ಹಣ್ಣು ಮಾಡುತ್ತಿದ್ದೆ"

"ಅಂಥ ಮಾತು ಯಾಕೆ ಆಡುತ್ತೀ ? ಅವನಿಗೆ ಬುದ್ಧಿಯಿಲ್ಲ."

"ನನ್ನ ಹೊಟ್ಟೆಯುರಿ ನಿಮಗೇನು ತಿಳಿಯುತ್ತದೆ?"

"ಕಳೆದ ಚುನಾವಣೆಯಲ್ಲಿ ನಮಗೆ ಎದುರು ನಿಂತು ಕೆಲಸ ಮಾಡಿದ ಎಂದಲ್ಲವೇ ? ಆ ದಿವಸಗಳಲ್ಲಿ ಉಂಡ ಅನ್ನದ ನೆನಪು ಎಷ್ಟು ಜನಕ್ಕೆ ಉಳಿದಿತ್ತು ?"

"ಅದಲ್ಲ ಧನಿಯೇ, ಆ ದಿನ ನಿಮ್ಮ ಮನೆಯನ್ನು ಸುಲಿದವರು–ಅವನೂ ಅವನ ಜನಗಳೂ ಆ ಉರಿಯನ್ನು ಮರೆಯಲಾರೆ."

ಒಂದು ಕ್ಷಣ ಅವರು ಅವನ ಮುಖವನ್ನೇ ಕಂಡರು ಆತ "ಈಗ ಬೇಡ ಇನ್ನೊಂದು ದಿನ ಹೇಳುತ್ತೇನೆ" ಎಂದು ಮಾತು ಮುಗಿಸಿ ಸುಮ್ಮನಾದ

ದೊಂಡಾರಣ್ಯಕ್ಕೆ ಪ್ರಧಾನಿಗಳೂ, ಮಂತ್ರಿಗಳೂ ಬರುತ್ತಾರೆಂದು ಮುಕ್ಕಣ್ಣ ಸೂಚನೆ ಕಳುಹಿಸಿರಲಿಲ್ಲ, ಬದಲು "ಧನಿಗಳು ಬರುತ್ತಾರೆ. ನಾನು ಇದ್ದೇನೆ ಹಿಂದೆ" ಎಂದು ತಿಳಿಸಿದ್ದ ಅಪೂರ್ವಕ್ಕೊಮ್ಮೆ ತಮ್ಮ ಬಡ ಕುಟೀರಗಳಿಗೆ ಪಟ್ಟೆದಾರರು ಬರುತ್ತಾರೆ ಎಂದರೆ ದೊಂಡಾಲರಿಗೆ ಹಿರಿಯ ಹಬ್ಬ. ಇವರು ನಡು ಮಧ್ಯಾಹ್ನಕ್ಕೆ ನಡೆದು, ಉಸಿರೆಳೆದುಕೊಂಡು, ಬೆಟ್ಟವನ್ನೇರಿ ಮೊದಲ ಕೇರಿಯನ್ನು ಸೇರಿದಾಗ ಜನ ತಂತಮ್ಮ ಕೆಲಸಗಳನ್ನು ಬಿಟ್ಟು ಗುಂಪಾಗಿ ಬಂದು ನೆರೆದಿದ್ದರು. ಅವರ ಮುಖಂಡರು ದೇವರೆಂಬಷ್ಟು ಭಯಭಕ್ತಿಯಿಂದ ಜಯದೇವರ ಮುಂದೆ, ಅವರ ಜತೆಯವರ ಮುಂದೆ ಮಣಿದರು. ಬೊಮ್ಮ ಎಂಬಾತ ಅವರೆಲ್ಲರಿಗೂ ಹಿರಿಯ.

ಜಯದೇವರು "ಬೊಮ್ಮ, ಇವರು ಯಾರೆಂದು ಗೊತ್ತೇ?" ಎಂದು ಅರುಣಾಚಲಯ್ಯನವರನ್ನು ತೋರಿಸಿ ಕೇಳಿದಾಗ ಆತ "ಅಯ್ಯಾ, ಈ ಬುದ್ಧಿಯವರು ಹಿಂದೊಂದು ಸಾರಿ ಇಲ್ಲಿಗೆ ಬಂದಿದ್ದರಲ್ಲವೇ?" ಎಂದ. ಮುದುಕನ ನೆನಪು ಚೆನ್ನಾಗಿಯೇ ಇತ್ತು. ಅಲ್ಲಿನವರಿಗೆ ಬಂದವರ ಪರಿಚಯ ಹೇಳಿದರು. ಅಲ್ಲಿಂದ ಹಣ್ಣು, ಎಳನೀರುಗಳ ಪ್ರಥಮ ಉಪಚಾರ ನಡೆಯಿತು. ತಮ್ಮದೊಂದು ಗುಡಿಸಲು ತೆರವು ಮಾಡಿ, ಚಾಪೆ ಹಾಸಿ ಸಜ್ಜು ಮಾಡಿಟ್ಟಿದ್ದರು. ಬೆಳಗಿನ ಜಾವವೇ ಮುಂಚಿತವಾಗಿ ಬಂದ ಅಡುಗೆಯವರು ಘಮಘಮ ಅಡುಗೆಯನ್ನು ಬೇಯಿಸುತ್ತಿದ್ದರು. ಕಾಂಚನಮಾಲೆಗೆ ದಣಿವು, ಹಸಿವುಗಳಿಂದ ಮೂಗು ಚುರುಕಾಗಿತ್ತು. "ಮಿ॥ ಜಯದೇವ್ ಎಲ್ಲಿ ಹೋದರೂ ಮಂತ್ರಿಗಳ ಸುಕೃತ ಬೆನ್ನುಬಿಡುವುದಿಲ್ಲ. ಇಲ್ಲಿಯೂ ಔತಣ ಸಿಗುವ ಹಾಗಿದೆಯಲ್ಲ" ಎಂದು ನಕ್ಕಳು.

ಬಂದವರು ತಾಳಗರಿ ಹೊದೆಯಿಸಿದ ಚಪ್ಪರವೊಂದರ ಕೆಳಗೆ, ಕೇದಗೆ ಓಲೆಯ ಚಾಪೆಗಳ ಮೇಲೆ ಕುಳಿತು ವಿರಮಿಸಿದರು. ಅಲ್ಲಿಯೇ ಮಾತು, ಕತೆ, ಊಟ, ಉಪಚಾರಗಳಾದವು. ಸಂಜೆಯೊಳಗೆ ಸಮೀಪದ ಮಲೆಗಳಿಂದ ಇತರ ಆದಿವಾಸಿ ಮುಖಂಡರು ಅಲ್ಲಿಗೆ ಬಂದರು. ಮುಕ್ಕಣ್ಣ, ಬಾಲು, ಬೊಮ್ಮ ಮೊದಲಾದ ಅವರ ನಾಯಕರನ್ನು ಕರೆದು ಅವರನ್ನು ಒಲಿಸಲು ಪ್ರಯತ್ನಿಸುತ್ತಿದ್ದ ಅವರು "ದಣ್ಣಾ

ಯಕರೇ, ನಮಗೆ ಕೂಲಿ, ನಾಲಿ ಯಾಕೆ ? ಇಲ್ಲಿ ಏನು ಕಡಿಮೆ ಯಾಗಿದೆ ? ಕೂಲಿಯಾಸೆಯಿದ್ದರೆ ಧನಿಗಳ ಭೂಮಿಯಲ್ಲಿ ಹೋಗಿ ಕೆಲಸ ಮಾಡಬಾರದೇ ? ಒಂದು ಸಂಜೆ ಕುಡಿಯದೆ ನಮಗೆ ದಿನ ಹೋಗದು ಒಂದು ವಾರ ಬೇಟೆಯಿಲ್ಲದೆ ಬಾಳು ಸಾಗದು ನೀವು ಮೂರು ತಿಂಗಳ ಕಾಲ ಊರು ಬಿಡಬೇಕೆಂದರೆ ಯಾರು ಬರುತ್ತಾರೆ?" ಎಂದರು

" ನಿಮಗೋಸ್ಕರ ನೀವು ಬರುವುದಲ್ಲ, ನಿಮಗೆ ಏನೂ ಬೇಡ ವೆಂಬುದು ಗೊತ್ತು ಒಂದು ಮರ್ಯಾದೆ ಹೋಗುವ ಪ್ರಸಂಗ ಬಂದಿದೆ " ಎಂದು ಮುಕ್ಕಣ್ಣ ಧನಿಗಳಿಂದ ತಾನು ಕೇಳಿದ ಪ್ರಕರಣ ವನ್ನು ಅವರಿಗೆ ಹೇಳಿ, ಆ ಒಡ್ಡು ಪೂರ್ಣವಾಗದೆ ಹೋದರೆ ಸಾವಿರಾರು ಎಕರೆ ಜಮೀನು ಮುಂದಣ ವರ್ಷ ಬೇಸಾಯಕ್ಕೆ ಬರು ವುದು ನಿಲ್ಲುತ್ತದೆ ಎಂದು ವಿವರಿಸಿದ " ನೀವು ಗಟ್ಟಿ ಮನಸ್ಸು ಮಾಡಿ ಒಂದೊಂದು ಮಲೆಯಿಂದ ಇನ್ನೂರು, ಮುನ್ನೂರು ಮಂದಿ ಬಂದರೆ ದೊಡ್ಡ ಉಪಕಾರವಾಗುತ್ತಿತ್ತು ಆಗ ಮೊದಲು ಹೋದವರು ಅಂಜಿ ತಿರುಗಿ ಕೆಲಸಕ್ಕೆ ಬರಲೂ ಬಹುದು ಮೂರು ತಿಂಗಳ ನಂತರ ಒಂದು ದಿವಸ ನೀವು ಅಲ್ಲಿ ನಿಲ್ಲಬೇಕಿಲ್ಲ " ಎಂದ

" ಧನಿಗಳೇನು ಹೇಳುತ್ತಾರೆ ?"

" ಇಲ್ಲದೆ ಹೋದರೆ ಅವರು ಇಲ್ಲಿಯ ತನಕ ಬರುತ್ತಿದ್ದರೆ?"

" ಇಷ್ಟಕ್ಕೆ ಅವರು ಬರಬೇಕೇ ? ಹೇಳಿ ಕಳುಹಿಸಿದರೆ ನಾವು ಕೆಳಗೆ ಬರುತ್ತಿರಲಿಲ್ಲವೇ? ಧನಿಗಳ ಅಪ್ಪಣೆಯಾದರೆ ಎದುರು ಮಾತಿಲ್ಲ. ತಲತಲಾಂತರದಿಂದ ನಡೆಯಿಸಿಕೊಂಡು ಬಂದ ಅವರ ಮಾತು ಮೀರಿಯೇವೇ ?"

" ಹಾಗಲ್ಲ, ನಾವು ಬಂದು, ನಿಮ್ಮನ್ನು ಒಲಿಸಿ, ಸಮಾಧಾನ ವಾದರೆ ಇಲ್ಲಿಂದ ಆಚಿನ ಮಲೆಗಳಿಗೆ ಹೋಗ ಬಹುದು. ಅಲ್ಲಿಗೆ ನೀನೂ, ಬಾಲೂ ನಮ್ಮ ಜತೆಗೆ ಬಂದರೆ ಅವರ ಸಹಾಯವೂ ಸಿಕ್ಕೀತು. ಇಲ್ಲವಾದರೆ ಆ ಮಲೆಯವರಿಗೆ ನಮ್ಮ ಹೆಂಗಿದೆಯೋ."

" ಛೀ, ಈ ಕೆಲಸಕ್ಕೆ ಧನಿಗಳು ಮಲೆ ಮಲೆ ಸುತ್ತುವುದೇ ? ಇದು ಅವರ ಮನೆ ಕೆಲಸವೇ ? ದಣ್ಣಾಯಕರೇ, ನೀವು ಯೋಚನೆ

ಮಾಡಬೇಡಿ. ಆ ಮಲೆಯ ಬುದ್ಧಿವಂತರಾದ ಖೇತ, ಸೇನ ಇವರೆಲ್ಲಾ ನಮಗೆ ಬೇಕಾದವರೇ ಹಾಗೆ ಸಂಬಂಧವೂ ಇದೆ. ಮೂರು ದಿನ ಗಳಲ್ಲಿ ಅವರನ್ನು ಕಿಗ್ಗಳ್ಳಿ ಅರಮನೆಗೆ ತಂದರಾಯಿತಲ್ಲ" ಎಂದ ಬೊಮ್ಮ. ಆತನ ಮನಸ್ಸಿನಲ್ಲಿ ಹೋಗುವುದಕ್ಕೆ ಮುಖ್ಯ ಅಡ್ಡಿ ಯೆಂದರೆ ನಾಳಿನ ಕುಮರಿ ಬೇಸಾಯ ಅದಕ್ಕೆ ಕಾಡು ಸವರಿ ಯಾಗಿತ್ತು. ಉಳಿದ ಕೆಲಸಗಳನ್ನು ಹೆಂಗಸರು ಮಾಡಿಯಾರೆಂದು ನಂಬಿ, ತನ್ನ ಒಪ್ಪಿಗೆ ಕೊಟ್ಟ ಮುಕ್ಕಣ್ಣನ ಹೃದಯ ಉಬ್ಬಿತು. ನಂಬಿದರೆ ಇಂಥವರನ್ನು ನಂಬಬೇಕು ಅನಿಸಿತು ಆ ಸುದ್ದಿಯನ್ನು ಅರುಣಾಚಲಯ್ಯನವರಿಗೆ ತಿಳಿಸಿದಾಗ ತುಂಬ ಆನಂದವಾಯಿತು. ಆದರೂ ತಾವು ಗೊಂಡಾರಣ್ಯದ ಮಲೆಗಳಿಗೆ ಹೋಗಬೇಕಾದುದು ಕರ್ತವ್ಯವೆಂದರು

ಬಾಲು, ಬೊಮ್ಮರು "ಯಾಕೆ ಒಡೆಯ, ಬಡವರ ನಂಬಿಕೆ ಸಾಲದೇ ?" ಎಂದು ಕೇಳಿದರು ಆ ಮಾತಿಗೆ ಉತ್ತರ ಕೊಡಲಾರದೆ, ರಾತ್ರಿಯನ್ನು ಅಲ್ಲಿ ಕಳೆದು ಕಿಗ್ಗಳ್ಳಿಗೆ ಮರಳಿ ಬಂದು ಅಲ್ಲಿ ಮೂರು ದಿನ ಕಳೆಯುವ ನಿರ್ಧಾರ ಮಾಡಿದರು ಬರಿದೆ ಕುಳಿತಿರಲಾರದೆ ಗ್ರಾಮ ಸಂಚಾರ, ಪರ್ವತ ಸಂಚಾರಗಳನ್ನು ಮಾಡಿ ದಣಿದರು. ಅದೊಂದು ಕಣ್ಣಿನ ಹಬ್ಬವಾಗಿತ್ತು ಎಲ್ಲೆಲ್ಲಿಯೂ ಬೆಟ್ಟದ ಕೊರಕಲು ಗಳಿಂದ ಕಣಿವೆಗೆ ಧುಮುಕುವ ಅಬ್ಬಿಗಳನ್ನು ಕಂಡು, ಆ ಜಲ ಸಂಪತ್ತೆಲ್ಲ ಬರಿದೆ ವ್ಯರ್ಥವಾಗುತ್ತಿದೆಯಲ್ಲ ಎಂದಂದುಕೊಂಡರು.

ಬಾಲು, ಬೊಮ್ಮರು ಧನಿಗಳ ಸಂದೇಶವನ್ನು ಶಿರಸಾವಹಿಸಿ ಮಲೆ ಮಲೆ ಸುತ್ತಿದರು "ನಾವು ಮಲೆಯವರು, ಒಂದು ಊರು ಉಳಿಸುವ ಕೆಲಸ ಮಾಡಬೇಕಾಗಿದೆ" ಎಂಬ ಹೆಮ್ಮೆಯ ಮಾತನ್ನು ಇತರ ಮಲೆಗಳ ಗುರಿಕಾರರಿಗೆ ಹೇಳಿ ಅವರ ಮುಖಂಡರನ್ನು ಕರೆದು ಕೊಂಡು ಬಂದ ಸಂಬಳ, ಕೂಲಿಗಳ ಒಂದೇ ಒಂದು ಮಾತನ್ನೂ ಆಡಿದವರಿಲ್ಲ ಬರುತ್ತ ದಾರಿಯಲ್ಲಿ ಒಮ್ಮೆ ಮುಕ್ಕಣ್ಣನು ಕರೆದು "ಇದರಲ್ಲಿ ಮೋಸವೇನೂ ಇಲ್ಲವಲ್ಲ" ಎಂದು ಕೇಳಿದ

"ಏನು ಹಾಗೆಂದರೆ ? ಬಿಟ್ಟಿ ಮಾಡಿಸುತ್ತಾರೆಯೇ ? ಸಂಬಳ ಕೊಡದೆ ಅಂಥ ಕೆಲಸಕ್ಕೆ ಧನಿಗಳು ನಿಮ್ಮನ್ನು ಸೇರಿಸಿಯಾರೇ."

"ಹಾಗಲ್ಲ, ಸಂಬಳದ ಆಶೆಗೆ ನಾವು ಬರುತ್ತೇವೆ ಎಂದು ಅಂದವರೂ ಅಲ್ಲ ಬೇರೊಂದೇ ಮಾತುಂಟು ನಿನ್ನೆ ನಾನು ಗುಡಿಸಲಿಗೆ ಬಂದಾಗ ನನ್ನ ತಮ್ಮನೊಂದು ಸುದ್ದಿ ಹೇಳಿದ ಇವೆಲ್ಲ ನಮ್ಮನ್ನು ಮುಳಿಗಿಸುವ ಉಪಾಯ. ನೀರ್ಕಟ್ಟೆಯ ಕೆಲಸ ಮುಗಿಯುತ್ತಲೇ, ಕಟ್ಟೆ ಭಧ್ರವಾಗಿ ನಿಲ್ಲುವುದಕ್ಕೆ ನೂರು ಮಂದಿಯನ್ನು ಬಲಿ ಕೊಡಬೇಕಾಗುತ್ತದಂತೆ 'ನಮ್ಮಂತಹ ಹುಂಬರನ್ನು ಹುಡುಕಿದ್ದು ಅದಕ್ಕೇ ಮೊದಲಿನ ಕೆಲಸದವರು ಓಡಿದ್ದು ಅದಕ್ಕೇ' ಎಂಬ ಸುದ್ದಿ ಹೇಳಿದ"

ಮುಕ್ಕಣ್ಣನಿಗೆ ಆಶ್ಚರ್ಯವಾಯಿತು "ಯಾರು ಹೇಳಿದ ಸುದ್ದಿಯಿದು? ಅದರಲ್ಲಿ ಇಷ್ಟಾದರೂ ಸತ್ಯವಿದ್ದರೆ ನಮ್ಮ ಪಟ್ಟದಾರರು ತಮ್ಮ ಮಕ್ಕಳನ್ನು ಹಾಗೆಯೇ ಬಲಿಕೊಡಲು ಒಪ್ಪಿಯಾರೇ ? ನಮ್ಮ ಮಾನಪ್ಪ ಏನಾದರೂ ನಿನ್ನೆ ಮೊನ್ನೆ ಮನೆಗೆ ಬಂದು ಹೋದನೇ?" ಎಂದು ಕೇಳಿದ

ಮಾನಪ್ಪ ಬಂದು, ಅಸ್ತು ಸುದ್ದಿ ಹಬ್ಬಿಸಿ, ಕೀಟಲೆ ಎಬ್ಬಿಸಿ ಹೋದದ್ದು ನಿಜವೆಂದು ತಿಳಿಯಿತು ಎಲ್ಲವನ್ನೂ ಆತ ಧನಿಗಳ ಮುಂದೆ ತಿಳಿಸಿದ ಅದು ಅರುಣಾಚಲಯ್ಯನವರಿಗೂ ತಿಳಿಯಿತು. ನೀರ್ಕಟ್ಟೆಯ ತಾವಿನಿಂದ ಶ್ರಮಗಾರರು ಬೆದರಿ ವಲಸೆ ಹೋಗಲು ಮಾಡಿದ ಉಪಾಯ ಇದೇ ಇರಬಹುದೆಂದು ಅನಿಸಿತು ಗುಲಾಲಿ ಟೋಪಿಗಳ ಸಂಚಿನ ಸೂಜಿ ಹೊಗ್ಗದ ಜಾಗವಿಲ್ಲ ಎಂಬುದು ಖಂಡಿತವಾಯಿತು ಪಟ್ಟದಾರ ಸೋದರರು, ಆದಿವಾಸಿ ಮುಖಂಡರನ್ನೆಲ್ಲ ಕರೆಯಿಸಿ ಆಣೆ ಮಾಡಿ ಹೇಳಬೇಕಾಯಿತು. "ನೀವಲ್ಲಿ ಇರುವಷ್ಟು ದಿನ ನಿಮ್ಮ ದಣ್ಣಾಯಕರೂ ಅಲ್ಲಿರುತ್ತಾರ ನಿಮ್ಮ ತಲೆ ಹೋದರ ಅವನ ತಲೆ, ನಮ್ಮ ತಲೆ ತೆಗೆದುಕೊಳ್ಳಬಹುದು" ಎಂದು ಭರವಸೆಯ ಮಾತುಗಳನ್ನಾಡಿದಾಗ, ಅವರಿಗ ಧೈರ್ಯವಾಯಿತು ತಾವು ಚಾಡಿಯ ಮಾತುಗಳಿಗೆ ಕಿವಿಗೊಟ್ಟು ಅನುಮಾನಿಸಿ ಹಾಗೆಂದುದು ತಪ್ಪೆನಿಸಿತು ವ್ಯಥೆಯೂ ಆಯಿತು

ಬಂದ ಕೆಲಸವಾಯಿತು ಅರುಣಾಚಲಯ್ಯನವರು ಸಂತೋಷಚಿತ್ತರಾಗಿ ಮರಳಿದರು ಕಾಂಚನಮಾಲೆ, ರಾಮದಾಸರು ಅರೆ

ಮನಸ್ಸಿನಿಂದ ಅವರ ಜತೆಯಲ್ಲಿಯೇ ಹೋದರು ಅವರಿಬ್ಬರಿಗೂ 'ಈ ಆದಿವಾಸಿಗಳ ತಂಡ ಅಷ್ಟೊಂದು ದೊಡ್ಡದಿರಬಹುದೇ? ಅವರು ಬಂದಾರೆಯೇ?, ಬಂದರೆ ಎಷ್ಟು ಜನ ಬಂದಾರು?' ಎಂಬ ಅನುಮಾನ. ಬಹುದಿನ ಹಾಗೆ ಚಿಂತಿಸಬೇಕಾಗಿರಲಿಲ್ಲ ಅವರು ಹೊರಟು ಹೋದ ನಾಲ್ಕೈದು ದಿನಗಳಲ್ಲಿ ಮುಕ್ಕಣ್ಣನ ಹಿಂದೆ ಬಾಲು, ಬೊಮ್ಮ, ಬೇತ, ಸೇನ ಮೊದಲಾದ ಮರಿಯನಾಯಕರು ಎರಡು, ಮೂರು ಸಾವಿರ ಗಳಷ್ಟು ಗಂಡಾಳುಗಳನ್ನು ಕಟ್ಟಿಕೊಂಡು ಸೀರ್ಕಟ್ಟೆಯ ಠಾಣಕ್ಕೆ ದಂಡುಕಟ್ಟಿ ಬಂದರು ಹಿಂದು ಮುಂದಿನ ಯಾವ ಯೋಚನೆಯೂ ಇಲ್ಲದೆ, ವಸತಿ ಸೌಕರ್ಯಗಳ ಅಪೇಕ್ಷೆಯೂ ಇಲ್ಲದೆ, ಬಿಸಿಲಲ್ಲಿ ದುಡಿಯ ತೊಡಗಿದರು ಮಂತ್ರಿ ರಾಮದಾಸರು ಅಲ್ಲಿಯೇ ಮೊಕ್ಕಾಮ್ ಹೂಡಿ ಅವರಿಗೆ ಅನ್ನ, ಚಪ್ಪರಗಳ ವ್ಯವಸ್ಥೆ ಮಾಡುವುದಕ್ಕೆ ನಿಂತರು. ಬಂದ ಜನರು ಹೊತ್ತು ಗೊತ್ತಿಲ್ಲದೆ ಕೆಲಸ ಮುಗಿಸುವ ಒಂದೇ ಹಟದಿಂದ ಶ್ರಮಿಸತೊಡಗಿದರು

ಮಾನಪ್ಪ ಅವಸರದಿಂದ ವಿಕ್ರಮಪರ್ಗಕ್ಕೆ ಹೋಗಿ ಸುದ್ದಿ ತಿಳಿಸಿದ ಗುಲಾಬಿ ಟೋಪಿಯವರು ಪ್ರತಿಕ್ರಿಯಾ ಹಂಚಿಕೆ ನಡೆಸಿದರು ಬಿಟ್ಟು ಹೋದ ಕೆಲಸಗಾರ ಮುಖಂಡರಿಗ ಜನ ಹೋಯಿತು. ಇದ್ದುದರಲ್ಲಿ ಕಟ್ಟು ಮಸ್ತಾದ ನೂರಾರು ಉಘಾಳರನ್ನು ಕಲೆಯ ಹಾಕಿ, ಮಾನಪ್ಪ ಬೆಂಗಡೆಯಲ್ಲಿ ನಿಂತು, ಅವರಿಂದ ಹೊಸ ಕೆಲಸ ಗಾರರ ಮುಂದೆ ಸತ್ಯಾಗ್ರಹದ ನಾಟಕ ಹೂಡಿದ

ದ್ವೇಷಮಯವಾದ ಕೂಗು, ಬೆದರಿಸುವ ಮುಷ್ಟಿಗಳಿಂದ ಆದಿವಾಸಿಗಳ ನಡುವೆ ನಿಂತು, "ಕೆಲಸ ನಮಾಡಕೂಡದು, ನಮ್ಮ ಅನ್ನವನ್ನು ತೆಗೆಯುತ್ತೀರಾ" ಎಂದು ಭಯಗೊಳಿಸಿದರು ಕೆಲವರಿಗೆ ಭಯವೂ ಆಯಿತು, ಎದ್ದೂ ಓಡಿದರು ಕತ್ತಲು ಕಳೆದ ಮೇಲೆ ಅವರ ವಿಶ್ರಾಂತಿಗಾಗಿ ಕಟ್ಟಿಕೊಟ್ಟ ಚಪ್ಪರಗಳನ್ನು ಸತ್ಯಾಗ್ರಹಿಗಳು ಸುತ್ತಿದರು, ಸುಟ್ಟರು ಅಲ್ಲಿ ಇಲ್ಲಿ ಸಿಕ್ಕಿದ ಹತ್ತೆಂಟು ಮಂದಿಗಳನ್ನು ಬಡಿದು ಬೆದರಿಸುವ ಪ್ರಕರಣವೂ ನಡೆಯಿತು ಮುಕ್ಕಣ್ಣ ಅದರಿಂದ ಗಾಬರಿಯಾದ ಆದರೆ ಒಂದು ದಿನದ ರೌದ್ರದಿಂದ ಸರಕಾರ ಎಚ್ಚರಂತಾಳಿತು. ರಾಮದಾಸ ತಂತಿಕೊಟ್ಟು ಪ್ರಧಾನಿಗಳನ್ನು ಕರೆಯಿಸಿ

ಕೊಂಡ. ಪೋಲೀಸು ಪಡೆ ಧಾವಿಸಿ ಬಂದಿತು. ಮರು ದಿನ ಎಂದಿನಂತೆಯೇ ಅವರ ಕೆಲಸ ತೊಡಗಿತು ಸತ್ಯಾಗ್ರಹಿಗಳು ನಿರಾಶೆಯಿಂದ ರೇಗಿದರು ಕೆಲಸಗಾರರನ್ನು ಎಳೆಯಲು ಹೋದರು ಹೊಡೆತ ಬಡಿತಗಳಾದುವು ಪೋಲೀಸರು ಬರುತ್ತಲೇ ಕಲ್ಲೆಸೆಯ ತೊಡಗಿದರು. ಹಿಂಸೆಗೆ ಪ್ರತಿಹಿಂಸೆ ತೊಡಗಿತು. ಗುಂಡು ಹಾರಿತು. ಗುಲಾಲಿ ಪತ್ರಿಕೆಗಳಿಗೆ ಆಹಾರ ದೊರೆಯಿತು ಈ ಕೋಲಾಹಲದ ಭೀಕರ ರೂಪವನ್ನು ಕಂಡು ಆದಿವಾಸಿಗಳು ಅಂಜದೆ ಇರಲಿಲ್ಲ ಮುಕ್ಕಣ್ಣ ಅವರ ಬೆಂಬಲಕ್ಕಿದ್ದರೂ ಏನು ಧೈರ್ಯ ಹೇಳಿಯಾನು ? ಅವನಿಗೂ ಹೊಡೆಯುವ, ಬಡಿಯುವ, ಕೆಲಸಗಾರರನ್ನು ತಡೆಯುವ ಸತ್ಯಾಗ್ರಹದ ನೋಟ, ಮಾತು ಹೊಸತು ರೀತಿಯೂ ಹೊಸತು ಅವನ ಅಂತರಂಗದಲ್ಲಿ, ಕೆಲವೇ ವರ್ಷಗಳ ಹಿಂದೆ ತಮ್ಮ ಧನಿಗಳ ಮನೆಯನ್ನು ನುಗ್ಗಿ ಲೂಟಿಮಾಡಿದವರು ಅಂಥವರೇ ಎನಿಸಿತು ಅಷ್ಟನ್ನೆಲ್ಲ ಬಾಲು, ಬೊಮ್ಮರಂಥವರಿಗೆ ವಿವರಿಸಿ ಹೇಳುವುದು ಕಷ್ಟ ಈ ಸತ್ಯಾಗ್ರಹಿಗಳ ಗುಂಪಿನಲ್ಲಿ ಮಾನಪ್ಪ ಇದ್ದುದನ್ನು ಅವನು ಕಂಡಿರಲಿಲ್ಲ ಇರಲೇ ಬೇಕೆಂಬ ಊಹೆ ಅವನಿಗಾಗಿತ್ತು

ಎರಡನೆಯ ದಿನ ನಡೆದ ಹೊಡೆತ, ಬಡಿತ, ಹಿಂಸೆಗಳು ಉಗ್ರವಾಗಿದ್ದುವು ಹತ್ತೆಂಟು ಆದಿವಾಸಿಗಳನ್ನು ಚೆನ್ನಾಗಿ ಬಡಿದು ಕಂಗಾಲುಗೊಳಿಸಿದ್ದರು ಅವರನ್ನು ಆಸ್ಪತ್ರೆಗೆ ಸಾಗಿಸಬೇಕಾಯಿತು ಮುಕ್ಕಣ್ಣ ಅವರ ಬೆನ್ನಿಗೆ ಅಲ್ಲಿಗೆ ಹೋಗಿದ್ದ ಹೋದಾಗ ಸತ್ಯಾಗ್ರಹಿಗಳಲ್ಲಿ ಆರೆಂಟು ಮಂದಿ ಗುಂಡಿನೇಟಿಗೆ ತುತ್ತಾದರೆಂದೂ, ಸತ್ತವರ ಪಂಕ್ತಿಯಲ್ಲಿ ಮಾನಪ್ಪ ಇದ್ದನೆಂದೂ ತಿಳಿದು ಬಂದಿತು ಸುದ್ದಿಯನ್ನು ಕೇಳಿ ಬೆರಗಾದ, ಮೂಕನಾದ ಅವನ ಶವವನ್ನು ಎಲ್ಲಿಗೊಯ್ದರೋ, ಯಾರು ಸುಟ್ಟರೋ , ಯಾವುದೂ ಅವನಿಗೆ ತಿಳಿಯದು. ಅವನ ಅಂತರಂಗದಲ್ಲಿ ಕಳವಳ ತುಂಬಿತು ಅವನ ಸುದೈವಕ್ಕೆ ಜಯದೇವರು ಆ ಊರಿಗೆ ಅದೇ ದಿನ ಬಂದರು ಅವರು ಆದಿವಾಸಿಗಳನ್ನು ಕಂಡು " ಇದರಿಂದೆಲ್ಲ ಗಾಬರಿಯಾಗಬೇಡಿ. ನಾಳೆಯಿಂದ ಒಬ್ಬರೂ ನಿಮ್ಮನ್ನು ತಡೆಯಲಾರರು , ತಡೆದವರಿಗೆ ಪಾಠವಾಯಿತಲ್ಲ" ಎಂದು ಧೈರ್ಯಕೊಟ್ಟರು

ಅಲ್ಲಿಂದ ಮುಂದೆ ಮುಕ್ಕಣ್ಣನನ್ನು ಕರೆಯಿಸಿಕೊಂಡರು. ಅಲ್ಲಿ ಆಳು, ಧನಿಗಳೊಳಗೆ ಎರಡು ದಿನಗಳ ವಿಪ್ಲವದ ಕಥನವಾಯಿತು. ಮುಕ್ಕಣ್ಣ "ಅಯ್ಯೋ, ಅನ್ಯಾಯಮಾಡಿ ನನ್ನ ಮಗ ಹೀಗೆ ಸತ್ತನೇ" ಎಂದು ಮರುಗಿದ. ಮರುಗಳಿಗೆಗೆ ಸೊಸೆ, ಮೊಮ್ಮಕ್ಕಳ ನೆನಪು ಉಕ್ಕಿ ಬಿಕ್ಕಿ, ಬಿಕ್ಕಿ ಅಳತೊಡಗಿದ

ಸಂಪು ಮುರಿಯಿತು ಸಂಪೂರ್ಣವಾಗಿ ಮುರಿಯಿತು ತಿರುಗಿ ಸತ್ಯಾಗ್ರಹದ ಆಟ ನಡೆಯಲಿಲ್ಲ ಸೇತುರಾಯ ವಿಕ್ರಮನಗರದಲ್ಲಿ ಕುಳಿತೇ ಸಾರ್ವಜನಿಕ ಭಾಷಣ ಮಾಡುತ್ತ ಪ್ರತಿನಿತ್ಯ ಗದ್ದಲವೆಬ್ಬಿಸಿದ. "ಈ ನರಬೇಟೆಯು, ಶಾಂತಿಯುತ ಸತ್ಯಾಗ್ರಹಿಗಳ ಹತ್ಯಾಕಾಂಡದ ವಿಚಾರಣೆ ನಡೆಯಲೇ ಬೇಕು" ಎಂದು ತೂಗಾಡತೊಡಗಿದ ಈ ಆರೋಪಕ್ಕೆ ಅರುಣಾಚಲಯ್ಯನವರು ತಲೆ ತಗ್ಗಿಸಲಿಲ್ಲ. ಒಂದು ವಿಶೇಷ ನ್ಯಾಯಮಂಡಲವನ್ನು ನೇಮಿಸಿ, ಒಂದು ವಾರದೊಳಗಾಗಿ ನೀರ್ಕಟ್ಟಿಯ ಜಾಗದಲ್ಲೇ ವಿಚಾರಣೆ ನಡೆಸಿದರು

ನ್ಯಾಯಾಲಯದ ಮುಖ, ವಿಚಾರಣೆಯ ರೀತಿಗಳನ್ನು ತಿಳಿಯದ ಹಲವಾರು ಆದಿವಾಸಿಗಳು, ಕಂಡುದನ್ನು ಕಂಡಂತೆಯೇ ಹೇಳಿದರು ಗುಂಡಿಗೆ ಬಲಿಯಾದವರ ಚಿತ್ರವನ್ನು ಗುರುತಿಸಿ, ಅವರ ಪಾತ್ರಗಳನ್ನು ಸತ್ಯವಿದ್ದಂತೆ ಬಣ್ಣಿಸಿದರು ಒಂದು ದಿನ ಮುಕ್ಕಣ್ಣನೂ ಸಾಕ್ಷಿಗೆ ಹೋಗಬೇಕಾಯಿತು 'ಸಂಪು', 'ಸತ್ಯಾಗ್ರಹ', 'ಹತ್ಯಾಕಾಂಡ'ದ ತನಿಖೆ ಮಿಂಚಿನ ವೇಗದಿಂದ ನಡೆಯಿತು ಸತ್ಯಾಗ್ರಹದಲ್ಲಿ ಹಿಂಸೆಗೆ ಗುರಿಯಾದ ಹಲವಾರು ಆದಿವಾಸಿಗಳನ್ನು ನ್ಯಾಯಾಧೀಶರೂ ಕಂಡರು ಅವರು ತಮ್ಮ ತೀರ್ಮಾನದಲ್ಲಿ "ಇದು ಸತ್ಯಾಗ್ರಹದ ಕವಚದಲ್ಲಿ ಗೊಂಡಾರಣ್ಯವನ್ನು ಗೂಂಡಾರಣ್ಯವನ್ನಾಗಿ ಮಾಡಲು ಹೊರಟವರ ಕತೆ. .... ಬಂದ ಆದಿವಾಸಿ ಕೆಲಸಗಾರರನ್ನು ತಡೆದು, ಹಿಂಸಿಸಿ, ತಾವಾಗಿ ತಂದುಕೊಂಡ ವಿಪತ್ತಿದು, ಪೋಲೀಸು ಪಡೆಯುವರು ಕೆಲಸಗಾರರಿಗೆ ಕೊಟ್ಟ ರಕ್ಷಣೆಯಾಗಲಿ, ಸತ್ಯಾಗ್ರಹಿಗಳ ಅತಿ ವರ್ತನೆಯನ್ನು ತಡೆಯಲು ಪ್ರಯತ್ನಿಸಿ ನಿರರ್ಥಕವಾದಾಗ ಗುಂಡುಹಾರಿಸಿದ್ದಾಗಲಿ, ಈ ಸಂದರ್ಭದಲ್ಲಿ ಆತ್ಮರಕ್ಷಣೆಗೂ, ಶಾಂತಿರಕ್ಷಣೆಗೂ ಅನಿವಾರ್ಯವಾಗಿತ್ತು." ಎಂದು ಬರೆದರು ಮುಂದೆ ಆ[illegible] ಶ್ರಮಗಾರರಿಗೆ

ನಿರಾತಂಕವಾಯಿತು. ಧನಿಗಳ ಸಂತೋಷಕ್ಕಾಗಿ, ತಾವೊಂದು ಒಳ್ಳೆಯ ಕೆಲಸ ಮಾಡುತ್ತಿದ್ದೇವೆ ಎಂಬ ವಿಶ್ವಾಸದಿಂದ ಆದಿವಾಸಿಗಳೆಲ್ಲ ದುಡಿಯತೊಡಗಿದರು ಓಡಿಹೋದ ಕೆಲಸಗಾರರು ಹೊಟ್ಟೆ ಕಡಿತದಿಂದ ಮರಳಿ ಬಂದಾಗ, ಅವರನ್ನು ಸೇರಿಸಿಕೊಳ್ಳಬೇಕೇ ಬೇಡವೇ—ಎಂಬ ಪ್ರಶ್ನೆ ಬಂದಿತು ಬುದ್ಧಿಗೇಡಿಗಳಾದ ಅವರ ವಿಷಯದಲ್ಲಿ ದಯೆ ತೋರಿಸಿ ಅವರನ್ನು ಕೆಲಸಕ್ಕೆ ಸೇರಿಸಿಕೊಂಡರು ಕೆಲಸ ಇಮ್ಮಡಿ ತ್ವರೆಯಿಂದ ಸಾಗಿತು

ಅಂತು ಅವಧಿಗಿಂತ ನಾಲ್ಕು ದಿನ ಮುಂಚಿತವಾಗಿಯೇ ಕಾಲುವೆಗಳು, ನೀರ್ಕಟ್ಟೆಗಳು ಸಿದ್ಧಗೊಂಡು ಮುಂದಿನ ಮಳೆಯ ನೀರಿಗಾಗಿ ಕಾದು ನಿಂತಿತು ಮರುವರ್ಷವೇ ಅಲ್ಲಿ ವಿದ್ಯುತ್ ಉತ್ಪಾದನೆಯ ಕೆಲಸವೂ ತೊಡಗಬಹುದು ಕೆಲಸಗಾರರು ಚದರುವ ಮುಂಚೆ ಆ ದಿನವನ್ನು ಸಂಭ್ರಮದ ದಿನವಾಗಿ ಆಚರಿಸುವುದಕ್ಕೆ ಪ್ರಧಾನಿ, ಕಾಂಚನಮಾಲೆ ಮೊದಲಾದವರು ಸಾರ್ವಜನಿಕ ಉತ್ಸವವನ್ನು ಏರ್ಪಡಿಸಿದರು ಸೇತುರಾಯನಿಗೂ ಆಮಂತ್ರಣ ಹೋಗಿತ್ತು ಆ ಉತ್ಸವ ನೀರು ಬಂದುದಕ್ಕಲ್ಲ! ಕೆಲಸ ಮುಗಿಸಲು ಆಪತ್ತಿನಲ್ಲಿ ತಮಗೆ ನೆರವಾದ ಆದಿವಾಸಿಗಳನ್ನು ಗೌರವಿಸುವುದಕ್ಕೆ

ಆ ದಿನ ಅರುಣಾಚಲಯ್ಯನವರು, ಎದೆ ತುಂಬಿ ಆದಿವಾಸಿಗಳ ಗುರಿಕಾರರಾದ ಬಾಲು, ಜೊಮ್ಮ, ನೇಸ ಮೊದಲಾದವರಿಗೆ ಉಡುಗೊರೆ ಕೊಟ್ಟು ತಬ್ಬಿಕೊಂಡ ನೋಟ ಕಣ್ಣಿಗೊಂದು ಹಬ್ಬವಾಗಿತ್ತು. ಅವರನ್ನು ಸಭೆಯ ಎದುರಿಗೆ ಕರೆಯಿಸಿ, ಕೈ ಕುಲುಕಿ ಕೃತಜ್ಞತೆಯ ಮಾತುಗಳನ್ನಾಡಿದರು ನಡುವೆ ಏನನ್ನೋ ಮರೆತ ನೆನಪಾಯಿತು, "ಎಲ್ಲಿ ಮಿ. ಜಯದೇವ್ ನಿಮ್ಮ ದೂತ? ಏನು ಅವನ ಹೆಸರು?" ಎಂದು ಕೇಳಿದರು

"ಯಾರು, ಮುಕ್ಕಣ್ಣನೇ?

ಆ ಸಂಭ್ರಮದ ಹಬ್ಬದಲ್ಲಿ, ಜನಗಳ ಸಮುದಾಯದಲ್ಲಿ ಆ ನಿವಾಸಿಗಳ ತೀರ ಹಿಂದೆ ಹೋಗಿ ಮುಕ್ಕಣ್ಣ ಹುದುಗಿ ನಿಂತಿದ್ದ ಬೊಮ್ಮ ಓಡಿಹೋಗಿ "ದಣ್ಣಾಯಕರೇ, ನೀವು ಬರಬೇಕಂತಲ್ಲ" ಎಂದು ಆತನನ್ನು ಕರೆದು ತಂದ. ಈ ತನಕ ಮೌನವಾಗಿದ್ದ ಕಾಂಚನ

ಮಾಲೆ ಎದ್ದುನಿಂತಳು ಅರುಣಾಚಲಯ್ಯನವರು ಅವನನ್ನು ತಬ್ಬಿ ಗೌರವಿಸಿದ, ಮರುಕ್ಷಣದಲ್ಲಿ ಆಕೆ ಹೂವಿನಹಾರವೊಂದನ್ನು ಅವನ ಕೊರಳಿಗೆ ಹಾಕಿ "ಇಂಥ ಜೀವರು ದೇಶವನ್ನು ಕಟ್ಟುವವರು; ನಾವಲ್ಲ" ಎಂದಳು

ಆ ಸಭೆಯಲ್ಲಿ ಸೇರಿದ ಹಲವರು ವಿಕ್ರಮನಗರ, ಭೀಮನೂರು ಮೊದಲಾದ ಊರುಗಳಿಂದಲೂ, ಹಲವಾರು ಸಮೀಪದ ಹಳ್ಳಿಗಳಿಂದಲೂ ಬಂದವರಿದ್ದರು. ಅವರೆಲ್ಲರು, ಕಟ್ಟಕೊನೆಗೆ ಸನ್ಮಾನಗೊಂಡ ಮುಕ್ಕಣ್ಣನನ್ನು ನೋಡಿ, ಕಾಂಚನಮಾಲೆಯ ಮಾತಿಗೆ ಬೆರಗಾಗಿ 'ಯಾರವನು?' 'ಯಾರವನು?' ಎಂದು ಕೇಳುತ್ತಲೇ ಇದ್ದರು

ಆ ಗಳಿಗೆಯಲ್ಲಿ ಕಾಂಚನಮಾಲೆಯ ಮನಸ್ಸು ಸಂಪೂರ್ಣ ತೃಪ್ತಿಗೊಂಡಿತ್ತು ತಾನು ಮಾಡಿದ ಪಣ ಗೆದ್ದಿತು, ಸಾರ್ಥಕವಾಯಿತು ಎಂದೆನಿಸಿ ಅವಳ ಕಣ್ಣು ಆಹ್ವಾನಿತರ ಎಡೆಯಲ್ಲಿ ಸೇತುರಾಯನನ್ನು ಅರಸುತ್ತಿತ್ತು. ಆತ ಅಲ್ಲಿಗೆ ಬಂದಿರಲಾರ, ಅವನ ಜನರಾದರೂ ಬಂದಿರಬಹುದಲ್ಲ–ಎನಿಸಿತು

ಸಭೆ ಚದರುವ ಗಳಿಗೆಯಲ್ಲಿ ಜನಸಂದಣಿಯ ಯಾವುದೋ ಒಂದು ಮೂಲೆಯಿಂದ 'ಹುತಾತ್ಮ ಮಾನಪ್ಪ ಕೀ ಜೈ' ಎಂದು ಪ್ರತಿಧ್ವನಿ ಹೊರಟಿತು. ವಿಕ್ರಮನಗರದ ಪತ್ರಿಕೆಗಳಿಗೆಲ್ಲ ಆ ಹುತಾತ್ಮನ ಹೆಸರು ಚೆನ್ನಾಗಿ ತಿಳಿದಿತ್ತು ಆದರೆ ಬಹು ಜನಕ್ಕೆ, ಅವನನ್ನು ಕಳೆದುಕೊಂಡ ತಂದೆಯ ಹೆಸರು ತಿಳಿದೇ ಇರದು, ತಿಳಿಯುವಂತೂ ಇಲ್ಲ ಆದರೆ ಆ ಮಗನನ್ನು ತಾನು ಎಷ್ಟು ಮೊದಲೇ ಕಳೆದುಕೊಂಡೆ ಎಂಬ ನೋವು ಮಾತ್ರ ಮುಕ್ಕಣ್ಣಗೆ ತಿಳಿದಂತೆ ಇನ್ನೊಬ್ಬರಿಗೂ ತಿಳಿಯದು.

# ಅಧ್ಯಾಯ ೮

ಅರುಣಾಚಲಯ್ಯನವರು ಸಮ್ಮಿಶ್ರ ಸರಕಾರದ ಪ್ರಧಾನಿಗಳಾಗಿ ಕೆಲಸ ನಡೆಯಿಸಿಕೊಂಡು ಬಂದು ಮೂರು ವರ್ಷಗಳ ಕಾಲವೇ ಸಂದಿದೆ. ತಾವು ಮಾಡಿದ ಕೆಲಸಗಳ ಅಳತೆ, ತೂಕಗಳನ್ನು ತಾವಾಗಿಯೇ ಎಣಿಸಿ ನೋಡುವ ಕಾಲ ಒದಗಿದೆ ಅದರಂತೆಯೇ ಮುಂದಣ ಕೆಲಸಗಳ ರೂಪವನ್ನು, ಪಕ್ಷದ ಭವಿಷ್ಯವನ್ನು ನಿರ್ಧರಿಸುವ ಕಾಲವೂ ಬಂದಿದೆ ಸುದೈವದಿಂದ ದೇಶವಾದಿಗಳೊಡನೆ ಯಾವ ಘರ್ಷಣೆಯೂ ಇಲ್ಲದೆ ಇಷ್ಟು ದಿನ ಕೆಲಸ ನಡೆಯಿಸಿದ್ದಾಯಿತು. ಆವರಲ್ಲಿ ಕೆಲವರ ಮನಸ್ಸನ್ನಾದರೂ ತಮ್ಮ ಪ್ರಾಮಾಣಿಕತೆಯಿಂದ ಒಲಿಸಿಕೊಂಡುದು ನಿಜವಾದರೂ ಜನವಾದಿ ಸಂಸ್ಥೆಯು ದೇಶವಾದಿ ಪಂಗಡಕ್ಕಿಂತ ಕಿರಿದು. ಅದಕ್ಕೆ ಹೊರಗಿನ ಬೆಂಬಲವಿದೆ. ಇದಕ್ಕೆ ಅದೂ ಇಲ್ಲ. ಇನ್ನೆರಡು ವರ್ಷಗಳಲ್ಲಿ ಹೊಸ ಚುನಾವಣೆ ಬರಲೇ ಬೇಕು. ಆದುದರಿಂದ ಸಾಕಷ್ಟು ಮುಂಚಿತವಾಗಿ ಮುಂದಣ ಧ್ಯೇಯವನ್ನೂ, ಕಾರ್ಯೋದ್ಯಮಗಳ ವಿಸ್ತಾರವನ್ನೂ ಹಾಕಿಕೊಂಡು ಕೆಲಸ ಮಾಡಬೇಕು ಇಷ್ಟರ ತನಕ ಕೆಲಸ ಮಾಡಲಿಲ್ಲವೆಂದಲ್ಲ, ಆದರೆ ಮಾಡಿದುವೆಲ್ಲ ಚಿಕ್ಕ ಪುಟ್ಟ ತೇಪೆ ಹಚ್ಚುವ ಕೆಲಸದಂತೆ ಆವರಿಗೆ ಕಾಣಿಸುತ್ತದೆ. ಮಾಡಿದ ಕೆಲಸದಿಂದ ಹೆಚ್ಚಿನ ಭರವಸೆ ಹುಟ್ಟದೆ ಬರಿಯ ಸವಿಮಾತುಗಳಿಂದ ಮತದಾರರನ್ನು ಒಲಿಸಿಕೊಳ್ಳುವ ಸ್ವಭಾವ ಅವರದ್ದಲ್ಲ ಅವರ ಆತ್ಮಸಾಕ್ಷಿಯೇ ಅವರನ್ನು ಅಡಿಗಡಿಗೆ ಕೆಣಕುತ್ತದೆ, ಆ ನಿಲುಗನ್ನಡಿಯ ಮುಂದೆ ತಮ್ಮ ಗಾತ್ರ ಚಿಕ್ಕದಾಗಿ ಕಾಣಿಸುತ್ತದೆ. ಅವರು ಈ ತನಕ ಸಾಧಿಸಿದ ಕೆಲಸಗಳು ಮಹತ್ವವಾದುವೇ. ಆಳುವ ಯಂತ್ರದಲ್ಲಿ ನ್ಯಾಯದ ಭೀತಿ ಮೂಡಿದೆ, ಚುರುಕುತನ ತಲೆದೋರಿದೆ. ಲಂಚ, ವಂಚನೆಗಳು ತಗ್ಗಿವೆ. ಹಿಂದಿನ ಆಡಳಿತೆಗಳು ತೊಡಗಿ ಮುಗಿಯಿಸಿದ ನೀರಾವರಿ, ವಿದ್ಯುತ್ ಉತ್ಪನ್ನಗಳ ಕೆಲಸ ಪೂರ್ಣವಾಗಿದೆ. ಸಾವಿರಾರು ಹೊಸ ಪ್ರಾಥಮಿಕ

ಶಾಲೆಗಳು ತೆರೆದಿವೆ. ಒಕ್ಕಲು, ಭೂಮಾಲಿಕರ ನಡುವಣ ಸಂಬಂಧ ವನ್ನು ಒಂದು ನಿಯತ್ತಿಗೆ ತಂದು ನಿಲ್ಲಿಸಿದೆ ಅದರಿಂದ ರೈತರ ಯಾವತ್ತು ಕೊರತೆಗಳು ನೀಗದಿದ್ದರೂ-ಅವರ ಹಕ್ಕನ್ನು ಕಾಯುವ, ಸುಲಿಗೆ ತಪ್ಪಿಸುವ ಶಾಸನಗಳು ಬಹುಮಂದಿಯ ಸಮ್ಮತಿ, ಸೌಹಾರ್ದ ಗಳಿಂದ ರೂಪು ಗೊಂಡಿದೆ

ಆದರೆ ತಾವು ಬೇರೆಯೇ ಆಗಿ ಜನವಾದಿ ಪಕ್ಷವನ್ನು ಬೆಳೆಯಿಸಿ, ವಿಸ್ತರಿಸಬೇಕೆಂಬ ಆಕಾಂಕ್ಷೆಯು ಅವರಲ್ಲಿಯೂ, ಅವರ ಹಿಂಬಾಲಿ ಗರಲ್ಲಿಯೂ ಮೂಡಿದೆ ಇದಿರಾಳಿಗಳಾದ ಶ್ರಮವಾದಿಗಳನ್ನು ಹಿಮ್ಮೆಟ್ಟಿ ಸುವುದಕ್ಕೂ ಅದು ಬೇಕು ಇಲ್ಲಿಯ ತನಕ ಸಹಕರಿಸಿದ ದೇಶವಾದಿಗಳ ಅಂತರಂಗವನ್ನು ತಿಳಿಯುವುದು ತುಸು ಕಷ್ಟದ ಮಾತೇ ಅವರ ಸಂಖ್ಯೆಯು ಅಧಿಕ ಅವರ ಬೆಂಬಲಿಗರಾದ ಶ್ರೀಮಂತರಂತು ಅರುಣಾಚಲಯ್ಯನವರ ಮೇಲೆ ರೇಗಿ ಬಿದ್ದಿದ್ದಾರೆ ಸಾಹುಕಾರ ಶೀನಪ್ಪನವರಂತಹ ನೂರಾರು ಪ್ರಭಾವ ಶಾಲಿಗಳು, ತಮ್ಮ ಸ್ವಾರ್ಥದ ಆಟ ನಡೆಯದ್ದಕ್ಕಾಗಿ ಕುಪಿತರಾಗಿದ್ದಾರೆ. ಅಂಥವರ ಪಾಲಿಗೆ ಅರುಣಾಚಲಯ್ಯ 'ಸಮಾಜ ಕಂಟಕರು' ಅವರಿಗೂ, ಶ್ರಮವಾದಿಗಳಿಗೂ ವ್ಯತ್ಯಾಸವಿಲ್ಲ. ಅವರು ಬಹಿರಂಗದ ಹುಲಿ ಗಳಾದರೆ ಇವರು ಗೋಮುಖವ್ಯಾಘ್ರ ? ಇತ್ತ ತನ್ನ ಆಟ ನಡೆಯ ಗೊಡದ್ದಕ್ಕೆ ಕುಪಿತನಾಗಿರುವ ಸೇತುರಾಯನ ಪಾಲಿಗೆ-ಅರುಣಾ ಚಲಯ್ಯ-ಹುಲಿಯೂ ಅಲ್ಲ, ನಾಯಿಯೂ ಅಲ್ಲ, ಕತ್ತೆ ಕಿರುಬ.

ಶೀನಪ್ಪನಂತಹವರು ಇನ್ನೂ ದೇಶವಾದಿಗಳೊಡನೆ ಪ್ರಭಾವ ಉಳಿಸಿ ಕೊಂಡವರು ವಾಮನರಾಯನನ್ನು ಹಳಿದಾದರೂ ಅವನ ಅಧಿಕಾರದ ಅಂತ್ಯಕಾಲದಲ್ಲಿ ತಮ್ಮ ಎಣ್ಣೆಯ ಗಿರಣಿಗೆ ಒಂದು ಲಕ್ಷ ರೂಪಾಯಿಗಳ ಸಾಲ ಪಡೆದರು. ಈಗ ಗಿರಣಿಯಲ್ಲಿ ಮೊದಲಿನಷ್ಟು ಲಾಭವಿಲ್ಲ, ಕಂತುಕಟ್ಟುವುದು ಕಷ್ಟ-ಒಂದು ಅವಧಿ ಬೇಡುತ್ತಿದ್ದಾರೆ. ಅವರ ಪ್ರತಿಸ್ಪರ್ಧಿ ಮಾರವಾಡಿ ಗಿರಣಿಯವರು ಸಹ ಕಂತು ಸಲ್ಲಿಸದೆ ಅವಧಿ ಬೇಡಿದ್ದಾರೆ. ವಾಮನರಾಯ ಅಧಿಕಾರದಲ್ಲಿದ್ದರೆ ಈ ಸೌಲಭ್ಯ ಕ್ಷಣದಲ್ಲಿ ದೊರೆಯುತ್ತಿತ್ತು ಆದರೆ ಅರುಣಾಚಲಯ್ಯನವರು "ಕಂತು ಕಟ್ಟದೆ ಹೋದರೆ ಕರಾರಿನಂತೆ ಸರಕಾರ ಗಿರಣಿಯನ್ನು ವಶಪಡಿಸಿ

ಕೊಳ್ಳಬೇಕಾಗುತ್ತದೆ" ಎನ್ನುತ್ತಾರೆ ಅವರ ಬಳಿಗೆ ಸಂಧಾನ ಮಾಡುವುದಕ್ಕೆ ವಾಮನರಾಯನೇ ಖುದ್ದಾಗಿ ಹೊರಟ ಎರಡು ಗಿರಣಿಗಳ ಪರವಾಗಿ ಅವರು ಬಂದುದರಿಂದ ಶೀನಪ್ಪನವರಿಗೆ ಭರವಸೆ ಆದರೂ ತಮ್ಮ ಒತ್ತಾಯ ಹೇರಲು ಕಾಂಚನಮಾಲೆಯ ಬಳಿಗೆ ಬಂದು ಅವಳನ್ನು ಪ್ರಧಾನಿಯ ಬಳಿಗೆ ಕರೆದೊಯ್ದು

"ನೋಡಿ, ಇಂದು ಎಣ್ಣೆಯ ಉದ್ಯಮಕ್ಕೆ ಹೊರಗಿನ ಸ್ಪರ್ಧೆ ಬಲವಾಗಿ ಬಂದಿದೆ ಇದೊಂದು ಹೊಸತು ಇನ್ನೂ ನಮಗೆ ಆರಂಭದ ವೆಚ್ಚಗಳು, ಬೆಲೆಯ ಏರಿಳಿತದಿಂದಾದ ನಷ್ಟಗಳು ತುಂಬಿ ಬಂದಿಲ್ಲ ಅವರಿಗೆ ಕೊಟ್ಟ ಹಣಕ್ಕೆ ಭದ್ರತೆಯಿದೆ ಅವರು ಕೇಳುತ್ತಿರುವುದು ಬರಿಯ ವಾಯಿದೆಯನ್ನು" ಎಂದು ವಾಮನರಾಯ ಅರುಣಾಚಲಯ್ಯನವರನ್ನು ಕೇಳಿದ.

ಅಲ್ಲಿನ ಮಜೂರ ಮುಷ್ಕರದ ವೇಳೆ ಕಾಂಚನಮಾಲೆ ಅಲ್ಲಿಗೆ ಹೋಗಿ ಸ್ಥಿತಿಗತಿ, ಲೆಕ್ಕಪತ್ರ ನೋಡಿ ಅಲ್ಲಿನ ಲಾಭ ಕರಗುತ್ತಿದ್ದ ಬಗೆ ಯಾವುದೆಂದು ತಿಳಿದು ಅರುಣಾಚಲಯ್ಯನವರಿಗೆ ಪೂರ್ವಸೂಚನೆ ಕೊಟ್ಟಿದ್ದಳು.

ಬಂದ ವಾಮನರಾಯರೊಡನೆ ಅವರು, "ಸರಕಾರ ಕೈಗೊಂಡ ಕೆಲಸಗಳಿಗೆ ಹಣ ಸಾಲದೆಂಬುದು ನಿಮಗೂ ತಿಳಿದಿದೆ, ಅದಕ್ಕೂ ಸಾಲ ವಾಗಿದೆ. ಸರಕಾರದ ಯಾವ ಹತೋಟಿಯಿಲ್ಲದೆ, ಸಟ್ಟಾ ನಡೆಸು ತ್ತಿರುವ ಈ ಸಂಸ್ಥೆಗಳಿಗೆ ನಾನಾದರೆ ಸಾಲ ಕೊಡುತ್ತಿರಲಿಲ್ಲ ಈ ಮೂರು ವರ್ಷಗಳಿಂದಲೂ, ಅವರು ಒಂದು ಕಾಸನ್ನೂ ಸಂದಾಯ ಮಾಡಿಲ್ಲ ಅದು ಬಾರದೆ ಹೋದರೆ ನಾನೇನು ಮಾಡಬೇಕು ?" ಎಂದು ಕೇಳಿದರು.

"ಈಗ ಎಣ್ಣೆಯ ಧಾರಣೆ ತಗ್ಗಿದ್ದು ತಿರುಗಿ ಏರುವ ಭರವಸೆ ಯಿದೆ ತುಂಬ ಎಣ್ಣೆ ದಾಸ್ತಾನಿದೆ, ಲಾಭದ ನಿರೀಕ್ಷೆಯಿದೆ. ಮುಂದಿನ ವರ್ಷ ಎರಡೆರಡು ಕಂತುಗಳನ್ನು ಅವರು ಒಟ್ಟೊಟ್ಟಿಗೆ ಕೊಡುತ್ತಾರೆ."

"ಅಂದರೆ ನಾಲ್ಕು ಕಂತುಗಳನ್ನೇ ?"

"ಅಲ್ಲ, ಆದರ ಅರ್ಧ."

'ನಾನು ಅಂಥ ರಿಯಾಯಿತಿ ಕೊಡುವ ಮೊದಲು, ಅವರು ಸರಕಾರದ ಪರವಾದ ಒಬ್ಬ ಪ್ರತಿನಿಧಿಯನ್ನು ಅಧ್ಯಕ್ಷನನ್ನಾಗಿ ಸ್ವೀಕರಿಸಬೇಕು ಲೆಕ್ಕಪತ್ರ ಶೋಧನೆಗೆ ಸಂಪೂರ್ಣ ಅವಕಾಶ ಕೊಡಬೇಕು ಲಾಭ ಬರುವಾಗ, ಕೊಂಡ ಎಣ್ಣೆ ಮೇನೇಜಿಂಗ್ ಡೈರೆಕ್ಟರದ್ದಾಗುತ್ತದೆ, ನಷ್ಟ ಬರುವಾಗ ಅದು ಕಂಪೆನಿಯದ್ದಾಗುತ್ತದೆ ಇಂಥ ಹಲವು ನಾಟಕಗಳು ನಡೆದುದು ನನಗೆ ತಿಳಿದದ್ದು ಕಂಪೆನಿ ಹಣಗಳು ಹಲವಾರು ದಾರಿಗಳಿಂದ ಅಪಹೃತವಾಗಿವೆ ಉದ್ಯಮವನ್ನು ನ್ಯಾಯವಾಗಿ ನಡೆಯಿಸಿ ನಷ್ಟಬಂದದ್ದಾದರೆ ಆಗ ನಾನು ಸಹಾನುಭೂತಿ ತೋರಿಸುತ್ತಿದ್ದೆ"

ವಾಮನರಾಯರ ಜೊತೆಗಿದ್ದ ಸಾಹುಕಾರ ಶೀನಪ್ಪನವರು, ಅದಕ್ಕೆ ನಾಲಗೆ ಸಡಿಲು ಮಾಡಿ "ಇದು ಮಿಥ್ಯಾರೋಪ" ಎಂದರು

"ಹಾಗಿದ್ದರೆ ಅವನ್ನು ಪಾಲುಗಾರರ ಮೂಲಕವಾಗಲಿ, ಸರಕಾರ ತಾನಾಗಿಯೇ ಆಗಲಿ ಕೋರ್ಟಿಗೆ ಒಯ್ದು ಬಹಿರಂಗ ಪಡಿಸಬಹುದಲ್ಲ"

ಸಂಧಾನ ವಿಫಲವಾಯಿತು ವಾಮನರಾಯನು ಅಲ್ಲಿಂದ ಏಳುತ್ತ, "ನೀವು ಕಣಜಲು ಗೂಡಿಗೆ ಬೇಕೆಂದೇ ಕೈಹಾಕಿ ಕೆಣಕುತ್ತೀರಿ" ಎಂದು ಮುಸಿದು ಹೊರಟುಹೋದ ಶೀನಪ್ಪನವರು ಜತೆಗೆ ಹೋದರು ಅವನ ನುಡಿಸಿನ ಅರ್ಥವನ್ನು ಬೇಕಾದ ರೀತಿಯಲ್ಲಿ ಮಾಡಿಕೊಳ್ಳಬಹುದು ಆತನ ಕೈಯಲ್ಲಿ ಸರಕಾರವಿಲ್ಲದಿದ್ದರೂ, ದೇಶವಾದಿ ಪಂಗಡವಿದೆ ಸಮ್ಮಿಶ್ರ ಸರಕಾರವನ್ನು ನಾಲ್ಕು ದಿನ ಮುಂದುವರಿಸಲು ಬಿಡುವುದು ಅವನ ಮುಷ್ಟಿಯೊಳಗಿನ ಮಾತು ಅಂಥ ಬೆದರಿಕೆಯಿಂದ ಅರುಣಾಚಲಯ್ಯನವರನ್ನು ದಾರಿಗೆ ತರಬಹುದು ಎಂಬುದು ಅವನ ವಿಚಾರ ಸರಣಿ ಬದುಕಿಕೊಳ್ಳುವುದಕ್ಕೆ ಅವರು ಎಡಪಕ್ಷವನ್ನು ಸೇರಲಾರರೆಂಬ ಧೈರ್ಯ ಎಲ್ಲಿಯತನಕ ವಾಮನರಾಯನಿಗೆ ಮೇಲಿನವರ ಬೆಂಬಲವಿತ್ತೋ ಅವನ ಈ ಧೈರ್ಯ ಕುಗ್ಗುವುದಕ್ಕೆ ಕಾರಣವಿರಲಿಲ್ಲ

ಆತ ಈ ಸಂಚನ್ನೇ ನೆನೆದುಕೊಂಡು, ತನ್ನ ಜನಗಳನ್ನು ಕಟ್ಟಿಕೊಂಡು ದೇಶವಾದಿ ಸಂಸ್ಥೆಯ ಪುನರುಜ್ಜೀವನದ ಕಾರ್ಯ ತೊಡಗಿದ್ದ ಹಣ ಎಲ್ಲೆಲ್ಲಿಂದಲೋ ದೊರಕಿಸಿಕೊಂಡು ಕಾಲ್ಪನಿಕ

ಹೆಸರುಗಳನ್ನು ಬರೆದುಕೊಂಡು, ಸಾವಿರಾರು ಹೊಸ ಸದಸ್ಯರನ್ನು ಕೂಡಿಸಿದ. ಒಂದು ವರ್ಷದಲ್ಲಿ, ಕೆಳಗಿಂದ ಮೇಲಿನ ತನಕ ತನ್ನ ಜನಗಳನ್ನು ಪ್ರಮುಖ ಸ್ಥಾನಗಳಲ್ಲಿ ನಿಲ್ಲಿಸಿಕೊಂಡು ಪೂರ್ವಕ್ಕಿಂತಲೂ ಹೆಚ್ಚಿನ ಶಕ್ತಿಯು ದೇಶವಾದಿ ಸಂಸ್ಥೆಗೆ ಬಂದಿದೆಯೆಂದು ಸಾರ ತೊಡಗಿದ. ಅದರಿಂದಲೇ ತಮಗೆ ಪ್ರಚಂಡ ಜಯ ದೊರೆಯುತ್ತದೆ ಎನ್ನುತ್ತ, "ನಮ್ಮ ಬೆಂಬಲವಿಲ್ಲದೆ ಈ ಜನವಾದಿಗಳೊಂದು ದಿನವೂ ಸರಕಾರ ನಡೆಯಿಸಲಾರರು ನಾವು ತೊಡಗಿದ್ದನ್ನಲ್ಲದೆ ಇವರು ಹೊಸತೇನನ್ನೂ ಮಾಡಿಲ್ಲ ಗ್ರಾಮಕ್ಕೊಂದು ಶಾಲೆ ಮಾಡಿದರೆ ಮಹಾ ಕೆಲಸವಾಯಿತೇ? ಒತ್ತಾಯದಿಂದ ದೊರಕಿಸಿಕೊಂಡ ಉಪಾಧ್ಯಾಯರು ಏನು ಕೆಲಸ ಮಾಡಿಯಾರು?" ಎಂದು ಮೂದಲಿಸ ತೊಡಗಿದ.

ತನ್ನ ಆಪ್ತರೊಡನೆ "ಈ ಸಾರ್ವಜನಿಕ ವಿದ್ಯಾಭ್ಯಾಸ ಎಲ್ಲರಿಗೂ ಮೃತ್ಯು. ನಾಲ್ಕು ಅಕ್ಷರ ಬಂದವ ಗುಲಾಲಿ ಟೋಪಿಗಳ ಹತ್ತು ಕರ ಪತ್ರ ಓದಿದನಾದರೆ, ತನಗೆ ಎಲ್ಲಾ ತಿಳಿದಿದೆ ಎಂದು ಜನವಾದಿಗಳಿಗೂ ನಮಗೂ ಕೂಡಿಯೇ ಬುದ್ಧಿ ಕಲಿಸಿಯಾನು. ಒಂದೊ ಜನಗಳು ಸ್ವಂತ ವಿವೇಚನೆ ಮಾಡುವಷ್ಟು ವಿದ್ಯಾವಂತರಾಗಬೇಕು, ಇಲ್ಲ ವಾದರೆ ಅನಕ್ಷರಸ್ಥರಾಗಿ ಉಳಿಯುವುದೇ ಒಳಿತು. 'ಅಲ್ಪವಿದ್ಯಾ ಮಹಾ ಗರ್ವಿ' ಎನ್ನುವ ಮಾತೇ ಇದೆಯಲ್ಲ" ಎನ್ನುತ್ತಿದ್ದ ವಾಮನ ರಾಯನಿಗೆ ಪಂಗಡ ಬೆಳೆದುಬಂದುದರ ವಿಶ್ವಾಸವಿದೆ. ಧನಿಕರ ಬೆಂಬಲವೂ ಇದೆ. ಒಂದು ಮತಕ್ಕೆ ಹತ್ತು ರೂಪಾಯಿ ಬೆಲೆಕೊಟ್ಟಾ ದರೂ ಕೊಳ್ಳುವೆನೆಂಬ ಧೈರ್ಯವಿದೆ. ಜನವಾದಿ ಪಂಗಡದಂತೆ ಸುಧಾ ಮರ ಕುಲ ತಮ್ಮದಲ್ಲ—ಎಂಬ ಹೆಮ್ಮೆ ಇದೆ. ಈ ಮೂರು ನಾಲ್ಕು ವರ್ಷಗಳ ಕಾಲ ತನಗೆ ದೊರಕಿದ ಈ ವಿಶ್ರಾಂತಿ, ತನ್ನ ಶಕ್ತಿ ಬೆಳೆಯಿ ಸುವುದಕ್ಕೆ ದೊರೆತ ಸದವಕಾಶವೆಂದು ಆತ ತಿಳಿದುಕೊಂಡ.

ಅವನ ಪಂಗಡಕ್ಕೆ ಚಾಡಿ, ದೂರು ಮೊದಲಾದುವುಗಳಿಂದ ಪ್ರೇರಣೆ ಕೊಡುವ ನಿವೃತ್ತ ಅಧಿಕಾರಿಗಳ ಬೆಂಬಲವಿದೆ. ಅವರು ನೇರಾಗಿಯೂ, ಬಂಧುಮಿತ್ರರ ಮೂಲಕವಾಗಿಯೂ ವಾಮನರಾಯ ನಿಗೆ ಬೆಂಬಲ ಕೊಡಬಲ್ಲರು. ಲಂಚ ತಿಂದು, ಕಳೆದುಕೊಂಡ ಅಧಿಕಾರ

ವನ್ನು ಮರಳಿ ದೊರಕಿಸಿಕೊಳ್ಳುವುದಕ್ಕೆ, ತಮ್ಮ ಬಂಧುಗಳಿಗೆ ಬಂದ ಶಿಕ್ಷೆಯನ್ನು ಕಡಿಮೆ ಮಾಡಿಕೊಳ್ಳುವುದಕ್ಕೂ ಅವರಿಗೆ ವಾಮನ ರಾಯನ ಬೆಂಬಲಬೇಕು ಅವರ ಜತೆಗೆ ಹಿಂದೆ ಕೊಳ್ಳೆಯಲ್ಲಿ ಪಾಲು ಪಡೆದ ಮುಖ್ಯಮಂತ್ರಿಗಳೂ ಇದ್ದಾರೆ

ಶೀನಪ್ಪನವರೂ, ವಾಮನರಾಯರೂ ಅಸಮಾಧಾನದಿಂದ ಮರಳಿದ ಬಳಿಕ ಕಾಂಚನಮಾಲೆಯೊಬ್ಬಳೇ ಅರುಣಾಚಲಯ್ಯನವ ರೊಡನೆ ಉಳಿದುಕೊಂಡಳು ಅದಕ್ಕೆ "ಅವರ ಜತೆಗೇನೇ ನೀವು ಬಂದಿರಲ್ಲಾ" ಎಂದರು ಅವರು.

"ತಪ್ಪಾಯಿತೇ ? ಮನೆಗೆ ಬಂದು ಒತ್ತಾಯದಿಂದ ಕರೆದು ತಂದರು ಹಿಂದೆಷ್ಟೋ ಬಾರಿ ಶೀನಪ್ಪನವರು ನನ್ನನ್ನು ಒಲಿಸಿ ನಿಮ್ಮ ದಾರಿ ಬದಲಿಸಲು ಪ್ರಯತ್ನಿಸಿದವರು ಅದರಿಂದ ಫಲವಿಲ್ಲವೆಂದು ತಿಳಿ ದರೂ ಇನ್ನೂ ಆಶೆ ಹೋಗಲಾರದು ಇನ್ನೊಮ್ಮೆ ದರ್ಬಾರು ನಡೆ ಯಿಸುವ ಕನಸನ್ನು ಅವರು ಬಿಟ್ಟಿಲ್ಲ ಈ ಹೊತ್ತು ನಮ್ಮ ದೊಡ್ಡ ರಾಯರೇ ಸಂಧಾನಕ್ಕೆ ಬಂದುಬಿಟ್ಟರಲ್ಲ – ಏಕೆಂದು ತಿಳಿಯಿತೇ ?"

"ಬಂದಾಗ ತಿಳಿಯಲಿಲ್ಲ, ಹೋದಾಗ ಸ್ಪಷ್ಟವಾಯಿತಲ್ಲ. ಕಣಜಲು ಗೂಡನ್ನು ನಾನು ಕೆಣಕುತ್ತಿದ್ದೇನಂತೆ. ಇನ್ನು ಅವುಗಳ ಭಯಕ್ಕೆ ನೀರಲ್ಲಿ ತಲೆ ಮರೆಯಿಸಿಕೊಂಡರಾಯಿತು "

"ಒಮ್ಮೊಮ್ಮೆ ನನಗೆ ಹೀಗೂ ಕಾಣಿಸುತ್ತದೆ ನೀವೇಕೆ ಅವ ರೊಡನೆ ಲೆಕ್ಕಾಚಾರ ಸಂಪೂರ್ಣ ಮುಗಿಸಬಾರದೆಂದು ಮುಂದಿನ ಚುನಾವಣೆಯಲ್ಲಿ ಅವರಿಂದ ನಮಗೆ ಸಂಪೂರ್ಣ ವಿರೋಧ ಈಗಿನದು ಆಪದ್ಬಾಂಧವ್ಯ. ನೀವು ನೇರಾಗಿ, ಹಿಂದಣ ಮಂತ್ರಿಮಂಡಳದ ಅಪ ವ್ಯವಹಾರಗಳ ತನಿಖೆಗೆ ಸಮಿತಿಯನ್ನು ನಿಯಮಿಸಬಾರದೇಕೆ ? ನಾನು ಬೇಕಷ್ಟು ದಾಖಲೆ ಒದಗಿಸಿಕೊಡಬಲ್ಲೆ "

"ಅದನ್ನು ಮಾಡುವುದಿದ್ದರೆ, ಅಧಿಕಾರಕ್ಕೆ ಬಂದ ದಿನವೇ ಮಾಡಬೇಕಾಗಿತ್ತು. ಈಗ ಮಾಡಿದರೆ ಅದಕ್ಕೆ ಬೇರೆ ಅರ್ಥ ಬರು ತ್ತದೆ. ಬೇರೊಂದು ಪಂಗಡ ಆ ಕೆಲಸ ಮಾಡಿದರೆ ಅದಕ್ಕೆ ಸೇಡಿನ ಸ್ವರೂಪ ಬರುತ್ತದೆ. ಅಲ್ಲದಿದ್ದರೂ ಮಾಡಿದಲ್ಲಿ ಸಮ್ಮಿಶ್ರ ಸರಕಾರ ಮೂರು ದಿನಗಳಲ್ಲಿ ಮುರಿಯುತ್ತಿತ್ತು. ಅದರಿಂದ ಯಾವ ಮಧ್ಯಗಾಮಿ

ಪಂಗಡವೂ ಬದುಕಲಾರದೆ ಸೇತುರಾಯನಿಗಷ್ಟೆ ಅನುಕೂಲವಾಗುತ್ತಿತ್ತು ನನಗೆ ಹಳೆಯ ಹೊಲಸುಗಳು ತಿಳಿಯವೇ ? ಎಲ್ಲಿ ಹೋದರೂ ಅದರ ನಾತ ಉಳಿದಿದೆ. ರೋಗ ಹೆಚ್ಚಿದಂತೆ, ರೋಗಿಗಳ ಸಂಖ್ಯೆ ಹೆಚ್ಚಿದಂತೆ ಚಿಕಿತ್ಸೆಗೆ ಅಷ್ಟೇ ಜನ ವೈದ್ಯರು ಬೇಕು. ಪ್ರತಿಯೊಂದನ್ನೂ ಕೆದಕಿ, ಎಬ್ಬಿಸಿ, ಕಣ್ಮುಂದೆ ಚೆಲ್ಲಿಕೊಳ್ಳುವ ಸ್ಥಿತಿ, ಸ್ಥಾನ ಇನ್ನೂ ನಮ್ಮ ಪಾಲಿಗೆ ಬಂದಿಲ್ಲ "

"ಶ್ರನುವಾದಿಗಳಾದರೆ, ಅದನ್ನು ಖಂಡಿತಕ್ಕೂ ಮಾಡುತ್ತಿದ್ದರು ನೀವು ರಸ್ಯಾ ದೇಶದ ಸಾಮೂಹಿಕ ಪರ್ಜಸ್ ಕತೆ ಕೇಳಿಲ್ಲವೇ ?"

"ರಸ್ಯದ ಆದರ್ಶ ನಮಗೆ ಬೇಡ, ಅದು ಸೇತುರಾಯನಿಗೇ ಇರಲಿ."

"ಇದು ಅವನೆಂದುದಲ್ಲ, ನನಗನಿಸುವ ಸಂಗತಿ "

"ಅಲ್ಲಿ ತಸಿಖೆಯ ಸೋಗಿನಿಂದ ಅಪರಾಧಿ, ನಿರಪರಾಧಿಗಳನ್ನೆಲ್ಲ ಕೂಡಿಯೇ ಗಲ್ಲಿಗೇರಿಸಬಹುದು ಮಾಡದ ಅಪರಾಧಗಳನ್ನು ಒಪ್ಪಿಕೊಳ್ಳುವ ತನಕ ಚಿತ್ರಹಿಂಸೆ ಕೊಡಬಹುದು ನಮ್ಮ ದೇಶ ಹಾಗೇನಿಲ್ಲ ಇಲ್ಲಿ ಪ್ರಜೆಗಳ ಅಭಿಪ್ರಾಯ, ಕಾಯಿದೆಯ ದಾರಿ ಎರಡೂ ಪ್ರಕಟವಾಗುತ್ತಿವೆ ನಿರಂಕುಶ ಪ್ರಭುತ್ವದಲ್ಲಿ ಎಷ್ಟು ನಿರ್ಭಯವಾಗಿಯೂ ಆಳುವವರು ವರ್ತಿಸಬಹುದು

'ನನ್ನ ಅಳಿಯನನ್ನು ಸೆರೆಮನೆಗೆ ಕಳುಹಿಸಿ ನಾನೇನಾದೆ ಗೊತ್ತೇ ? ಎಲ್ಲಾ ಬಂಧುಗಳೂ ನನಗೆ ವಿರೋಧಿಗಳಾದರು ನಾನು ಕುಲಕಂಟಕನೆನಿಸಿದೆ ಜನತೆ ಮಾಡಿದ ಒಳಿತನನ್ನು ಕಂಡು ಮೆಚ್ಚುವ ಬದಲು, ನಮ್ಮ ನಂಟರಿಷ್ಟರಿಗಾದ ಹಾನಿಯನ್ನು ನೆನೆದು ಸೇಡು ಮಾಡುವುದಕ್ಕೂ ಹೊರಟೀತು "

"ಅಂದರೆ—ದೊಡ್ಡವರೆಷ್ಟು ನುಂಗಿದರೂ ಸರಿಯೆ, ಮಂತ್ರಿ ಪಟ್ಟದವರು ಕ್ಷಮಾರ್ಹರು. ಅದಕ್ಕಿಂತ ಕೆಳಗಿನವರು ಮಾತ್ರ ದಂಡನೆಗೆ ತಕ್ಕವರು ಎಂದ ಹಾಗಾಯಿತು "

"ಎಂದೂ ಅನ್ನುವುದಿಲ್ಲ. ನನ್ನ ಪಂಗಡದವರು ಆ ಕೆಲಸ ಮಾಡಿದ್ದರೆ ನಾನೇ ವಿಚಾರಣೆ ನಡೆಸುತ್ತಿದ್ದೆ ನನಗೆ ವಿಪುಲವಾದ ಜನ ಬೆಂಬಲವಿದ್ದರೆ ಇದನ್ನೂ ಮಾಡುವವನೇ. ಮಾಡಿ ಮುಗಿಸಲಾರದ

ಸ್ಥಿತಿಯಿದು ಸಮನಾಗಿ ಎನೆಸ್ತೇಸಿಯಾ ಕೊಟ್ಟು ಶಸ್ತ್ರಚಿಕಿತ್ಸೆ ಮಾಡ ಲಾರದಂತಹ ವೈದ್ಯನ ಪಾಡು ನನ್ನದು."

ಆಕೆ ನಕ್ಕಳು.

"ಏನು ನಗುತ್ತೀರಿ ?"

"ನನಗೂ ತಿಳಿದೇ ಇದೆ–ಈಗ ನಾವು ಕೈಕೊಂಡ ಕೆಲಸದಿಂದಲೇ ನಮ್ಮ ನೌಕರವರ್ಗ ಎಷ್ಟು ಮುನಿಸುಗೊಂಡಿದೆಯೆಂಬುದನ್ನು ಬಲ್ಲೆ" ಎಂದು ಆ ವಿಷಯವನ್ನು ಬಿಟ್ಟು ಇನ್ನಾವುದೋ ಮಾತಿಗೆ ತೊಡಗಿದಳು ಮಾತು ಮುಗಿಸಿ ಹೊರಡುತ್ತ, 'ಅದಿರಲಿ, ನಿಮ್ಮ ಮುಂದಿನ ಯೋಜನೆ ಗಳ ಕರಡು ಸಿದ್ಧವಾಯಿತೇ ? ಸಿದ್ಧಮಾಡುತ್ತೇನೆ ಎಂದಿರಲ್ಲ" ಎಂದು ಕೇಳಿದಳು.

"ಯಾವುದು ? ಪಕ್ಷದ ಘೋಷಣೆಯೇ ?"

"ಹೂಂ"

"ಅದು ನನ್ನೊಬ್ಬನ ಕೆಲಸವೇ ? ನೀವು, ನಾನು, ಸಂಗಡ ದವರು ಕೂಡಿ ಮಾಡುವ ಕೆಲಸವಲ್ಲವೇ ?"

"ಅಂದರೆ ಆ ನೆಪದಿಂದ ನನ್ನನ್ನು ಕಟ್ಟಿಹಾಕಬೇಕೆನ್ನುತ್ತೀರಾ?"

"ಘೋಷಣೆ ರೂಪಿಸುವುದಕ್ಕೆ ಸೇರಿದರೆ ಕಟ್ಟಿಹಾಕಿದಂತೇನು ? ಬೇಕಾದರೆ ನಿಮ್ಮ ಆಕ್ಷೇಪದ ಮಾತುಗಳನ್ನು ಸೇರಿಸಿ"

"ಅದೊಂದು ವರದಿಯೇ ?"

"ವರದಿಯಲ್ಲ ಎಲ್ಲರೂ ಒಪ್ಪುವ ಘೋಷಣೆ, ಕಾರ್ಯಭಾಗದ ಯೋಜನೆ ಅಂತೂ ನಿಮ್ಮನ್ನು ಪಕ್ಷಕ್ಕೆ ಒಲಿಸುವುದು ಕಷ್ಟ"

"ನಿಮ್ಮೊಡನೆ ಸೇರಿ ಕೆಲಸಮಾಡಿದ್ದೇನಲ್ಲ"

"ಆದರೆ ನೀವು ಇನ್ನೂ ಸದಸ್ಯರಾಗಿಲ್ಲ. ದೇಶವಾದಿ ಸದಸ್ಯ ತನವು ಇರಬಹುದೇನೋ ? ನಮ್ಮ ಮೇಲೆ ಅಷ್ಟು ವಿಶ್ವಾಸ ಬಂದಿಲ್ಲ ವೆಂದೇ ಕಾಣುತ್ತದೆ ನೀವೊಬ್ಬರು ಅಸಾಧ್ಯ ವ್ಯಕ್ತಿಗಳು" ಎಂದು ನಕ್ಕು ನುಡಿದರು.

"ನನಗೂ ನನ್ನ ತೂಕ ತಿಳಿಯದಾಗಿದೆ" ಎಂಬ ಪ್ರತಿನಗೆಯ ಉತ್ತರ ಬಂದಿತ್ತು ಅವಳಿಂದ.

ಮನೆಗೆ ಹೋದ ಬಳಿಕ, ಅವಳ ಮನಸ್ಸಿನಲ್ಲಿ 'ತನಗೆ ತಾನೇ

ಒಂದು ಸಮಸ್ಯೆಯಾಗಿ ಕಾಣುವ ವಿಚಾರ' ಸುತ್ತಿ ಸುಳಿಯುತ್ತಿತ್ತು. ಆಕೆ ಇನ್ನೂ ದೇಶವಾದಿ. ಏನು ಕಾರಣದಿಂದಲೋ ಆ ಸಂಗಡದ ಸದಸ್ಯತನ ಕಾಯ್ದುಕೊಂಡು ಬಂದಿದ್ದಾಳೆ ಆದರೆ ಅದರ ಅಧಿಕಾರ ವರ್ಗಕ್ಕೆ ಸೇರಿಲ್ಲ ಇತ್ತ ಸಮ್ಮಿಶ್ರ ಸರಕಾರದ ಕೆಲಸಕ್ಕೆ ಹೆಚ್ಚಿನ ನೆರವು ಕೊಡುತ್ತಿದ್ದಾಳೆ ದೇಶವಾದಿಗಳಿಗೆ ಅವಳಲ್ಲಿನ ವಿಶ್ವಾಸ ಕಳಚಿದೆ ಅರುಣಾಚಲಯ್ಯನವರ ಯಂತ್ರ ಶುದ್ಧಿಯ ಕೆಲಸ ಇವಳಿಂದಲೇ ನಡೆಯುತ್ತಿದೆ ಎಂಬುದು ಖಚಿತವಾಗಿದೆ "ಆ ಮುದುಕನಿಗೆ ಅಷ್ಟು ಬುದ್ಧಿಯಾಗಲಿ, ಚುರುಕಾಗಲಿ ಎಲ್ಲಿಂದ ಬರಬೇಕು ?" ಎಂದು ಅವರು ಹೇಳುತ್ತಾರೆ

ಅವಳಿಗೋ—ದೇಶಾವಾದಿಗಳ ಗುಂಪಿನ ನೀತಿ, ಶೈಥಿಲ್ಯ ಕಂಡ. ಅದು ಕೊಳೆಯುತ್ತಿರುವ ದೇಹವೆಂಬುದು ಸ್ಪಷ್ಟವಾಗಿದೆ ಅದಕ್ಕೆ ಪ್ರತಿಯಾಗಿ ಕಾಣಿಸುತ್ತಿರುವುದು—ಅರುಣಾಚಲಯ್ಯನವರ ವ್ಯಕ್ತಿತ್ವ ಅವರ ಮೇಲೆ ತಂದೆಯಷ್ಟು ಗೌರವ, ಅಷ್ಟೇ ಸಲುಗೆ 'ನಾನು ಕಂಡ ಒಬ್ಬನೇ ಒಬ್ಬ ಸತ್ಯವಂತನಿದ್ದರೆ ಅದು ಅವರು' ಎಂಬ ಅಭಿಮಾನ ಆದರೆ ವ್ಯಕ್ತಿ ಸಂಗಡವಾದಾನೆಯೇ ? ಅವರ ಅನುಯಾಯಿಗಳು ತೀರ ಸಾಮಾನ್ಯರು ಕೆಟ್ಟವರಲ್ಲವಾದರೂ ಪಕ್ಷವನ್ನು ಕಟ್ಟಿ ನಡೆಯಿಸಬಲ್ಲ ಶಕ್ತರಲ್ಲ. ಅವರಲ್ಲಿ ಈಗ ಮಂತ್ರಿಗಳಾಗಿರುವ ಮೂವರು, ದಕ್ಷತೆ ತೋರಿ ಶ್ರಮಿಸುತ್ತಿದ್ದಾರೆ, ಜನರಿಂದ ಮಾನ್ಯತೆಯನ್ನೂ ಗಳಿಸಬಹುದು. ಅರುಣಾಚಲಯ್ಯನವರು, ತಮ್ಮ ಸಂಗಡದ ಕಾರ್ಯದರ್ಶಿತ್ವವನ್ನು ಅವಳ ಕೊರಳಿಗೆ ಕಟ್ಟುತ್ತೇನೆಂದರೂ ಅವಳು ಅದರಿಂದ ದೂರ_ಅವರ ಸಂಗಡದ ಸದಸ್ಯಳೂ ಆಗಲೊಲ್ಲಳು ಅವಳ ಆದರ್ಶದ ದೃಷ್ಟಿಯಿಂದ ಸದಸ್ಯತ್ವಕ್ಕೆ ಸಹಿ ಹಾಕಿದರೆ ತಪ್ಪೇನಿಲ್ಲ ಆ ಸಹಿಗೆ ಬೆಲೆ ಕೊಡಬೇಕಾಗಿಲ್ಲ. ಆದರೆ ಅರುಣಾಚಲಯ್ಯನಂತಹವರನ್ನು ನಂಬಿಸಿ, ಮೋಸ ಮಾಡಬಾರದೆಂಬುದರಿಂದಲೇ ಹಿಂದೆ ಕುಳಿತಿದ್ದಾಳೆ

ಇನ್ನೂ ಅವಳ ಮನಸ್ಸಿನಲ್ಲಿ ರಾಷ್ಟ್ರಸ್ವಾತಂತ್ರ್ಯದ, ಶ್ರಮವಾದಿಗಳ ಧ್ಯೇಯ ಕುಣಿದಾಡುತ್ತಿದೆ ಅದರ ಕುಂದುಕೊರತೆಗಳು ತಿಳಿಯದೆ ಇಲ್ಲ. ದೇಶದಲ್ಲಿ ತುಂಬಿದ ಜಡತೆ, ವಂಚನೆ, ಸ್ವಾರ್ಥಗಳನ್ನು ಕಂಡಾಗ 'ಈ ಮೆಲುಗತಿ ಇನ್ನೆಷ್ಟು ದಿನ ?' ಎಂದು ತೋರಿ, ತೀವ್ರ

ಯಶಸ್ಸಿನ ಹಂಬಲವಾಗುತ್ತದೆ ಬಲವಂತದಿಂದ ದೇಶವನ್ನು ಜಾಗೃತಗೊಳಿಸುವ ಆದರ್ಶ ಇನ್ನಷ್ಟು ಆಕರ್ಷಕವಾಗಿ ಕಾಣುತ್ತದೆ.

ಎಲ್ಲರನ್ನೂ, ಎಲ್ಲವನ್ನೂ ತೂಗಿ ನೋಡುವ ವ್ಯಕ್ತಿಯವಳು. ವಾಮನರಾಯ ಬೆಂಕಿಯ ಬೆನ್ನಿನ ಹೊಗೆಯಂತೆ ಅವಳ ದೃಷ್ಟಿಯಿಂದ ಬಹುದೂರ ಸರಿದುಹೋಗಿದ್ದಾನೆ. ಸೇತುರಾಯನ ವಿಚಾರದಲ್ಲಿ ಬೆಳೆದುಬಂದ ವ್ಯಕ್ತಿಪ್ರೇಮ, ಆದರಗಳು ಆ ದೃಷ್ಟಿಯಿಂದ ದೂರ ವಾಗಿದ್ದರೂ ಅವನ ಆದರ್ಶ ಪ್ರಿಯವಾಗಿ ಕಾಣಿಸುತ್ತದೆ. 'ಬಡವರಿಗಾಗಿ ಬದುಕು, ದುಡಿಯುವವರಿಗಾಗಿ ಬದುಕು, ಅದಕ್ಕಾಗಿಪ್ರತಿಯೊಂದರಲ್ಲೂ ಸರಕಾರದ ದುಡುಕು ', ಬೇಕೆಂಬ ಆದರ್ಶವು ತೀವ್ರಸಾಧನೆಯ ದೃಷ್ಟಿ ಯಿಂದ ಅವಳಿಗೆ ಪ್ರಿಯವೆನಿಸುತ್ತದೆ. 'ಈ ದೇಶದಲ್ಲಿ ಚಾಟಿ ಹಿಡಿದು ಕೆಲಸ ಮಾಡಿಸಬೇಕು. ಇಲ್ಲವಾದರೆ ಚುರುಕಿನಿಂದ ದುಡಿಯುವವರಿಲ್ಲ. ಬಡತನದಿಂದ ಮೇಲೆ ಬರುವುದು ಬಡವನಿಗೂ ಬೇಡವಾಗಿದೆ. ಜನಗಳಲ್ಲಿ ಅಷ್ಟು ಆಲಸ್ಯ ತುಂಬಿದೆ. ಪ್ರಜಾಪ್ರಭುತ್ವದಲ್ಲಿ ಬುದ್ಧಿಯಿಲ್ಲದ ಪ್ರಜೆ ಯನ್ನು ಕಟ್ಟಿಕೊಂಡು ನಾವು ಮೇಲಕ್ಕೇಳುವಾಗ, ದೇಶವೇ ಕೆಳಕ್ಕೆ ಇಳಿಯುತ್ತದೆ' ಎಂಬುದಾಗಿ ತೋರುತ್ತದೆ. ಒಮ್ಮೆ ಬಲವಂತದಿಂದ ಜನಪದವನ್ನು ಜಾಗೃತಗೊಳಸಿ, ಅವರಿಗೆ ಬುದ್ಧಿ ಬಂದುದನ್ನು ಕಂಡ ಮೇಲೆ, ಅನಂತರ ಪ್ರಜಾಪ್ರಭುತ್ವದ ಕಾಲ–ಎನಿಸುತ್ತದೆ ಈಗಲೋ —ಜನರ ಕರ್ತವ್ಯ ಬುದ್ಧಿಯನ್ನು ನಂಬಿ, ಕಾಯುವಷ್ಟು ತಾಳ್ಮೆಯಿಲ್ಲ. ಶಾಸನ ಬಲ, ಅಧಿಕಾರ ಬಲಗಳಿಂದಲೇ ಕ್ರಾಂತಿಯುತ ಪರಿವರ್ತನೆ ಸಾಧ್ಯ—ಎಂದೆನಿಸುತ್ತದೆ ಅವಳಿಗೆ

ಸೇತುರಾಯನ ಮೇಲಿನ ಅಭಿಮಾನಕ್ಕಿಂತಲೂ ಎಂಥ ತ್ಯಾಗಕ್ಕೂ ಸಿದ್ಧರಿರುವ, ಧ್ಯೇಯಾಂಧರಾಗಿ ದುಡಿಯುವ ಅವನ ಅನುಯಾಯಿಗಳ ಮೇಲಿನ ಅಭಿಮಾನ ಇನ್ನಷ್ಟು ಹೆಚ್ಚು. ಇದನ್ನೆಲ್ಲ ನೆನೆಯುತ್ತಹೋದಂತೆ, ಅವರು ಹೂಡಿದ ಮುಷ್ಕರಗಳು, ಸತ್ಯಾಗ್ರಹ ಗಳು ಕಣ್ಣಿಗೆ ಇದಿರಾಗುತ್ತದೆ. ಕೆಲವು ಅಕಾಲಿಕವಾದುವು; ಕೆಲವು ನ್ಯಾಯವಿಹೀನವಾದುವು. ನೀರ್ಕಟ್ಟೆಯ ಮುಷ್ಕರವಂತು ದುಡಿಯು ವವರ ಬಾಯಿಗೆ ಮಣ್ಣೆರಚಿದಂತೆ, ದೇಶದ ಶ್ರೇಯಸ್ಸಿಗೂ ಹಾನಿ ತಂದುದು—ಇವೆಲ್ಲ ಮುಖಂಡರ ಬುದ್ಧಿಗೇಡಿತನವಲ್ಲದೆ ಮತ್ತೇನಲ್ಲ.

ಅವನ್ನು ನೆನೆದಂತೆ ಅವರ ವರ್ತನೆಯ ಕುಂದುಕೊರತೆಗಳು ಹೆಚ್ಚಾಗಿ ಕಾಣುತ್ತವೆ ಅಂಥ ಕೆಲಸಗಳಿಂದ ಶ್ರಮಗಾರರ ಹಿತಸಾಧನೆಯಾಗದೆಂದೂ, ಇವರೂ ಶ್ರೀಮಂತರಂತೆ ಕೂಲಿಗಾರರ ಅಜ್ಞಾನದ ಲಾಭ ಪಡೆಯುತ್ತಿದ್ದಾರೆಂದೇ ಅನಿಸುತ್ತದೆ ಜನಗಳ ದ್ವೇಷ ಬುದ್ಧಿಯನ್ನು ಬೆಳೆಯಿಸಿ, ವರ್ಗಕಲಹ ನಿರ್ಮಾಣಮಾಡಿ ಕೇವಲ ತಮ್ಮ ಶಕ್ತಿಯ ಪರೀಕ್ಷಾ ಪ್ರಯೋಗಗಳನ್ನು ನಡೆಯಿಸುವಂತೆ ಕಾಣುತ್ತದೆ ನೀರ್ಕಟ್ಟೆಯ ಪ್ರಕರಣವೊಂದೇ ಇಂಥ ಹತ್ತೆಂಟು ವಿಚಾರ ಸರಣಿಗಳನ್ನು ಅವಳ ಮನಸ್ಸಿನಲ್ಲಿ ಕೆರಳಿಸುತ್ತದೆ ಸೇತುರಾಯನಿಗೂ ಅವಳಿಗೂ ನಡೆದ ಪ್ರತ್ಯಕ್ಷ ಸಂಗ್ರಾಮ ಅದು ಸತ್ಯಾಗ್ರಹವಲ್ಲ, ಗೂಂಡಾಗಿರಿ ಅದರ ದೆಸೆಯಿಂದ ಶ್ರಮವಾದಿಗಳ ಮಾತಿಗೆ ಮರುಳಾದ 'ಮೂಢ ಜನರ ನರಬಲಿ' ಎಂಬುದಾಗಿ ಕಾಣಿಸುತ್ತದೆ ಅದು ಹುಟ್ಟಿತಾದರೂ ಏಕೆ? ಕೆಲಸಗಳ್ಳರನ್ನು, ಸಾಮಾನುಗಳ್ಳರನ್ನು ತಡೆಯಲು ಮಾಡಿದ ನಿರ್ಬಂಧಗಳಿಂದ, ಕಾವಲುಗಳಿಂದ, 'ಲಂಚ, ವಂಚನೆ ಹೋಗಬೇಕು' ಎನ್ನುವ ಸೇತುರಾಯ ಅಂಥ ಕೆಲಸಗಾರರಿಗೆ ಬೆಂಬಲ ಕೊಟ್ಟನೇಕೆ? ಇವನ್ನೆಲ್ಲ ಎಣಿಸಿದಂತೆ ವಾಮನರಾಯನಿಗೂ, ಸೇತುರಾಯನಿಗೂ ವ್ಯತ್ಯಾಸ ಕಾಣದಾಗುತ್ತದೆ ಅವನ ಉದ್ದೇಶ ಘನವಾಗಿರಬಹುದು, ಆದರೆ ಅವನ ರೀತಿಗಳಲ್ಲಿ ನಂಬಲರ್ಹವಾದ ಯಾವ ಸಂಬದ್ಧತೆಯೂ ಇಲ್ಲ ಶ್ರಮಗಾರರು ಅವನ ಧ್ಯೇಯ ಸಾಧನೆಯ ಆಟದಲ್ಲಿ ಪಗಡೆಯ ದಾಳಗಳು

ಇವನ್ನೆಲ್ಲ ನೆನದಂತೆ ಅವಳ ಮನಸ್ಸು ಖಿನ್ನವಾಗುತ್ತದೆ, ಅರುಣಾಚಲಯ್ಯನವರ ಪಾತ್ರ ಹಿರಿದೆನಿಸುತ್ತದೆ. ಈ ಮೂರು ವರ್ಷಗಳಲ್ಲಿ ಸೇತುರಾಯನಿಗಾಗಿ ಕಾದಿರಿಸಿದ ಪ್ರೇಮ ತಣಿದು ಹೋಗಿದೆ. ದಿನ ಸರಿದಂತೆ ಅವನ ವಿಷಯದ ಭ್ರಮೆ ತಗ್ಗಿದೆ. ಆತನ ಪಾಲಿಗೆ, ಈ ಪ್ರೇಮವೆಂಬುದು ತನ್ನಂತಹ ವ್ಯಕ್ತಿಯನ್ನು ತನ್ನ ಕೆಲಸಕ್ಕಾಗಿ ಬಳಸುವ ಒಂದು ನಿಮಿತ್ತವೆನಿಸಿ ಕಾಣುತ್ತಿದೆ. ಆತ ಬಹು ಸಮಯದಿಂದ ಅವಳ ಬಳಿಗೆ ಬರಲೂ ಇಲ್ಲ, ಇವಳು ಅಲ್ಲಿಗೆ ಹೋಗಲೂ ಇಲ್ಲ. ಬಹು ಹಿಂದೆಯೇ ಅವನಿಗೆ ಉಪಯೋಗಕಾರಿಯಾಗುವ ಸುದ್ದಿ ಕಳುಹಿಸುವುದನ್ನು ಬಿಟ್ಟಿದ್ದಳು. ಕೊನೆಯ ಬಾರಿ,

ಅಂದರೆ, ನೀರ್ಕಟ್ಟೆಯ ಪ್ರಕರಣದಲ್ಲಿ, ಅವನ ನೀತಿಯನ್ನು ಖಂಡಿಸುವ ಪತ್ರ ಬರೆದಳು. ಸ್ನೇಹವಿದ್ದುದರಿಂದ ಪ್ರತ್ಯುತ್ತರ ಬಂದೀತೆಂದು ಆಶಿಸಿದಳು ಇಲ್ಲ, ಅದು ಬರಲೇ ಇಲ್ಲ

ಅದಕ್ಕೆ ಪ್ರತ್ಯುತ್ತರ ಬಂದೀತು ತಾನು ಸಿಟ್ಟಾಗಿರುವೆನೆಂದು ತಿಳಿದರೆ ಅವನೇ ನೋಡಲು ಬಂದಾನೆಂದು ಊಹಿಸಿ ಕುಳಿತಳು. ಹಾಗೆ ಬಂದಲ್ಲಿ, ಅವನ ರಾಜನೀತಿಯನ್ನು ಹಳಿಯುವೆನೆಂದು ಯೋಚಿಸಿದಳು ಬದಲು ಮಧ್ಯಸ್ಥಿಯೊಬ್ಬ ಬಂದನು 'ನೀರ್ಕಟ್ಟೆಯ ಪ್ರಕರಣದಿಂದ ನಿಮಗೆ ಬೇಸರವಾದ್ದಕ್ಕೆ ವಿಷಾದ ವ್ಯಕ್ತಪಡಿಸಿದ್ದಾರೆ. ಅವರಿಗೆ ಬರಲು ವಿರಾಮವಿಲ್ಲ ಬಂದಿದ್ದರೆ ಎಲ್ಲ ಸಂಗತಿ ಹೇಳುತ್ತಿದ್ದರು ಸರಕಾರಕ್ಕೆ ಒದ್ದಿದ ಅಡಚಣೆಗೆ ನೀವೂ ಅಷ್ಟು ದುಃಖ ತಂದುಕೊಳ್ಳಬಾರದಿತ್ತು' ಎಂಬ ಸಂದೇಶವನ್ನು ಒಬ್ಬ ಮಿತ್ರನ ಮೂಲಕ ಹೇಳಿಕಳುಹಿಸಿದ್ದ.

ಈಕೆ ಅದಕ್ಕೆ ಸಿಟ್ಟಿನಿಂದ "ಅವರು ಬಂದರೂ ಸರಿಯೇ ಇಲ್ಲದೆ ಹೋದರೂ ಸರಿಯೇ ! ನಾನೆನ್ನುವ ಮಾತುಗಳನ್ನು ಅವರಿಗೆ ತಿಳಿಸಿ ಅವರಿಗೆ ಹೃದಯವಿಲ್ಲ ಇದ್ದರೆ ಇವತ್ತು ನೂರು ಮಂದಿ ಹುಚ್ಚರನ್ನು ಹಾಗೆ ಗುಂಡಿನ ಬಾಯಿಗೆ ಅಟ್ಟುತ್ತಿರಲಿಲ್ಲ ಇವರೇ ಸರಕಾರ ನಡೆಯಿಸಿದರೂ ಅಂಥ ಪ್ರಕರಣದಲ್ಲಿ ಗುಂಡು ಹಾರಿಸದೆ ಸುಮ್ಮನಿರುತ್ತಿರಲಿಲ್ಲ" ಎಂದಳು

ಬಂದಂಥ ಮಿತ್ರ, ಮಧುಸೂದನರಾಯ, ಎಳೆಯ ವಯಸ್ಸಿನ ಶ್ರದ್ಧಾವಂತ ಶ್ರಮವಾದಿ ಆತ ಅಂತರಂಗ ಬಹಿರಂಗಗಳೆರಡರಲ್ಲೂ ಸೇತುರಾಯನ ಆರಾಧಕ ಹೆಸರಿಗಷ್ಟೆ ಶ್ರಮವಾದಿಯಲ್ಲ, ಪಕ್ಷದಿಂದ ಹೊರಗಿದ್ದು ಪಕ್ಷಕ್ಕಾಗಿ ಕಾಡಾಡುವುದಕ್ಕೆ ಇಂಥ ನಿಷ್ಠಾವಂತ ಮಿತ್ರರು ಸೇತುರಾಯನಿಗೆ ಕೆಲವರಿದ್ದರು ಆತನಿಗೆ ಕಾಂಚನಮಾಲೆಯ ಈ ಪ್ರತ್ಯುತ್ತರ ರೇಗಿಸಿತು "ಯಾವುದು ? ನೀರ್ಕಟ್ಟೆಯ ಹತ್ಯಾಕಾಂಡವನ್ನು ಕುರಿತು ಹೇಳುತ್ತೀರಾ ? ಅದು ನಿಮ್ಮ ಸರಕಾರದ ಅತ್ಯಾಚಾರ ! ನಿಮ್ಮ ಎಂದರೆ, ಅರುಣಾಚಲಯ್ಯನವರ ರಕ್ತತೃಷೆ"

"ನೀವು ಕೋರ್ಟಿನ ತೀರ್ಮಾನ ಓದಿಲ್ಲವೆಂದು ಕಾಣುತ್ತದೆ. ಅಲ್ಲದೆ, ಪ್ರಪಂಚದಲ್ಲೆಲ್ಲೂ ಅಹಿಂಸಾವಾದಿ ಪೋಲೀಸು ದಳ ಇನ್ನೂ

ನಿರ್ಮಾಣವಾಗಿಲ್ಲ."

"ಕೆಲಸಗಾರರು ತಮ್ಮ ಅನ್ನ ತೆಗೆಯಲು ಬಂದ ಆದಿವಾಸಿಗಳ ಮುಂದೆ ಸತ್ಯಾಗ್ರಹ ಮಾಡಿದ್ದು ತಪ್ಪೇ ?"

"ಅದು ಸತ್ಯಾಗ್ರಹವೇ ? ಆದಿವಾಸಿಗಳ ವಸತಿಗಳನ್ನು ಸುಟ್ಟಿದ್ದು, ಅವರನ್ನು ಹೊಡೆದದ್ದು, ಕೆಲಸಕ್ಕೆ ಹೋಗದಂತೆ ಬಲವಂತ ಮಾಡಿದ್ದು "

"ಪೋಲೀಸರು ಅವರನ್ನು ರೇಗಿಸಿದರೆ ಎಂಥವನೂ ಹಾಗೆ ಮಾಡಿಯಾನು."

"ಯಾವುದು ಮೊದಲು ನಡೆದದ್ದು ? ಅನಂತರ ಯಾವುದು ? ಆಗ ನಾನು ಸಮೀಪದಲ್ಲಿದ್ದವಳು ನನಗೆ ಸತ್ಯ ತಿಳಿದಿದೆ, ಕಣ್ಣಿಂದ ಕಂಡಿದ್ದೇನೆ ನೀವು ನಿಮ್ಮ ಅಭಿಪ್ರಾಯ ಹೇಳುತ್ತೀರಾ ? ಸೇತುವಿನ ಅಭಿಪ್ರಾಯ ಹೇಳುತ್ತೀರಾ ? ನೀವು ಚಿಕ್ಕವರು. ನಿಮಗೆ ಸಂಗತಿ ತಿಳಿಯದು."

"ನಾನು ಚಿಕ್ಕವನಾದರೇನು ? ವಿಚಾರ ಮಾಡುವ ಶಕ್ತಿ ನನಗಿದೆ, ನನಗೂ ಸತ್ಯ ತಿಳಿಯುತ್ತದೆ."

"ಇರಬಹುದು ಹಾಗಿದ್ದರೆ ನಿಮ್ಮ ಗುರುಗಳನ್ನೇ ಕೇಳಿ ನಿಮ್ಮ ಆದರ್ಶವಾದ ರಸ್ಯಾದಲ್ಲಿ ಇಂಥ ನೂರಾರು ಕಾಮಗಾರಿಗಳಾಗುತ್ತವೆ. ಐದು ವರ್ಷದ ಹಂಚಿಕೆಗಳಾಗುತ್ತವೆ. ಅಲ್ಲಿನ ಕೆಲಸಗಾರರು ಸಂಪು ಹೂಡುವುದಕ್ಕೆ ಬಂದೀತೇ—ಎಂದು ಕೇಳಿ. ಸಂಪು ಹೂಡುವುದು ಬಿಡಲಿ, ಕೆಲಸದಲ್ಲಿ ಆಲಸ್ಯ ಮಾಡಿದರೆ ಏನು ಮಾಡುತ್ತಾರೆಂದು ಕೇಳಿ" ಎಂದಳು

"ಅವರು ಬಂದು ನಿಮ್ಮನ್ನು ಕಾಣಬಹುದು. ಆದರೆ ಈಗೀಗ ಅವರಿಗೆ ನಿಮ್ಮ ರಾಜಕೀಯ ನಿಲುವಿನ ಮೇಲೆಯೇ ಅವಿಶ್ವಾಸ ಬಂದಿದೆಯಂತೆ."

ಮಧುಸೂದನನ ಕಣ್ಣು ಕೆಂಪಾಯಿತು, ನಾಲಗೆ ದುಡುಕಿತು "ನೀವೆಲ್ಲ ರಿಯೆಕ್ಷನರಿಗಳು" ಎಂದ.

ಕಾಂಚನಮಾಲೆ ಅದನ್ನು ಕೇಳಿ ನಕ್ಕು "ಅದು ಉಭಯತರಿಗು ಸಲ್ಲುವ ಮಾತು" ಎಂದಳು. ಬಳಿಕ ಮಾತು ಮುಗಿಸಿ ಕಳುಹಿಸಿಕೊಟ್ಟಳು

ಅವನಾಡಿದಂತಹ ಕೊನೆಯ ಮಾತು ಮಾತ್ರ ತೀರ ಬೇಸರವನ್ನುಂಟು ಮಾಡಿತು 'ಅದೇ—ಅವಳ ರಾಜಕೀಯದ ನಿಲುವಿನ ಮಾತು', ಅದರ ಮೇಲೆ ಸೇತುರಾಯಗೆ ಅವಿಶ್ವಾಸ ಬಂದಿದೆಯಂತೆ. ನಿಜ, ಆ ವಿಷಯ ದಲ್ಲಿ ಅವಳಿಗೂ ಅವಿಶ್ವಾಸ ಹುಟ್ಟಿದೆ. ಆಗಾಗ ಸಂದೇಹ ಬರುತ್ತದೆ. ಆದರೆ ಸೇತುರಾಯ ಅಂಥ ಮಾತನ್ನು ಮಧುಸೂದನನಂತಹ ಮೂರ ನೆಯ ವ್ಯಕ್ತಿಯೊಡನೆ, ಅನ್ಯನೊಡನೆ ಚರ್ಚಿಸಿದ್ದೆಂಬುದು ಸೋಜಿಗ. ತನ್ನ, ಅವನ ದೀರ್ಘಕಾಲದ ಮಿತ್ರತ್ವವನ್ನು ನೆನೆದಾಗ, ಅದಕ್ಕೆ ಹೆಚ್ಚಿನ ಬೆಲೆ ಹಾಗಿದ್ದರೆ ಆತ ಇಷ್ಟು ದಿನ ತನ್ನ ಸ್ನೇಹವನ್ನು ಪ್ರೇಮದ ಕಣ್ಣುಗಳಿಂದ ಯಾಚಿಸಿದ ಸಂಗತಿ ನಿಜವಿರಬಹುದೇ-ಎಂಬ ಅನುಮಾನ ಮೂಡಿತು ತಾನು ಅವನ ಕಡೆಗೆ ತೋರಿದ ಪ್ರೀತಿಯಲ್ಲಿ ವಂಚನೆಯಿದ್ದಿರಲಿಲ್ಲವಾದರೂ ಆತನ ಪಾಲಿಗೆ ಅದೊಂದು ರಾಜ ಕೀಯದ ಗಾಳವಾಗಿತ್ತಲ್ಲವೇ—ಎಂದು ತೋರಿತು ರಸ್ಯಾ ದೇಶದ ಹೊಸ ಸಾಹಿತ್ಯದ ಹಲವು ಕತೆಗಳನ್ನೋದಿದ ಅವಳಿಗೆ ಅಲ್ಲಿನ ಪ್ರಣಯಿಗಳಿಗೆಲ್ಲ ಹಿನ್ನೆಲೆ 'ದೇಶಭಕ್ತಿ', 'ಪಕ್ಷಪ್ರೇಮ', 'ಗುಪ್ತಚರ್ಯೆ' 'ಉತ್ಪನ್ನವರ್ಧನೆ' ಎಂಬುದನ್ನು ಆಧಾರವಾಗಿ ಕೊಟ್ಟಾಗ, ಈಕೆ ಓದಿ ಅರ್ಥವಾಗದೆ ಕುಳಿತಿದ್ದಳು ತುಸುವಾದರೂ ಮನಃಶಾಸ್ತ್ರ ಬಲ್ಲ ಅವಳಿಗೆ, ತನ್ನ ಮನಸ್ಸಿನ ನೈಸರ್ಗಿಕ ಒಲ ತಿಳಿದ ಅವಳಿಗೆ—ಪ್ರೇಮ, ಒಲುಮೆ, ದಾಂಪತ್ಯ ಮೊದಲಾದುವು ಅರ್ಥಶಾಸ್ತ್ರ, ರಾಜಕೀಯಗಳ ಅಡಿಯಾಳುಗಳು ಎನಿಸವು ಅವೆಲ್ಲ ನಿಸರ್ಗದ ಸ್ವತಂತ್ರದ ಶಕ್ತಿಗಳು. ನಮ್ಮ ದೇಶದಲ್ಲಿ ವರದಕ್ಷಿಣೆಗಳಿಗಾಗಿ ಆಗುವ ನಂಟಸ್ತಿಕೆಗಳಂತೆ ರಾಜಕೀಯ ಫಲಪ್ರಾಪ್ತಿಗಾಗಿ ನಡೆಯುವ ಮದುವೆಗಳು, ವ್ಯಾಪಾರ ವಾಗಬಲ್ಲುವೇ ಹೊರತು ದಾಂಪತ್ಯವೆನಿಸಲಿಲ್ಲ ಗಂಡಹೆಂಡಿರಲ್ಲಿ ರಾಜಕೀಯದಲ್ಲಿ ಭಿನ್ನಾಭಿಪ್ರಾಯ ಬಂದರೆ ವಿವಾಹ ವಿಚ್ಛೇದನೆಯೇ ಅವರಿಗೆ ಗತಿಯೇ? ಹೀಗಿದ್ದಲ್ಲಿ ರಾಜಕೀಯವು ಹುಟ್ಟುವುದಕ್ಕೆ ಮುಂಚೆಯೇ ಮಾನವಕುಲದಲ್ಲಿ ನೈಸರ್ಗಿಕವಾಗಿ ಹುಟ್ಟಿ ಬಂದ ಪ್ರೇಮ, ದಾಂಪತ್ಯಗಳ ಹೇತು ಅರ್ಥಶೂನ್ಯವಾದೀತು—ಎಂದೆನಿಸಿತು. ಅಂದಿಗೆ ಸೇತುರಾಯನ ವಿಷಯದಲ್ಲಿ ಅವಳಿಗಿದ್ದ ಪ್ರೇಮದ ಕನಸು, ಆಶೆಗಳೆಲ್ಲ ನುಚ್ಚುನುರಿಯಾದುವು.

ಆಕೆಗೆ ತುಂಬು ವಯಸ್ಸು, ದಿನವೆಲ್ಲ ಎಷ್ಟೇ ಸಾರ್ವಜನಿಕ ಕೆಲಸಗಳಲ್ಲಿ ದುಡಿದು ಬೆಂಡಾದರೂ, ಶರೀರದ ನೈಸರ್ಗಿಕ ಲಾಲಸೆಗಳು ಮಾಯವಾಗುನಂತಿಲ್ಲವಷ್ಟೆ. ಅವು ತಮ್ಮ ಪಾಲನ್ನು ಬೇಡುತ್ತಿರುವಾಗ ಮನಸ್ಸಿನಲ್ಲಿ ಮದುವೆಯ ಹಂಬಲವನ್ನು ಎಷ್ಟೋ ಬಾರಿ ಮಾಡಿದುದು ಉಂಟು. ದಿನದಿಂದ ದಿನ ತನ್ನ ಸ್ಥಾನ, ಮಾನಗಳು ಏರಿದಂತೆ, ಅವಕ್ಕೆ ಹೊಂದಿಬರುವ ವ್ಯಕ್ತಿಯನ್ನು ಆರಿಸುವುದು ಕಷ್ಟವಾಯಿತು. ತನ್ನ ಕುಲ, ಅನಂತರ ಬೆಳೆದುಬಂದ ರೀತಿಗಳನ್ನೆಲ್ಲ ನೆನೆದಾಗ ಅವಿವಾಹಿತಳಾದ ತಾನು ಗಂಡಸರೊಡನೆ ಸಮಾನಳಾಗಿ ವಿಹರಿಸುತ್ತಿದ್ದಾಗ, ಎಷ್ಟು ತಪ್ಪಿದರೂ, ತನ್ನ ಪ್ರೇಮದ ಬಯಕೆಗೆ ಮಧುರವಾದ ರೂಪವೊಂದು ಬರಬೇಕೆಂಬ ಆಸೆ ಕಾಡುತ್ತಿತ್ತು. ಕಾಮದ ಕರೆಯನ್ನು ಮನ್ನಿಸುವ ಗಂಡುಗಳೆಷ್ಟೋ ಅವಳ ಎಟುಕಿನಲ್ಲಿ ಇರುವರಾದರೂ. ಪ್ರೇಮದ ಕರೆಗೆ ಓಗೊಡುವವರಿಲ್ಲ. ಓಗೊಟ್ಟ ಒಂದು ಜೀವ, ಕಪಟ ನಾಟಕವಾಡಿದುದು ಅಸಹನೀಯವೆನಿಸಿತು. ಅಂಥ ಜೀವಕ್ಕೆ ತನ್ನದಾದ ಒಂದು ಹೃದಯವಿದ್ದರೆ, ರಾಜಕಾರಣಕ್ಕಾಗಿ ಇಂಥ ವಿಷಯದಲ್ಲಿ ಕಪಟವಾಡುವ ಶಕ್ತಿ ಅದಕ್ಕಿದ್ದರೆ, ಅಂಥ ಹೃದಯಕ್ಕೆ ದೇಶಪ್ರೇಮ, ಯಾವ ನಿಷ್ಠೆಯ ವಸ್ತುವಾಗಿ ಉಳಿದೀತು? ವ್ಯಕ್ತಿ ಸ್ವಾರ್ಥ ಅದನ್ನು ಸ್ವಲಾಭಕ್ಕಾಗಿ ತಿರುಗಿಸಿಕೊಳ್ಳಲಾರದೇ–ಎನಿಸಿತು.

ಇವನ್ನೆಲ್ಲ ನೆನದಂತೆ ಶ್ರಮವಾದಿಗಳ ಆದರ್ಶ, ಮೈತ್ರಿ, ದಾರಿಗಳೆಲ್ಲ ಅನ್ಯದೇಶೀಯ ಪ್ರಭಾವಗಳಿಗೆ ಒಳಗಾದಂತೆ ಕಾಣಿಸಿತು. ಅರುಣಾಚಲಯ್ಯನವರು ಆಗಾಗ ಚುಚ್ಚಿ ನುಡಿಯುತ್ತಿದ್ದ ಮಾತುಗಳು ಸತ್ಯ ಎನಿಸತೊಡಗಿತು.

ಅವುಗಳ ಮುಂದೆ ತನ್ನ ನಿಲುವೆಯನ್ನು ತಾನೇ ಅಳೆದುಕೊಳ್ಳುತ್ತಾಳೆ. "ನೀವು ನನಗೊಂದು ಸಮಸ್ಯೆ" ಎಂದ ಅರುಣಾಚಲಯ್ಯನವರ ಮಾತು ನೆನಪಾಗುತ್ತದೆ. ಅದು ಅವರು ಪರಿಹಾಸ್ಯಕ್ಕೆ ನುಡಿದ ಮಾತಾದರೂ ಸತ್ಯವಲ್ಲವೇ ಎಂಬ ಸಂಶಯ ಬರುತ್ತದೆ. ರಾಜಕೀಯದಲ್ಲಿ ಅವಳ ಮನಸ್ಸೇನೆಂದು ಉಳಿದವರಿಗೆ ಅರ್ಥವಾಗ

ಲ್ಲಿಲ್ಲವೇ ?–ಎಂದು ಪ್ರಶ್ನಿಸಿದರೆ ಇದ್ದುದು ಕಾಣಿಸುತ್ತದೆ. ದೊರೆ
ಅವಕಾಶವನ್ನು ಯಾವುದೋ ಆದರ್ಶ ನೆನಪಿನಿಂದ ತಡೆ ಹಿಡಿದು
ಕಾಣಿಸುತ್ತದೆ ಅದೊಂದು ತ್ಯಾಗವಲ್ಲವೇ–ಎಂದು ನೆನೆದರೆ, ಅದ
ಬೆಲೆಯಿಲ್ಲದಾಗಿಯೂ ಕಾಣಿಸುತ್ತದೆ ಇವನ್ನೆಲ್ಲ ಮರೆತು, ಸಾಮಾ
ಹೆಣ್ಣಿನ ಬಾಳನ್ನು ನಡೆಯಿಸುವೆನೆಂದರೆ, ಅಷ್ಟರಿಂದಲೂ ತೃಪ್ತಿಯಿ
ಹಾಗಿದ್ದರೆ ತಾನೇನು ಸಾಧಿಸಿದಂತಾಯಿತು ? ನೆನೆದಾಗ ತನ್ನಿಂ
ಭಿನ್ನ ದೃಷ್ಟಿಯುಳ್ಳ, ಯಶಸ್ಸು, ಅಪಯಶಸ್ಸುಗಳೆರಡಕ್ಕೂ ಜೋತಾಡ
ಸಾಮಾನ್ಯ ಮೇಧಃಶಕ್ತಿಯ ಅರುಣಾಚಲಯ್ಯನವರೇ ಹಿರಿ
ವ್ಯಕ್ತಿಗಳಾಗಿ ಕಾಣಿಸುತ್ತಾರೆ ಅವರಿಗೆ ತಮ್ಮ ಮಿತಿ ತಿಳಿದಿದೆ
ಎಟುಕಲಾರದ ಆದರ್ಶಕ್ಕೆ ಕೈ ಚಾಚುವುದಿಲ್ಲ ಅಪ್ರಾಮಾಣಿಕ
ಎಂಬುದಿಲ್ಲ ಅವರನ್ನೇ ಸಂಪೂರ್ಣವಾಗಿ ಏತಕ್ಕೆ ಅನುಸರಿಸಬಾರ
ಎಂದು ಯೋಚಿಸಿದರೆ ಅವರ ಆದರ್ಶ ಅಲ್ಪ ತೃಪ್ತಿಯದಾಗಿ ಕಾ
ಸುತ್ತದೆ ಹೋಗುತ್ತಿರುವ ಚುರುಕು ಸಾಲದೆನಿಸುತ್ತದೆ. ಕಲುಷಿ
ವಾಗಿದ್ದರೂ, ಪ್ರಜಾತಂತ್ರದಲ್ಲಿಯೇ ಅವರಿಗೆ ವಿಶ್ವಾಸ ಆ ಪ್ರಜಾ
ತಂತ್ರ ಇಷ್ಟೊಂದು ಮಲಿನವಾಗಿರುವಾಗ ಗುರಿ ಸೇರುವುದು ಅಸಾಧ
ವೆನಿಸುತ್ತದೆ

"ಯುಗ ಯುಗದ ಕಾಯಿಲೆಗೆ ನಾಲ್ಕೆಂಟು ವರ್ಷಗಳ
ಚಿಕಿತ್ಸೆ ಸಾಧ್ಯವೇ ?" ಎಂಬುದು ಅವರ ವಾದ

"ನಮ್ಮ ಬದುಕಿನಲ್ಲಿ ಸಾಧಿಸಲಾರದ್ದನ್ನು ನಾಳೆ ಯಾ
ಸಾಧಿಸುವವರು ? ಯಾರು ಸಾಧಿಸಿದರೇನು ? ಬಿಟ್ಟರೇನು" ಎನ್ನುತ್ತ
ಅವಳ ಆತುರದ ಮನಸ್ಸು

"ಮನುಷ್ಯನ ಬಾಳ್ವೆ, ಜನತೆಯ ಬಾಳ್ವೆ ಒಂದು ತಲೆಮಾರಿ
ವರು ಕಟ್ಟಿದ್ದಲ್ಲ, ಬಿಟ್ಟದ್ದಲ್ಲ" ಎನ್ನುತ್ತಾರೆ ಅವರು

ಎಷ್ಟು ಅಂತರ ತಂತಮ್ಮಲ್ಲಿ ! ಆದರೆ ಯಾರೊಡನೆ ತನ
ಧ್ಯೇಯಸಾಮ್ಯವಿದೆಯೋ ಅವರ ಆಳ, ರೀತಿ, ತಿಳಿಯಲಾರದ್ದು.

ಹೀಗೆ ಕಾಂಚನಮಾಲೆಯ ಮನಸ್ಸು ಇಂಥ ಗೊಂದಲದ
ಸಿಲುಕಿ ನರಳುತ್ತಿರುವಾಗಲೇ ಮೂರನೆಯ ಚುನಾವಣೆ ಇದಿ
ರಾದಿತು. ವಾಮನರಾಯನು ತನ, ತಂತ್ರ, ಸಾಧನೆಗಾಗಿ ಒಡ

ತಂದು, ದೇಶವಾದಿಗಳ ಸಹಕಾರವನ್ನು ಕಿತ್ತುಕೊಂಡು ಸಮ್ಮಿಶ್ರ ಸರಕಾರದ ಆಯಸ್ಸನ್ನು ಒಂದು ವರ್ಷಕ್ಕಿಂತ ಮುಂಚಿತವಾಗಿಯೇ ಕೊನೆಗೊಳಿಸಿ ಬಿಟ್ಟ. ಈಗ ಎಲ್ಲ ಹಳೆಯ ನೆನಪುಗಳನ್ನು ಮರೆತು, ಕೆಲಸಗಳನ್ನು ಮರೆತು, ಹೊಸ ದಿನಗಳನ್ನು ಇದಿರು ಕಾಯಬೇಕು.

* * * *

ಅರುಣಾಚಲಯ್ಯನವರು ತಮ್ಮ ಮುಂದಿನ ಧ್ಯೇಯ, ಕಾರ್ಯ, ಯೋಜನೆಗಳ ವಿವರವನ್ನು ಬರೆದು ರೂಪುಗೊಳಿಸಿದ್ದಾಗಿದೆ ಅದನ್ನು ಈಗ ಕಾಂಚನಮಾಲಿ ಮನನ ಮಾಡುತ್ತಿದ್ದಾಳೆ ಅದರ ವಿವರಗಳ ಬಗ್ಗೆ ಚರ್ಚೆಗಳು ನಡೆದಿವೆ ಈಕೆಯು ಆ ಸಭೆಗಳಿಗೆ ಹೋಗಿ ಕುಳಿತು ಕೇಳುತ್ತಾಳೆ ತನ್ನ ಮನಸ್ಸಿನ ಆಕ್ಷೇಪಗಳನ್ನು ಒತ್ತಿ ಹೇಳಿದಳಾದರೆ ಉಳಿದವರು "ನೀವು ಶ್ರಮವಾದಿ ಬುದ್ಧಿಯವರು" ಎನ್ನುತ್ತಾರೆ ಹೀಗಾಗಿ ಎಷ್ಟೋಬಾರಿ ಅವರೊಡನೆ ಇದ್ದೂ ಇಲ್ಲದಂತೆ ಕುಳಿತಿರಬೇಕಾಗುತ್ತದೆ

ಅರುಣಾಚಲಯ್ಯನವರ ಮುಟ್ಟಿಗೆ ಅಸ್ಪಷ್ಟ ಆದರ್ಶಗಳಾಗಲಿ, ಕನಸುಗಳಾಗಲಿ ಉಳಿದಿಲ್ಲ ರಾಷ್ಟ್ರಸ್ವಾಮ್ಯದ ವಿಚಾರದಲ್ಲಿ ಇದೇ ನಿರ್ಧಾರದ ಮಿತಿ "ಗನಿ, ಅರಣ್ಯಸಂಪತ್ತು, ನೀರಾವರಿ, ವಿದ್ಯುತ್ ಮುಂತಾದ ಈಗಾಗಲೇ ಸರಕಾರದ ವಶದಲ್ಲಿರುವ ಉದ್ಯಮಗಳು ಮಾತ್ರ ಸರಕಾರದಿಂದ ನಡೆಯತಕ್ಕದ್ದು ನಾರಿಗೆಯ ವಿಚಾರದಲ್ಲಿ ಕೆಲವು ಮುಖ್ಯ ಮಾರ್ಗಗಳಲ್ಲಿಷ್ಟೆ ರಾಷ್ಟ್ರೀಕರಣ (ಇದೂ ತೊಡಗಿದ ತಪ್ಪಿಗೆ) ಖಾಸಗಿ ಜನಗಳು ನಡೆಯಿಸಲು ಹಿಂಜರಿಯುವ, ದೊಡ್ಡ ಭಾಂಡವಲಿನ ಉದ್ಯಮಗಳೇಸಿದ್ದರೂ ಸರಕಾರ ಸಮಾನ ಪಾಲನ್ನು ಕೊಂಡು ಆಡಳಿತೆಯ ಅಧಿಕಾರವನ್ನಿರಿಸಿಕೊಂಡು ಜನಗಳಿಂದಲೂ, ಭಾಂಡವಲು ತೆಗೆದುಕೊಂಡು ನಡೆಯಿಸಬಹುದು ಅವು ಯಾವಾವುವೆಂಬುದನ್ನು ತಜ್ಞರು ನಿರ್ಣಯಿಸುವುದು

"ಭೂಮಿಯ ರಾಷ್ಟ್ರೀಕರಣವಿಲ್ಲ. ಪ್ರತಿಫಲ ಕೊಡದ ರಾಷ್ಟ್ರೀಕರಣವೂ ಇಲ್ಲ. ಜಮೀನ್ದಾರಿಗಳ ಪದ್ಧತಿ, ಸಣ್ಣ ಹಿಡುವಳಿಯವರಿಗೆ ಕೃಷಿ ವಿಸ್ತಾರಕ್ಕೆ ಆರ್ಥಿಕ ಮತ್ತು ಶಾಸನಗಳ ಬೆಂಬಲ ಕೊಡುವುದು, ಹಿಡುವಳಿಗಳಿಗೆ ವರಿಷ್ಠಮಿತಿ ಇರುವಂತೆಯೇ ಕನಿಷ್ಠಮಿತಿ

ಯನ್ನು ಇರಿಸುವುದು

"ಶ್ರಮಗಾರರ ಹಕ್ಕಿನ ಜತೆಗೆ ಕರ್ತವ್ಯ, ಭಾಂಡವಲುಗಾರರ ಲಾಭದ ಜತೆಗೆ ಹೊಣೆ-ಇವೆರಡನ್ನೂ ಉತ್ಪನ್ನದ ದೃಷ್ಟಿಯಿಂದಲೂ ಕೊಳ್ಳುವವನ ಹಿತಸಾಧನೆಯ ದೃಷ್ಟಿಯಿಂದಲೂ ರೂಪಿಸಿ ಅಂಕೆಗೊಳಪಡಿಸುವುದು ಹೊಸ ಉದ್ಯಮಗಳಲ್ಲಿ ಲಾಭಾಂಶದ ಬದಲು ಶ್ರಮಗಾರರು ಉದ್ಯಮದ ಪಾಲುಗಾರರಾಗುವಂತೆ ಅವಕಾಶವನ್ನುಂಟು ಮಾಡುವುದು

"ನಾಡಿನ ಬಹುಸಂಖ್ಯಾಕರು ಕೃಷಿಕರಾದುದರಿಂದ, ಕೃಷಿಯೊಂದೇ ವರ್ಷದ ಅನ್ನ ಕೊಡಲಾರದೆಂಬುದರಿಂದ ಗ್ರಾಮಾಂತರಗಳಲ್ಲಿ ಕೃಷಿ ಬಿಡುವಿನ ಸಮಯದಲ್ಲಿ ಕೆಲಸ ಒದಗಿಸುವುದಕ್ಕೆ ನಿಷ್ಕೇಂದ್ರೀಕೃತ ಉದ್ಯಮ, ಕೈಗಾರಿಕೆಗಳ ಅಭಿವೃದ್ಧಿ, ಇಂತಹ ಉದ್ಯಮಗಳು ವ್ಯಾಪಾರಿ ಸ್ಪರ್ಧೆಗೆ ಸ್ವಂತ ಶಕ್ತಿಯಿಂದ ಇದಿರಿಸಬಲ್ಲ ಪ್ರಯತ್ನ, ಇವೇ ಮೊದಲಾದ ವಿವರಗಳನ್ನು ಒದಿ, ವಿಚಾರ ಮಾಡಿದ ಕಾಂಚನಮಾಲೆ, ಅರುಣಾಚಲಯ್ಯನವರೊಡನೆ ನಗುತ್ತ "ನನ್ನ ಆಯುಷ್ಯದಲ್ಲಿ ನಮ್ಮ ರೈತರು ಹೊಟ್ಟೆತುಂಬ ದುಡಿದು ಉಣ್ಣುವುದನ್ನು ನಾನು ಕಾಣಲು ಬಂದೀತೇ ?" ಎಂದು ಕೇಳಿದಳು

"ನಿಮಗಿಂತ ನಾನು ಎಷ್ಟೋ ವರ್ಷಗಳಿಗೆ ಹಿರಿಯ ಈಗಿಗಿಂತ ಒಂದು ತುತ್ತು ಹೆಚ್ಚಿಗೆ ಉಣ್ಣಬಲ್ಲ, ಒಂದು ಮಾರು ಬಟ್ಟೆ ಹೆಚ್ಚಿಗೆ ಉಡಬಲ್ಲ ಸ್ಥಿತಿ ಸಾಧ್ಯವೆಂದು ನಾನೇ ತೋರಿಸಬಲ್ಲೆ"

"ಈ ಗುಡಿ ಕೈಗಾರಿಕೆಗಳಿಂದಲೇ ?"

"ಅಷ್ಟು ಅಂಧಶ್ರದ್ಧೆ ನನಗಿಲ್ಲ ನಮ್ಮ ಗುರುಗಳಿಗೆ ಇದ್ದಿತ್ತು. ಹಳೆಗಾಲದ ಯಾವ ಗುಡಿಕೈಗಾರಿಕೆಗಳೂ ಇಂದು ಉಳಿಯುವುದು ಕಷ್ಟ. ಇಂದು ನಮ್ಮಲ್ಲಿ ವಿದ್ಯುತ್ತಿನ ಉತ್ಪಾದನೆ ಹೆಚ್ಚಿದೆ. ಅದರಿಂದ ಗ್ರಾಮಾಂತರಗಳಲ್ಲಿ ಯಾಂತ್ರೀಕರಣದ ಹಲವು ಕೈಗಾರಿಕೆಗಳು ಸಾಧ್ಯ. ಬೇಸಾಯ ನಡೆಯದ ಕಾಲದಲ್ಲಿ ಅವು ನಡೆದರೆ ತುಂಬ ಪ್ರಯೋಜನ. ಎಂಥ ಉದ್ಯಮಗಳಾಗಬೇಕು ? ಎಷ್ಟು ಜನರಿಗೆ ಉದ್ಯಮ ದೊರಕೀತು ಎಂಬುದು ನಮ್ಮ ಮುಂದಿರುವ ಸಮಸ್ಯೆ. ಅದನ್ನು ಬಿಡಿಸಿದರೆ ಮಾತ್ರ ದೇಶ ಬದುಕುತ್ತದೆ. ಬಿಡಿಸಲಾರದ

ಮೂರ್ಖರು ನಾವಾದರೆ ಆಳುವ ಅಧಿಕಾರಕ್ಕೆ ನಾವು ತಕ್ಕವರಲ್ಲ. ಈಗಿನ ಗುಡಿ ಕೈಗಾರಿಕೆಗಳ ಪರಿಚಯು ನನಗಿಂತ ನಿಮಗೆ ಚೆನ್ನಾಗಿದೆ. ಬರಿಯ ಆದರ್ಶ. ಧ್ಯೇಯ ಎಂದು ಮಾತನಾಡುವ ಬದಲು ನೀವು, ನಾವು ಕೂಡಿಯೇ ಈ ಒಗಟನ್ನು ಬಿಡಿಸುವ ಮನಃಪೂರ್ವಕವಾದ ಪ್ರಯತ್ನಮಾಡುವ ಸ್ಪಷ್ಟವಾದ ಕಲ್ಪನೆ ಇರಿಸಿಕೊಂಡು ಕೆಲಸ ಮಾಡುವುದರಲ್ಲಿ ತಪ್ಪಿಲ್ಲವಷ್ಟೆ

ಅವರು ಒಡ್ಡಿದ ಈ ಸಮಸ್ಯೆ ಎಷ್ಟು ಗಾಢವಾಗಿತ್ತೋ, ಜನ ಸಾಮಾನ್ಯರ ಹಿತದ ದೃಷ್ಟಿಯಿಂದ ಅಷ್ಟೇ ಮುಖ್ಯವಾಗಿತ್ತು. ಕಾಂಚನಮಾಲೆಯ ಕಣ್ಣಿಗೆ ಆ ಆದರ್ಶ ಚಿಕ್ಕದಾಗಿಯೂ ಕಾಣಿಸ ಲಿಲ್ಲ; ಮೂದಲಿಸುವಂತಹ ವಸ್ತುವಾಗಿಯೂ ಕಾಣಿಸಲಿಲ್ಲ ಬದಲು ತಮ್ಮ ಯೋಗ್ಯತೆಯನ್ನು ತೂಗುವುದಕ್ಕೆ ನಿಂತ ಪ್ರಶ್ನೆಯಂತೆ ಕಾಣಿ ಸಿತು. ಅಸ್ಪಷ್ಟ ಆದರ್ಶವನ್ನು ಹಿಂಬಾಲಿಸುವುದಕ್ಕಿಂತ, ಈ ಸ್ಪಷ್ಟ ಪ್ರಶ್ನೆಯನ್ನು ಬಿಡಿಸುವುದಕ್ಕೆ ಸಹಾಯ ಮಾಡುವುದು ಒಳಿತೆಂದು ತೋರಿತು.

*  *  *  *

ಇನ್ನೊಂದು ಚುನಾವಣೆಯನ್ನು ಬರಮಾಡಿಸಿದ ವಾಮನರಾಯ ಮತದಾರರನ್ನು ಆಕರ್ಷಿಸುವುದಕ್ಕೆ, ಹತ್ತು ಕೋಟಿ ರೂಪಾಯಿ ವೆಚ್ಚ ಗಳ ಪಂಚ ವಾರ್ಷಿಕ ಯೋಜನೆಯೊಂದನ್ನು ಜನಗಳ ಮುಂದಿರಿಸಿದ. ಆ ಕೋಟಿಗಳನ್ನು ಸಾಲವಾಗಿಯೂ ಕೇಂದ್ರ ಸರಕಾರದಿಂದ ದಾನ ವಾಗಿಯೂ ಪಡೆಯಬಹುದೆಂಬುದು ಅವನ ಊಹೆ ಹೊಸ ತೆರಿಗೆ ಗಳಿಂದಲೂ ಅದನ್ನು ತುಂಬಿಸಿಕೊಳ್ಳಬೇಕಾಗಬಹುದು ಎಂಬ ವಿಚಾರ ಪ್ರಕಟಿಸಿದಲ್ಲಿ ಅದರ ಆಕರ್ಷಣೆ ಹೋದೀತೆಂದು ಸುಮ್ಮನಿದ್ದ. ಅವನ ಘೋಷಣೆಯ ಭವಿಷ್ಯದ ಭರವಸೆಗಳು ತುಂಬಿಕೊಂಡಿದ್ದುವು ಸರಕಾರ ನೆರವು ಕೊಡಲಾರದ ಒಂದೇ ಒಂದು ಜೀವನದ ಮುಖವಿಲ್ಲವೆಂಬಂತೆ ಚಿತ್ರಿತವಾಗಿದ್ದುವು ಇನ್ನೊಮ್ಮೆ ಅಧಿಕಾರಕ್ಕೆ ಬಂದುದಾದರೆ ಆ ಅಷ್ಟೆಲ್ಲ ಯೋಜನೆಗಳಿಗೆ ಹಣ ದೊರಕಿಸಿಕೊಳ್ಳುವ ಹಂಚಿಕೆಗಳನ್ನು ಮಾಡಿದ್ದ, ಅವುಗಳ ಪ್ರಯೋಜನ ಹೊಂದುವುದಕ್ಕೆ ಮೊದಲೇ ಕಣ್ಣಿಟ್ಟು ಗುರುತು ಮಾಡಿದ್ದ ಜನಗಳಿದ್ದರು. ಅಲ್ಲದೆ ಹೋದರೂ

ಬಂಡವಳುಗಾರರು, ಜಮೀನುದಾರ ವರ್ಗದವರು ಅವನಿಗೆ ಬಹು ಮಟ್ಟಿನ ಬೆಂಬಲವೆನ್ನಬೇಕು. ಅವನ ಪಕ್ಷದ ಕಾರ್ಯಕಾರಿ ಮಂಡಳಿ ಅವನವರಿಂದಲೇ ಕೂಡಿದೆ, ಗ್ರಾಮ ಸಮಿತಿಗಳಿಂದ ತೊಡಗಿ ಮೇಲಿನ ತನಕ ಅವನು ಜನಗಳನ್ನಾಯ್ದು ಕಟ್ಟಿ ಬಂದ ರಚನೆಯದು ಆತ ದಾರಿ ಕಾಯುತ್ತಿರುವುದು ಚುನಾವಣೆಯ ದಿನವೊಂದನ್ನೇ

ಅರುಣಾಚಲಯ್ಯನವರಿಗೆ ಈಬಾರಿಯೂ ಬಹುಮತದ ವಿಶ್ವಾಸ ವಿಲ್ಲ. ಅದಕ್ಕಾಗಿ ಚುನಾವಣೆಯ ಮೈತ್ರಿ ಬಯಸುತ್ತಿದ್ದಾರೆ, ನೀಡು ವವರಿಲ್ಲ. ಹಿಂದೆ ದೇಶವಾದಿ ಪಂಗಡದಿಂದ ಅವರಿಗೆ ಸಹಕಾರ ಕೊಟ್ಟ ಮೂವರು ಮಂತ್ರಿಗಳ ಬೆಂಬಲವಿದೆಯಾದರೂ ಅವರು ವಾಮನ ರಾಯನ ಎದುರಿಗೆ ನಿಂತು ಕಾದಾಡುವ ಶಕ್ತಿಯಿದ್ದವರಲ್ಲ. ಆದುದ ರಿಂದ ಈ ನಾಲ್ಕು ವರ್ಷ ಸ್ವಂತ ದುಡಿಮೆಯಿಂದ ಪ್ರತಿಷ್ಠೆಗಳಿಸಿದ ಅವರು, ಪಕ್ಷವನ್ನೇ ಬದಲಿಸಿ ಜನವಾದಿಗಳಾದರು.

ಚುನಾವಣೆಗಾಗಿ ಇದಿರಾಳಿಗಳು ಚತುರಂಗಬಲವನ್ನು ನಿಲ್ಲಿಸುವ ಏರ್ಪಾಟು ನಡೆಯಿತು ಅರುಣಾಚಲಯ್ಯ ವಾಮನರಾಯನಂತೆ ಅಧಿಕಾರಿಗಳನ್ನು ಬಳಸಿಕೊಂಡು ಕೆಡಿಸುವ ಯೋಚನೆ ಮಾಡಲಿಲ್ಲ. ಅದಿಲ್ಲದೆ ಅಧಿಕಾರಿಗಳನ್ನು ವಿವಿಧ ಕ್ಷೇತ್ರಗಳಲ್ಲಿ ಗೊತ್ತುಪಡಿಸಿದ. ಅವರಲ್ಲಿ ಕೆಲವರಾದರೂ ತನಗೆ ನೆರವು ನೀಡಬಹುದೆಂಬ ವಿಶ್ವಾಸ ವಾಮನರಾಯನಿಗಿತ್ತು ಕಾಲ ಬರುತ್ತಲೇ ಆತ ಮೇಲಿನವರ ವರ ಪಡೆದು, ತಮ್ಮ ಪಕ್ಷದ ಹುರಿಯಾಳುಗಳ ಹೆಸರುಗಳನ್ನು ಪ್ರಕಟಿಸಿದ. ಅವರಲ್ಲಿ ಹಲವರು ಹಣದ ಚಿಂತೆಯಿಲ್ಲದವರು ಹಿಂದೆ ಸೋತ ಕೆಲವು ಮಂತ್ರಿಗಳು ತಿರುಗಿ ಉದಯಿಸಿದರು

ಶ್ರಮವಾದಿಗಳಿಗೆ, ಏನಿಲ್ಲದೆ ಹೋದರೂ ಈ ಮಹಾನುಭಾವರ ಇತಿಹಾಸ ಚೆನ್ನಾಗಿ ಗೊತ್ತು ವಾಮನರಾಯನ ದಿಟ್ಟತನವನ್ನು ಕಂಡು ಅವರಿಗೆ ಬೆರಗೂ ಆಯಿತು ಜನಕ್ಕೆ ಅಪ್ರಿಯರಾದವರನ್ನು ಸಹ ಕಟ್ಟಿಕೊಂಡು ಸ್ಪರ್ಧೆಗೆ ನಿಲ್ಲುವ ಅವನ ಧೈರ್ಯ ವಿಸ್ಮಯ ಹುಟ್ಟಿಸಿತು. ಅವರಿಗಂತು ಅದು ಅನುಕೂಲವೇ ಇದಿರಾಳಿಗಳ ದೋಷ ಅವರ ಸಂಪತ್ತು ಮತದಾರರ ಮುಂದೆ ಪ್ರತಿಸ್ಪರ್ಧಿಗಳ ದೋಷಗಳನ್ನು ಬಯಲಿಗೆಳೆಯುವುದಕ್ಕೆ ಮತ್ತಷ್ಟು ಅನುಕೂಲ. ಅವರಿಗೆ ಧನಿಕರ

ಬೆಂಬಲವಿಲ್ಲ. ನಗರದ ಮಜೂರ ವರ್ಗ ಅವರ ಕೂಗು ಕೇಳಿದುದ ರಿಂದಲೇ ಲೋಕ ಅಲ್ಲೋಲ ಕಲ್ಲೋಲವಾಗುತ್ತದೆಂದು ಘರ್ಜಿಸಬಲ್ಲ ದಂಡು ಅವರದು ಎಷ್ಟು ಹೊತ್ತಿಗೆ ಕರೆದರೂ ನೆರೆಯಬಲ್ಲ ಹಿಂಬಾಲಿ ಕರು 'ಇದ್ದವರಿಂದ ಇಲ್ಲದವರಿಗೆ ಕಿತ್ತುಕೊಡುತ್ತೇವೆ' ಎಂಬ ಆಶ್ವಾಸನೆ ಅವರ ಮುಖ್ಯ ಆಕರ್ಷಣೆ ಉಳಿದ ಆಕರ್ಷಣೆಗಳಿಗಿಂತ ವ್ಯಕ್ತಿ ಲಾಭ ಹೆಚ್ಚಿನ ಆಕರ್ಷಣೆಯಲ್ಲವೆ? "ಚೀನ ಮೂರು ವರ್ಷಗಳಲ್ಲಿ ನರಕವನ್ನು ಸ್ವರ್ಗವನ್ನಾಗಿ ಮಾಡಿತು ಮನಸ್ಸಿದ್ದರೆ ನಾವೂ ಮಾಡ ಬಹುದು" ಎಂದರೆ ನಂಬಲೇಬೇಕು ಎಷ್ಟು ಸಾಕ್ಷಿಗಳು ಬೇಕು? ಅವರ ಮಾತಿನ ಮಂತ್ರ ಅಂಥದು

ಚಾಟಿಯಿಂದಲೂ, ಉಪನ್ಯಾಸದಿಂದಲೂ ಮನುಷ್ಯನ ಪಾರಂ ಪರ್ಯ ಬುದ್ಧಿ, ಸ್ವಭಾವ, ಆಲಸ್ಯ, ಅಪ್ರಮಾಣಿಕತೆಗಳಲ್ಲಿ ಬದಲಾಗ ಬಲ್ಲವು ಎಂಬ ಅಗಾಧ ಸಂಶೋಧನೆ ಅವರದು 'ಚೀನದ ಬರಡು ಎಮ್ಮೆಗಳು ವರ್ಷಕ್ಕೆರಡು ಕರು ಹಾಕತೊಡಗಿವೆ'–ಎಂದರೆ ಅದನ್ನು ನಂಬುವವರಿದ್ದಾರೆ ವಾಮನರಾಯನೂ ಅಂಥ ಸೃಷ್ಟಿ ತೋರಿಸಲಾರ ಅವನ ಪಂಚವಾರ್ಷಿಕ ಯೋಜನೆಯಲ್ಲಿ ಪ್ರಜೆಯ ಸರಾಸರಿ ವರ ಮಾನ ಇಮ್ಮಡಿಸುತ್ತದೆ–ಅಷ್ಟೆ

ಅರುಣಾಚಲಯ್ಯನವರು ಅಷ್ಟೂ ಅಂದಿಲ್ಲ ಶ್ರಮವಾದಿ ಸೇತುರಾಯ "ದುಡಿಮೆಗೆ ಬೆಲೆ, ನೋಟಗಲ್ಲ ದುಡಿದವರಿಗೆ ವಸತಿ, ವಿರಾಮ, ಹೊಟ್ಟೆ ಬಟ್ಟೆಗೆ ತೃಪ್ತಿ, ವೈದ್ಯಕೀಯ ನೆರವು—ಇವುಗಳನ್ನೆಲ್ಲ ಬಲಿಷ್ಠ ಶ್ರಮಗಾರ ಸರಕಾರ ಒಂದು ವರ್ಷದಲ್ಲಿ ಮಾಡಿಕೊಟ್ಟೀತು" ಎನ್ನುತ್ತಿದ್ದಾನೆ

ಈ ಬಾರಿಯಾದರೂ ಕಾಂಚನಮಾಲೆ ತಮ್ಮೊಂದಿಗೆ ಕೂಡಿ ಕೆಲಸ ಮಾಡುತ್ತಾಳೆಯೋ ಎಂಬ ಆಶೆ ಅರುಣಾಚಲಯ್ಯನವರದು "ನಿಮಗೆ ನಿಜಕ್ಕೂ ಶ್ರಮವಾದಿಗಳ ಧ್ಯೇಯ ರೀತಿಗಳೇ ಒಪ್ಪಿಗೆಯಾದರೆ ನಾನು ನಿಮ್ಮ ಮನಸ್ಸಿಗೆ ಅಡ್ಡ ಬರಲಾರೆ ನೀವು ಈತನಕ ಕೊಟ್ಟ ನೆರವಿ ಗಾಗಿ ನಾನು ಋಣಿ. ಹಾಗಲ್ಲ, ನಮ್ಮ ಪಕ್ಷದಲ್ಲಿ ವಿಶ್ವಾಸವಿಲ್ಲದಿದ್ದರೂ, ನನ್ನಲ್ಲಿ ವಿಶ್ವಾಸವಿದೆಯೆಂದಾದರೆ, ನನಗಾಗಿ ನಮ್ಮ ಪಕ್ಷವನ್ನು ಸೇರ ಬೇಕು" ಎಂದು ಬೇಡಿದರು ಆಕೆಗೆ ವಾಮನರಾಯನ ಕಡೆಯಿಂದ

ಕರೆ ಬರುವಂತಿರಲಿಲ್ಲ ಅವಳು ದೇಶವಾದಿ ಪಕ್ಷಕ್ಕೆ ರಾಜಿನಾಮೆಯನ್ನು ಸಲ್ಲಿಸಿಯೂ ಆಗಿತ್ತು. ಈಗ ಅವಳ ಮನಸ್ಸಿಗೆ ಅವಳೇ ಒಡತಿ ಚುನಾವಣೆಯಲ್ಲಿ ಸ್ಪರ್ಧಿಸುವುದಕ್ಕಿಂತ ಹೆಚ್ಚಾಗಿ ಅವಳ ಮನಸ್ಸಿನಲ್ಲಿ, ಕೆಲವು ದಿನಗಳ ಹಿಂದೆ ಅರುಣಾಚಲಯ್ಯನವರು ಒಡ್ಡಿದ ಸಮಸ್ಯೆ ಅವಳನ್ನು ಕಾಡುತ್ತಿತ್ತು ಗ್ರಾಮವಾಸಿಗಳಿಗೆ ಯಾವ ಬಗೆಯಿಂದ ಉಪವೃತ್ತಿ, ಉದ್ಯೋಗಗಳನ್ನು ಒದಗಿಸಬಹುದು ಎಂಬ ಪ್ರಶ್ನೆ ಬೇತಾಳದಂತೆ ಅವಳ ಬೆನ್ನು ಹತ್ತಿತ್ತು ತನ್ನ ಮನಸ್ಸಿಗೆ ಅದರ ಕಾರ್ಯವಿವರ ಸ್ಪಷ್ಟವಾದರೆ ಆ ಕಾರ್ಯದ ಹೊಣೆ ಹೊರುವುದಕ್ಕೆ ಅವಳು ಸಿದ್ಧ ಅದೊಂದನ್ನೇ ಮೆಚ್ಚಿ, ಚುನಾವಣೆಯ ರಂಗಕ್ಕೆ ಇಳಿಯುವುದಕ್ಕೂ ಸಿದ್ಧಳೇ ಅದರ ಮುಂದೆ ಪಕ್ಷದ ಇನ್ನಾವ ಆಕರ್ಷಣೆಯೂ ಅವಳಿಗಿಲ್ಲ

ಅವಳ ಮೌನವನ್ನು ಕಂಡು ಅರುಣಾಚಲಯ್ಯನವರು "ನಾವು ಗೆಲ್ಲಲಾರೆವು, ಅಥೋಭ್ರಷ್ಟ ತಥೋಭ್ರಷ್ಟರಾಗುವಿರೆಂಬ ಭಯವೇ?" ಎಂದು ಕೇಳಿದರು

"ನನ್ನ ವ್ಯಕ್ತಿಕೀರ್ತಿಯ ಅಪೇಕ್ಷೆಯಿಂದ ನಾನು ಮೌನವಾಗಿಲ್ಲ ಅವಸರದಿಂದ ದೇಶವಾದಿಗಳನ್ನು ಕೂಡಿಕೊಂಡ ಒಂದು ತಪ್ಪು ನನ್ನನ್ನು ಎಚ್ಚರಿಸಿದೆ. ಅಂಥ ಇನ್ನೊಂದು ತಪ್ಪು ಆಗಬಾರದಲ್ಲ. ಕೆಲವು ಕಾಲ ಸ್ವತಂತ್ರಳಾಗಿ ಉಳಿದರೇನು ? ನಿಲ್ಲುವುದಾದರೂ ಸ್ವತಂತ್ರಳಾಗಿ ನಿಂತರೇನು ? ಎಂದು ಕಾಣುತ್ತದೆ"

"ಪ್ರಮವಾದಿಗಳು ಗೆಲ್ಲಬೇಕನ್ನುತ್ತೀರಾ ?"

"ನಿಮಗೆ ನನ್ನ ವಿಷಯದಲ್ಲಿ ಅನುಮಾನ ಇನ್ನೂ ಉಳಿದಿದೆ. ನಾನೆಂದೂ ನನ್ನ ಮನಸ್ಸನ್ನು ಅಡಗಿಸಿಲ್ಲ, ನೀವೂ ಹಾಗೆ ಮಾಡಿಲ್ಲ. ನಾನು ಅವರನ್ನು ಸೇರುವ ಕಾಲ ಬಂದರೆ ನಿಮ್ಮೊಡನೆ ಬಂದು ಹೇಳಿ ಹೋದೇನು"

ಚುನಾವಣೆಯ ದಿನ ಬಂದಾಗ, ಆಕೆ ಅರುಣಾಚಲಯ್ಯನವರ ಒಪ್ಪಿಗೆಯಿಂದ ಸ್ವತಂತ್ರ ಸ್ಪರ್ಧಿಯಾಗಿ ನಿಂತಳು. ಜನವಾದಿಗಳು ಅಲ್ಲಿ ತಮ್ಮ ಹುರಿಯಾಳನ್ನು ನಿಲ್ಲಿಸಲಿಲ್ಲ ತುಸುವೇ ಮೊದಲು ಸೇತುರಾಯ ಅವಳನ್ನೊಲಿಸಿಕೊಳ್ಳುವ ಪ್ರಯತ್ನ ಮಾಡುವುದಕ್ಕೆ

ತಾನಾಗಿ ಅವಳ ಭೇಟಿಗೆ ಬಂದ ಜನವಾದಿ ಸ್ಪರ್ಧಾಳುಗಳ ಪಟ್ಟಿಯಲ್ಲಿ ಅವಳ ಹೆಸರಿಲ್ಲದುದನ್ನು ಕಂಡು, ಅವಳಿಗೂ ಅರುಣಾಚಲಯ್ಯ ನವರಿಗೂ ಘರ್ಷಣೆ ಬಂದಿದೆ ಎಂಬ ಸುದ್ದಿಯನ್ನು ನಂಬಿ, ಆತ ಬಂದಿದ್ದ ಆದರೆ ಆ ಕಾಲಕ್ಕೆ ಅವಳ ಅಂತರಂಗದ ಆಕರ್ಷಣೆ ಸತ್ತು ಹೋಗಿತ್ತು, ವ್ಯವಹಾರದ ಮಾತುಗಳಷ್ಟೆ ನಡೆದು ಸೇತುರಾಯ ನಿರಾಶೆಯಿಂದ ಮರಳಿದ

ಕದನ ರಂಗದಲ್ಲಿ ಅವಳು ದೇಶವಾದಿ, ಶ್ರಮವಾದಿ ಸ್ಪರ್ಧಿಗಳನ್ನು ಇದಿರಿಸುವ ಸ್ವತಂತ್ರ ಉಮೇದುವಾರಳಾದಳು "ಯಾಕೆ ನೀವು ಜನವಾದಿ ಸಂಗಡ ಸೇರಿಲ್ಲ ?" ಎಂದು ಕೇಳುವವರೇ ಎಲ್ಲರು

## ಅಧ್ಯಾಯ ೯

ಜನಗಳಿಗೆ ರಾಜಕೀಯ ತಿಳುವಳಿಕೆಯ ಅಭಾವವಿರುವಾಗ, ತಂತಮ್ಮ ಕಡೆಗೆ ಮನಸ್ಸೆಳೆಯುವುದಕ್ಕೆ, ಪ್ರಚಾರ ಅಡ್ಡದಾರಿಯನ್ನು ಹಿಡಿಯುವುದು ಸ್ವಾಭಾವಿಕ ನೇರಾಗಿ—ತಮ್ಮ ಪಕ್ಷದ ಧ್ಯೇಯ ಇಂಥದು, ತಾವು ಸಾಧಿಸಬಹುದಾದುದು ಇಂಥದು ಎಂದು ಮನವೊಲಿ ಸುವ ಕಾರ್ಯ ಕಷ್ಟವಾದಾಗ, ದ್ವೇಷಾಸೂಯೆಗಳನ್ನು ಕೆರಳಿಸಿ, ಇದಿರಾಳಿಗಳನ್ನು ಹಳಿದು, ಕಾರ್ಯ ಸಾಧಿಸಬೇಕೆಂಬ ಚಪಲ ಮೊದಲಿ ಗಿಂತಲೂ ಇಂದು ಹೆಚ್ಚಾಗಿ ಕಾಣಿಸಿದೆ ಅಂಥ ಕಾಲವಲ್ಲಿ ಕಾಲ್ಪನಿಕ ಧ್ಯೇಯಗಳನ್ನು ಬೃಹದಾಕಾರವಾಗಿ ಬರೆದು, ಅದನ್ನು ಸ್ವಲ್ಪವಾದರೂ ಸಾಧಿಸುವುದಕ್ಕೆ, ನಿಂತ ಹುರಿಯಾಳುಗಳು ತಕ್ಕವರೇ ? ಬಲ್ಲವರೆ ? ಪ್ರಾಮಾಣಿಕರೆ ?—ಎಂಬುದನ್ನು ಮರೆತುಬಿಡುವ ಕಾಲ. ಹೀಗಿದ್ದುದ ರಿಂದ ಅರುಣಾಚಲಯ್ಯನವರು ನಾಡಿನುದ್ದಕ್ಕೂ ಸಂಚರಿಸಿ ಮರಳಿ ಬಂದಾಗ—ಅವರಲ್ಲಿ ಅಷ್ಟೊಂದು ಗೆಲುವು, ಉತ್ಸಾಹ ಮೂಡಿರಲಿಲ್ಲ. ಅವರ ಸ್ವಂತ ಗೆಲುವಿನ ಭಯಕ್ಕಿಂತ, ಪಕ್ಷದ ಗೆಲುವಿನ ಭಯ ಇನ್ನಷ್ಟು ಹೆಚ್ಚು. ಸಾಲದುದಕ್ಕೆ, ಕೆಲವು ಸ್ಪರ್ಧಿಗಳು ಮೂರು ಮೂರು ಕಡೆ

ಹೆಸರು ಪ್ರಕಟಿಸಿದ್ದರು. ಹೀಗಾಗಿ 'ತೀರ ಕೊನೆಯ ಗಳಿಗೆಯ ತನಕ ಉಳಿಯುವವರಾರು?' ಎಂದು ಊಹಿಸುವುದು ಕಷ್ಟವಾಯಿತು. ಒಬ್ಬರು ಹಾಗೆ ಮಾಡಿದರೆಂದು ಉಳಿದ ಪಕ್ಷಗಳೂ ಹಾಗೆ ಮಾಡಿದುವು ನಾಮು ಕರಣ ಹಿಂದೆಗೆಯುವ ದಿನ ಬರುವತನಕವೂ ಸ್ಪರ್ಧೆಯರೂಪ ಅಸ್ಪಷ್ಟ ವಾಗಿತ್ತು.

ಭೀಮನೂರಿನಲ್ಲಿ ಕಾಂಚನಮಾಲೆಯು ಸ್ವತಂತ್ರ ಸ್ಪರ್ಧಿ ಅವಳ ಇದಿರಿಗೆ ದೇಶವಾದಿಗಳ ಪರವಾಗಿ ಶೀನಪ್ಪನವರೂ, ಶ್ರಮವಾದಿ ಪರ ವಾಗಿ ಸೇತುರಾಯನೂ ನಿಂತಿದ್ದರು ವಿಕ್ರಮನಗರದಲ್ಲಿ ಮೊದಲಿನಂತೆ ವಾಮನರಾಯ, ಅರುಣಾಚಲಯ್ಯನವರೊಡನೆ ಸ್ಪರ್ಧೆ ಇದ್ದಿತ್ತು. ಅಲ್ಲಲ್ಲಿ ಅನೇಕ ಸ್ವತಂತ್ರರೂ ನಿಂತಿದ್ದರು ಇವರಲ್ಲಿ ಕೆಲವರು ಗೆದ್ದ ಬಳಿಕ ಒಂದೊಂದು ಪಕ್ಷ ಸೇರಬಹುದೆಂಬ ಭರವಸೆಯೂ ಇತ್ತು. ಆದರೂ ಸ್ಪರ್ಧೆ ತೀರ ವಿಕಟರೂಪವನ್ನು ತಾಳಿದುದು ವಿಕ್ರಮನಗರದಲ್ಲಿ. ಗೊಂಡಾರಣ್ಯದಲ್ಲಿ ಇದ್ದ ಅರುವತ್ತು ಸ್ಥಾನಗಳಿಗೆ ಅದರ ನಾಲ್ಮಡಿ ಸ್ಪರ್ಧಿಗಳಿದ್ದರು

ವಾಮನರಾಯನ ಮುಖ್ಯ ಸೇಡೆಲ್ಲವೂ ಜನವಾದಿಗಳ ಮೇಲೆ ಜನವಾದಿಗಳ ಪ್ರಕಟಣೆಗಳನ್ನು ರಾತ್ರಿ ಕಿತ್ತು ಬಿಸುಡುವುದು, ಅವರ ಮೇಲೆ ಸಲ್ಲದ ಆರೋಪ ಬರೆಯಿಸುವುದು ಅವನ ಅಪಪ್ರಚಾರದ ಒಂದು ದಾರಿ ಇದಿರಾಳಿಗಳ ಸಭೆ ಜರಗುವಲ್ಲಿ ಗದ್ದಲಕಾರರನ್ನು ತುಂಬಿಸಿ ಮಾತು ಕೇಳಿಸದಂತೆ ಮಾಡುವುದು ಮತ್ತೊಂದು ಮಾರ್ಗ. ಯಾವ ಅಸಭ್ಯ ಏರ್ಪಾಟಿಗೂ ಅವನು ಸಿಪುಣ ಬಲ್ಲವರು ಆಕ್ಷೇಪಿಸಿದರೆ "ಜನ ಹಾಗೆ ಮಾಡಿದರೆ ನಾನೇನು ಮಾಡಲಿ?" ಎಂಬ ನಿರಪರಾಧದ ಸೋಗು ಬೇರೆ ಇವುಗಳ ಜತೆಗೆ ದಾಕ್ಷಿಣ್ಯ, ಆಸೆ, ಲಂಚ, ಭಯಗಳನ್ನು ತೋರಿಸುವ ನೀತಿಯೂ ತೊಡಗಿತು ಇದರಿಂದ ಅಸಹನೆಗೊಂಡ ಜನವಾದಿ ಸ್ವಯಂಸೇವಕರು ಹಾಗೆಯೇ ಪ್ರತಿಭಟಿಸತೊಡಗಿದಾಗ ಅರುಣಾಚಲಯ್ಯ ಅವರನ್ನು ಕರೆಯಿಸಿ "ಅವರಂತೆ ಕೆಸರಿನ ಓಕುಳಿ ಯಾಡಿ ಜಯಗಳಿಸುವ ಆಶೆ ನನಗಿಲ್ಲ, ವಿಕ್ರಮನಗರದಲ್ಲಿ ಓದಿದವರು, ಬಲ್ಲವರು ಇದ್ದಾರೆ. ಈತನಕ ನಾನು ಪ್ರಾಮಾಣಿಕನಾಗಿ ದುಡಿದದ್ದಾ ದರೆ ಅವರು ಆರಿಸಲಿ, ಇಲ್ಲವಾದರೆ ಬಿಡಲಿ" ಎಂದು ನುಡಿದು

ಬೆಂಬಲಿಗರ ಉದ್ವೇಗವನ್ನು ತಡೆದು, ಪಕ್ಷದ ಸಲುವಾಗಿ ನಾಡನ್ನು ಸಂಚರಿಸತೊಡಗಿದರು

ಸೇತುರಾಯ ತನ್ನ ಪ್ರಾತಿನಿಧ್ಯ ಸಾರಿದವನೇ, ವಿಜಯ ನಿಶ್ಚಯವೆಂಬಂತೆ ಅಲೆದಾಡತೊಡಗಿದ ಆದರೆ ಕಾಂಚನಮಾಲೆ ತನಗೆ ಇದಿರಾಗಿ ನಿಂತಿರುವುದು ತಿಳಿಯುತ್ತಲೆ, ರಾಜಕೀಯ ಚತುರನಾದ ಆತ ಇನ್ನೊಮ್ಮೆ ಅವಳ ಮನೆಗೆ ಧಾವಿಸಿದ ನಿಕಟ ಸಂಪರ್ಕದ ಮಾತುಗಳಿಲ್ಲದೆ ಬಹುದಿನವಾಗಿದ್ದರೂ ತನಗೆ ತಿಳಿಯದವಳೆಂಬುದರಿಂದ ಹೊಸ ಬಲೆ ಬೀಸಿದ. "ನೀವು ಸ್ವತಂತ್ರರಾಗಿ ನಿಂತಿದ್ದೀರಿ. ನಿಮ್ಮಲ್ಲಿ ನನಗೆ ವಿಶ್ವಾಸ ಹೋಗಿಲ್ಲ ನಿಮಗಾಗಿ ನಾನು ಹಿಂದೆಗೆಯುವುದಕ್ಕೂ ಸಿದ್ಧ. ನೀವು ಇಂದೇ ನಮ್ಮ ಪಕ್ಷದ ಪ್ರತಿನಿಧಿಯಾಗಬೇಕಿಲ್ಲ, ಗೆದ್ದ ಬಳಿಕ ನಮ್ಮ ಪಂಗಡ ಸೇರಿದರೂ ಸರಿಯೆ ಅಂತು ನಮ್ಮಲ್ಲಿ ಕಾಳಗಬೇಡ. ನನ್ನ ರಾಜನೀತಿ ನಿಮಗೆ ಒಪ್ಪದಿರಬಹುದು ಆದರೆ ನಮ್ಮ ಪಕ್ಷದ ಧ್ಯೇಯ ಒಪ್ಪುತ್ತೀರಷ್ಟೆ ನಮ್ಮ ಪಕ್ಷದ ಅಧ್ಯಕ್ಷತನವನ್ನು ವಹಿಸಿಕೊಳ್ಳಿ" ಎಂದು ತಮ್ಮ ಜನಕ್ಕೆ ಅವಳಲ್ಲಿರುವ ವಿಶ್ವಾಸವನ್ನು ತಿಳಿಸಿದ.

ಆಕೆ ಸ್ಪಷ್ಟವಾಗಿ "ನಿಮ್ಮ ಪಕ್ಷದ ನೀತಿ ನನಗೆ ತಿಳಿದಿದ್ದರೆ, ನಾನು ಸೇರಲು ಅಂಜುವವಳಲ್ಲ ಈತನಕ ಅಂಥ ವಿಶ್ವಾಸವನ್ನು ಹುಟ್ಟಿಬರಲಿಲ್ಲ. ವಿಶ್ವಾಸ ಹುಟ್ಟಿಸಿದಂತಹ ಅರುಣಾಚಲಯ್ಯನವರ ಪಕ್ಷಕ್ಕೂ ಸೇರದೆ ನಾನು ಸ್ವತಂತ್ರಳಾಗಿ ನಿಂತಿರುವಾಗ ?" ಎಂದಳು.

ಸೇತುರಾಯ ಆ ದಿನದ ಮಟ್ಟಿಗೆ ನಿರಾಶನಾದರೂ ಪೂರ್ಣ ನಿರಾಶೆಗೊಳ್ಳಲಿಲ್ಲ ತನ್ನ ಪ್ರಚಾರವನ್ನು ಬಿರುಸಿನಿಂದ ನಡೆಸುತ್ತಿದ್ದರೂ, ನಡುನಡುವೆ ಯಾರನ್ನಾದರೂ ಅವಳ ಬಳಿಗೆ ಸಂಧಾನಕ್ಕೆ ಕಳುಹಿಸುತ್ತಲೇ ಇದ್ದ

ಕಾಂಚನಮಾಲೆ ತನ್ನ ಕ್ಷೇತ್ರವನ್ನು ಎರಡು ಮೂರು ಬಾರಿಸುತ್ತಿ ಬಂದಳು. ಅವಳಿಗೆ, ತನ್ನ ಚಿಂತೆಗಿಂತ ಹೆಚ್ಚಾಗಿ ವಿಕ್ರಮನಗರದ ಪ್ರಚಾರ, ಗದ್ದಲಗಳು ಚಿಂತೆಯನ್ನುಂಟುಮಾಡಿವೆ. ತಾನು ಸೋತರೂ ದೊಡ್ಡದಲ್ಲ ಅರುಣಾಚಲಯ್ಯನವರ ಸೋಲು ನಾಡಿಗೆ ಅಪಮಾನವೆಂದು ತಿಳಿದು ಅವರ ಸಲುವಾಗಿ ವಿಕ್ರಮನಗರದಲ್ಲಿ ದುಡಿಯತೊಡಗಿದಳು. ಅಲ್ಲಿನ ಜನಗಳ ಮುಂದೆ, "ಇಂದು ನಮ್ಮ ನಾಡಿನಲ್ಲಿ ಅತಿ

ಹೆಚ್ಚಿನ ತಿಳಿವಿರುವ ಊರೆಂದರೆ ವಿಕ್ರಮನಗರ. ಇದು ಸಂಸ್ಥಾನದ ಮಿದುಳು. ಅಂಥ ಊರಲ್ಲಿರುವ ನಿಮಗೆ ಅರುಣಾಚಲಯ್ಯನವರ ತೂಕ, ಯೋಗ್ಯತೆ ತಿಳಿಯದೇ? ಯಾರಾದರೂ ನಮ್ಮ ನಾಡಿನಲ್ಲಿ ಪ್ರಾಮಾಣಿಕವಾಗಿ ದುಡಿದು ಸರಕಾರ ನಡೆಯಿಸಿದ್ದರೆ ಅದು ಅವರೊಬ್ಬರೇ ನಾನು ಅವರ ಪಕ್ಷ ವಹಿಸಿ ಮಾತನಾಡುತ್ತಿಲ್ಲ ಅವರಂಥ ನೀತಿವಂತರು, ಪ್ರಾಮಾಣಿಕರು ನಿಮಗೆ ಬೇಡವೆಂದಿದ್ದರೆ ನಿಮ್ಮ ಮತವನ್ನು ಯಾರಿಗೂ ಕೊಡಿ, ಯಾರೂ ಗೆದ್ದು ಬರಲಿ" ಎನ್ನತೊಡಗಿದಳು ಅವರ ನೂರಾರು ನಿಸ್ವಾರ್ಥದ ಕೆಲಸಗಳನ್ನು ಬಹಿರಂಗವಾಗಿ ಹೊಗಳತೊಡಗಿದಳು ಅವರ ಸಲುವಾಗಿ ವರ್ಚಸ್ವೀ ಪುರವಣಿಗರಲ್ಲಿ ಮತಯಾಚನೆ ಮಾಡತೊಡಗಿದಳು

ಇದರಿಂದ ನೇತುರಾಯನಿಗೆ ಆಕೆ ಪರೋಕ್ಷ ಜನವಾದಿ ಎಂಬುದು ಖಾತ್ರಿಯಾಯಿತು. ಆತ ಭೀಮನೂರು ಕ್ಷೇತ್ರದಲ್ಲಿ ಕೆಲಸಕ್ಕಾಗಿ ವಲಸ ಬಂದ ಶ್ರಮಗಾರರನ್ನು ಒಲಿಸಿಕೊಂಡು ಅವಳನ್ನು ಉರುಳಿಸುವ ಸಂಕಲ್ಪ ಹೂಡಿದ ಸಾಹುಕಾರ ಶೀನಪ್ಪನವರು ತಾವು ಮೂರು ವರ್ಷ ಕೂಡಿಟ್ಟ ಹಣವನ್ನು ನಾಲ್ಕು ದಿನಗಳಲ್ಲಿ ಪುಡಿ ಮಾಡುವ ಸಂಕಲ್ಪ ತೊಟ್ಟರು. ಇತ್ತ ಜನವಾದಿ ಪಂಗಡದ ಅವರ ಮೇಲೆಯೂ, ಅದರಲ್ಲಿಯೂ ಅರುಣಾಚಲಯ್ಯ, ಕಾಂಚನಮಾಲೆಯರ ಮೇಲೆಯೂ ನೌಕರ ವರ್ಗ ಮತ್ತು ಶ್ರೀಮಂತ ವರ್ಗದ ನೇಡು ಬಲವಾಗಿತ್ತು ಆದರೆ ತಾತ್ಕಾಲಿಕ ಸರಕಾರದ ಹತೋಟಿ ಅರುಣಾಚಲಯ್ಯನವರೊಡನೆ ಇದ್ದುದರಿಂದ ಅಧಿಕಾರ ಯಂತ್ರದ ಬಲದಿಂದ ಜಾದು ನಡೆಯಿಸುವ ಕೆಲಸ ವಾಮನರಾಯನಿಗೆ ಸಾಧ್ಯವಾಗಲಿಲ್ಲ

ಚುನಾವಣೆಯ ದಿನ ಕಳೆಯಿತು. ಇನ್ನು ನಿರೀಕ್ಷೆಯ ದಿನ. ಎಲ್ಲರೂ ಗಲ್ಲಿಮಣೆಯಲ್ಲಿ ನಿಂತಂತೆ ಕಾತರ ತಾಳಿದ್ದಾರೆ ಶರೀರಕ್ಕೆ ವಿಶ್ರಾಂತಿ ಬಂದಿದೆ. ಆದರೆ ಕೊನೆಯ ಗಳಿಗೆಯಲ್ಲಿ 'ಉರುಳು ಬೀಳುತ್ತದೋ, ಕೊರಳು ತಪ್ಪುತ್ತದೋ' ಎಂಬ ಸಂದಿಗ್ಧ ಪ್ರತಿಯೊಬ್ಬರಲ್ಲಿಯೂ ಇದೆ.

ಫಲ–ವಾಮನರಾಯ ಎಷ್ಟೆಲ್ಲ ತಂತ್ರ ಹೂಡಿದರೂ ಸೋತು ಹೋದ. ಗೊಂಡಾರಣ್ಯದ ಜನರು ಪ್ರಾಮಾಣಿಕತೆಗೆ ವೈರಿಗಳಲ್ಲ

ಎಂಬುವನ್ನು ಅರುಣಾಚಲಯ್ಯನವರ ಆಯ್ಕೆಯಿಂದ ತೋರಿಸಿ ಕೊಟ್ಟರು. ಭೀಮನೂರಿನಲ್ಲಿ ಸೇತುರಾಯ, ಶೀನಪ್ಪನವರಿಬ್ಬರಿಗೂ ಸೋಲೇ. "ನಮಗೆ ಶ್ರೀಮಂತರೂ ಬೇಡ, ಶ್ರಮವಾದಿಗಳೂ ಬೇಡ" ಎಂಬ ಮಧ್ಯಮಾರ್ಗಕ್ಕ ಬೆಂಬಲ ಕೊಟ್ಟರು. ಯಾವುದೋ ಒಂದು ಅಪ್ರತ್ಯಕ್ಷ ಆಶೀರ್ವಾದ ತಮ್ಮನ್ನು ಉಳಿಸಿತೆಂದು ಗೆದ್ದ ಅರುಣಾಚಲಯ್ಯ, ಕಾಂಚನಮಾಲೆಯರು ತಿಳಿಯುವಂತಾಯಿತು.

ಈ ಬಾರಿಯೂ ಬಹುಮತದಿಂದ ಆಳುವುದಕ್ಕೆ ಯಾವ ಪಂಗಡಕ್ಕೂ ಶಕ್ತಿ ದೊರೆಯದೆ ಹೋಯಿತು. ಜನವಾದಿಗಳಿಗೆ ಇಪ್ಪತ್ತಾರು ಸ್ಥಾನಗಳು, ಸ್ವತಂತ್ರರಿಗೆ ಹತ್ತು, ಶ್ರಮವಾದಿಗಳಿಗೆ ಹದಿನಾಲ್ಕು, ದೇಶವಾದಿಗಳಿಗೆ ಮೊದಲಿಗಿಂತ ಕಡಿಮೆ ಈ ಬಾರಿಯೂ ಸಮ್ಮಿಶ್ರ ಸರಕಾರವೇ ನಾಡಿಗೆ ಗತಿ. ತಾವಾಡಿದ ಆಟದ ದೆಸೆಯಿಂದ ದೇಶವಾದಿಗಳಿಗೆ ಜನವಾದಿಗಳ ಸ್ನೇಹ ಕಷ್ಟ, ಶ್ರವವಾದಿಗಳ ಸ್ನೇಹ ಬೇಡವೆಂದು ಮೊದಲೇ ಅರುಣಾಚಲಯ್ಯ ಗೊತ್ತು ಮಾಡಿದವರು. ಹೀಗಾಗಿ ಸ್ವತಂತ್ರರ ಸ್ನೇಹಾಪೇಕ್ಷ ಅವರಿಗೆ ಕಾಂಚನಮಾಲೆ ಮೊದಲಿನಿಂದಲೂ ಅವಳಿಗೆ ಅನುಕೂಲಳು. ಆಕೆಯ ದಾರಿಯನ್ನು ಹಿಡಿದು ನಾಲ್ಕಾರು ಮಂದಿ ಸ್ವತಂತ್ರರು ಬೆಂಬಲ ಕೊಟ್ಟುದರಿಂದ ಅರುಣಾಚಲಯ್ಯನವರು ಇನ್ನೊಮ್ಮೆ ಸರಕಾರ ನಡೆಯಿಸುವ ಹೊಣೆ ಹೊತ್ತರು ಸೇತುರಾಯ ಸಖ್ಯಕ್ಕಾಗಿ ಮಾಡಿದ ಪ್ರಯತ್ನ ವಿಫಲವಾಯಿತು. ಅವನ ವೈರ ಜನವಾದಿಗಳ ಮೇಲೆ ಕೇಂದ್ರೀಕೃತವಾಯಿತು ಅವನೇ ಸೋತವನು. ಅವನ ಆನೆಯಗೋಪುರ ಕುಸಿದಂತೆ ದೇಶವಾದಿಗಳ ಆಶಾಮಂದಿರ ಸಂಪೂರ್ಣ ಕುಸಿಯುವ ಸ್ಥಿತಿ ಬಂದೊದಗಿತು.

ಕಾಂಚನಮಾಲೆಯ ಪಾಲಿಗೆ ಇಂದು ಹೊಸ ಆಸಕ್ತಿ, ಉತ್ಸಾಹಗಳೆರಡೂ ತುಂಬಿ ಬಂದಂತಿತ್ತು ಅರುಣಾಚಲಯ್ಯನವರು ಅವಳನ್ನು ಉದ್ಯಮ ಮಂತ್ರಿಯನ್ನಾಗಿ ಮಾಡಿ, ತಮ್ಮ ಗ್ರಾಮೋದ್ಧಾರದ ಕನಸಿನ ಹೊಣೆಯನ್ನು ಅವಳ ಮೇಲೆಯೇ ಹೊರಿಸಿದರು. ಅದರಿಂದ ಅವಳ ತೂಕ ಹೆಚ್ಚುವುದಕ್ಕೂ ಸಾಧ್ಯವಿತ್ತು, ಉದ್ಯಮಗಳಲ್ಲಿ ಶ್ರಮಗಾರರೊಡನೆ ಘರ್ಷಣೆ ಬಂದು ನಿಷ್ಠುರಕ್ಕೆ ಗುರಿಯಾಗುವುದೂ ಸಾಧ್ಯವಿತ್ತು.

ಆದರೆ ಐದು ವರ್ಷಗಳ ಅವಧಿಯಲ್ಲಿ ಸ್ಪಷ್ಟವಾದ ಧೋರಣೆ, ಕಾರ್ಯಕ್ರಮಗಳನ್ನಿರಿಸಿಕೊಂಡು ತಮ್ಮಲ್ಲಿ ಒಡಕು ತಂದುಕೊಳ್ಳದೆ ಮುಂದುವರಿದರೆ ಸಾಕಷ್ಟು ಕೆಲಸ ಮಾಡಬಹುದೆಂಬ ವಿಶ್ವಾಸ ಅವರೆಲ್ಲರಿಗಿತ್ತು.

ಆಕೆ ಅರುಣಾಚಲಯ್ಯನವರನ್ನು ಕೂಡಿ-ಮೊದಲ ಹೆಜ್ಜೆಯಾಗಿ ನಾಡಿನ ಮೂಲೆ ಮೂಲೆಗಳಲ್ಲಿ ದೊರೆಯುವ ಜೇಡಿಮಣ್ಣು, ಮರ, ಬಿದಿರು, ಬಳಪ ಮೊದಲಾದ ಹಲವಾರು ಕಚ್ಚಾ ವಸ್ತುಗಳ ಸಂಗ್ರಹ ವಿಮರ್ಶಿಸಿ, ಅವುಗಳಿಂದ ಎಂಥೆಲ್ಲ ಹೊಸ ಉದ್ಯಮಗಳು ಸಾಧ್ಯ ಎಂದು ಎಣಿಕೆ ಹಾಕ ತೊಡಗಿದಳು ಅದಕ್ಕಾಗಿ ತಜ್ಞರನ್ನು ಕರೆಯಿಸಿಕೊಂಡರು ಹಳ್ಳಿಯ ಜನ ಉದ್ಯೋಗವನ್ನರಸಿಕೊಂಡು ನಗರಗಳಿಗೆ ಹೋಗಿ ತುಂಬಬಾರದೆಂದೂ, ಕೃಷಿಕರ ಶಕ್ತಿ, ಸಂಖ್ಯೆಯು ಕುಗ್ಗಬಾರದೆಂದೂ ಯೋಚಿಸಿದರು ಹೊಸ ಕೈಗಾರಿಕೆಗಳಿಗೆ ವ್ಯಾಪಾರದ ಸ್ಪರ್ಧೆಯನ್ನು ತಡೆಯುವ ದಾರಿ ಯಾವುದು? ಎಂದು ಯೋಚಿಸಿದರು. ಶ್ರಮಗಾರರು ಕುಟುಂಬ ಜೀವನದಿಂದ ದೂರವಾಗಿ, ಸಂಸಾರ ಸುಖ ಕಳೆದುಕೊಂಡು, ಪೇಟೆಯ ಮುಷ್ಕರ ಚಳವಳಗಳಲ್ಲಿ ಮನಸ್ಸನ್ನು ರಮಿಸುವ ಬಗೆಯನ್ನು ತಪ್ಪಿಸಲು ಏನು ಮಾಡಬೇಕೆಂದು ಚಿಂತಿಸ ತೊಡಗಿದರು.

ನಾಡಿನ ವಿವಿಧ ಕಚ್ಚಾ ಉತ್ಪತ್ತಿಗಳನ್ನು ಸಂಗ್ರಹಿಸಿ, ಸಣ್ಣಪುಟ್ಟ ಯಂತ್ರ ಸಲಕರಣೆಯಿಂದ ಏನೇನು ಸಿದ್ಧ ಪದಾರ್ಥ ಮಾಡಬಹುದು ಎಂಬು ಸಂಶೋಧಿಸಲು ದೇಶವಿದೇಶದ ಸಂಶೋಧನ ಶಾಲೆಗಳಿಗೆ, ಯಂತ್ರಾಲಯಗಳಿಗೆ ಅವನ್ನು ಕಳುಹಿಸಿಕೊಟ್ಟಳು. ಜಪಾನ್, ಜರ್ಮನಿ ಮೊದಲಾದ ದೇಶಗಳಿಂದ ತ್ವರೆಯಲ್ಲಿ ತಜ್ಞರನ್ನು ಬರಮಾಡಿಕೊಂಡು, ಅವರೊಡನೆ ನಾಡನ್ನು ಸುತ್ತುವ, ಇದ್ದ ಉದ್ಯಮಗಳನ್ನು ಪರಿಶೀಲಿಸುವ, ಹೊಸ ಕನಸುಗಳನ್ನು ಬಳೆಯಿಸುವ ಕೆಲಸ ನಡೆಯಿಸಿದಳು. ಇರುವ ಹಲವಾರು ಪುಟ್ಟ ಕೈಗಾರಿಕೆಗಳನ್ನು ಸುಧಾರಿಸುವ ದಾರಿ ಯಾವುದು? ಸ್ಪರ್ಧೆ ತಡೆಯುವ ಬಗೆ ಏನು? ಉತ್ಪನ್ನ ಹೆಚ್ಚಿಸಿ, ಗುಣ ಹೆಚ್ಚಿಸಿ, ಬೆಲೆ ತಗ್ಗಿಸುವ ಮಾರ್ಗ ಯಾವುದು? ಎಂಬುದನ್ನೆಲ್ಲ ಅವರೊಡನೆ ಚರ್ಚಿಸಿದಳು ಇದಕ್ಕೆ ಬೇಕಾದ ಹಣ, ಶಕ್ತಿಯ ಪೂರೈಕೆ, ಯಂತ್ರ ಸಲಕರಣೆ, ಶಿಕ್ಷಣ ಇವುಗಳ ಹಂಚಿಕೆಯಲ್ಲಿ

ಲೀನಳಾದಳು ಈ ನಡುವೆ ಅರುಣಾಚಲಯ್ಯನವರ ಮನ ಒಲಿಸುತ್ತ "ಭೂಸುಧಾರಣೆಯಾಗಬೇಕು, ಶ್ರೀಮಂತರ ಶಕ್ತಿಯನ್ನು ಕುಗ್ಗಿಸ ಬೇಕು" ಎನ್ನುತ್ತಲೇ ಇದ್ದಳು. ಇದಕ್ಕೆ ಅವರು ವಿಮುಖರಲ್ಲವಾದರೂ ಬರಿಯ ಶಾಸನದ ಬಲದಮೇಲೆ ವಿಶ್ವಾಸವುಳ್ಳವರಾಗಿರಲಿಲ್ಲ

ಇತ್ತ ಅರುಣಾಚಲಯ್ಯನವರು ಸಂಸ್ಥಾನದ ಖಾಸಗಿ ಮತ್ತು ಸರಕಾರದ ಅಂಕೆ, ಸಂಖ್ಯೆ ತರಿಸಿಕೊಂಡರು 'ಖಾಸಗಿ ಒಡೆತನದಲ್ಲಿ ಬಂಜರು ಬಿಟ್ಟ ಭೂಮಿಯನ್ನು ಇನ್ನೆರಡು ವರ್ಷಗಳಲ್ಲಿ ಹೊಲ, ಕಾಡು, ತೋಟ ಇಂಥ ಯಾವುದಾದರೊಂದು ಕೃಷಿಗೆ ತಾರದೆ ಹೋದಲ್ಲಿ ಸರಕಾರ ವಶಪಡಿಸಿಕೊಳ್ಳುತ್ತದೆ' ಎಂಬ ಭೀತಿಯನ್ನು ಹುಟ್ಟಿಸಿದರು ಸರಕಾರಿದ ಪಡುಭೂಮಿಯನ್ನು ನಾಲ್ಕೈದು ಎಕರೆಗಳ ತುಂಡು ಗಳನ್ನಾಗಿ ಮಾಡಿ ಕೃಷಿ ಮಾಡಲು ಬಯಸುವ, ಹೊಸಬರಿಗೆ ಹಂಚುವ ನಿರ್ಣಯ ಮಾಡಿದರು ಅಂಥ ಭೂಮಿಗಳಿರುವುದು ಮಲೆನಾಡಿನಲ್ಲಿ ಆದರೆ ಬಯಲು ಸೀಮೆಯ ಭಾಗಗಳು-ಗಿಡಮರ ಗಳಿಲ್ಲದೆ ಕೊರದು ಹೋಗುತ್ತಿದ್ದುವು, ಕೃಷಿ ದಿನೇದಿನೇ ಹಾಳು ಬೀಳುತ್ತಿತ್ತು ಈ ನೋಟ ಅವರನ್ನು ಬಹು ವೇಳೆಯಿಂದ ಕೊರೆಯು ತ್ತಿತ್ತು. ಅದರಿಂದಾಗಿ ವನಮಹೋತ್ಸವದ ಕೂಗಿಗೂ ಅವರ ಕಿವಿ ನಿಮಿರಿತ್ತು ಆದರೆ ಸಮನಾದ ವ್ಯವಸ್ಥೆಯಿಲ್ಲದೆ, ಗಿಡಗಳನ್ನು ನಟ್ಟು ಕೊಲ್ಲುವ ಕೆಲಸ ತೃಪ್ತಿ ಕೊಟ್ಟಿರಲಿಲ್ಲ ಗೊಂಡಾರಣ್ಯದಲ್ಲೂ ಭಾರತದ ಇವರ ಪ್ರಾಂತಗಳಂತೆ ಮಳೆ, ವರ್ಷ ವರ್ಷ ಕಡಿಮೆಯಾಗುತ್ತಿರುವುದು ಅವರ ಅನುಭವವೂ ಆಗಿತ್ತು ಅದಕ್ಕೆ ಸಸ್ಯಾಭಾವವೇ ಕಾರಣ ವೆಂದರಿತ ಅವರು, ಸಂಸ್ಥಾನದಲ್ಲಿ ಕಾಡುಗಳಿಲ್ಲದಲ್ಲಿ ಕಾಡನ್ನು ಬೆಳೆಯಿಸುವ ವಿಸ್ತಾರ ಯೋಜನೆ ಹಾಕಿಕೊಂಡರು ವ್ಯಕ್ತಿ ಅಲ್ಲೊಂದು ಇಲ್ಲೊಂದು ಗಿಡ ನೆಟ್ಟು, ಆಡಿಗೆ ಕೊಡುವ ಬದಲು, ಸಾಮುದಾಯಿಕ ವನನಿರ್ಮಾಣದ ಹಂಚಿಕೆ ತೆರೆದರು ಗ್ರಾಮಗಳ ಸಾಗು ಆಗುವ ಭೂಮಿ ವಿಸ್ತಾರವನ್ನೆಣಿಸಿ, ಅದಕ್ಕೆ ಸಮನಾದ ಪ್ರಮಾಣದಲ್ಲಿ 'ಗ್ರಾಮವನ' ನಿರ್ಮಾಣದ ಹಟತೊಟ್ಟರು. ಇದರ ಫಲ ತಿಳಿಯುವುದಕ್ಕೆ ಬಹು ವರ್ಷ ಕಾಯಬೇಕೆಂಬುದು ಗೊತ್ತು ನಟ್ಟ ಕಾಡು, ದನಕರುಗಳಿಗೆ ಆಹಾರವಾಗದಂತೆ ನೋಡಿಕೊಳ್ಳಬೇಕೆಂಬುದೂ ಗೊತ್ತು. ಅಲ್ಲಿಯ

ತನಕ ಪ್ರಾಂತ್ಯದ ಅರಣ್ಯ ಸಂಪತ್ತು ವ್ಯಾಪಾರಮುಖವಾಗಿತ್ತು. ಅದನ್ನು ತಡೆದು ಪ್ರಾಂತ್ಯದ ಹೊರಗೆ ಹೋಗುವುದನ್ನೂ ನಿಲ್ಲಿಸಿದರು.

ಸಾಮಾನ್ಯವಾಗಿ ಅವರ ಹತೋಟಿಗೂ ಸಿಲುಕದೆ ಸ್ವಲಾಭ ಚಿಂತನೆಯಲ್ಲಿಯೇ ಮುಳುಗಿದ ಒಂದು ವರ್ಗ ಅವರಿಗೆ ಬಹು ದೊಡ್ಡ ಸಮಸ್ಯೆಯಾಗಿತ್ತು–ಅದು ಬಂಡವಳಗಾರರದು, ವ್ಯಾಪಾರಿಗಳದು. ಮೊದಲಿನ ವರ್ಗದವರು ಹಿಂದೆ ಹಣ ಕಾಸು ಮಾಡಿದ್ದರೂ, ಹೊರಗಿನ ಉತ್ಪನ್ನಗಳು ಬಂದು ಸ್ಪರ್ಧೆ ತೊಡಗಿದ ಈ ದಿನಗಳಲ್ಲಿ, ಹೊಸ ಉದ್ಯಮಗಳನ್ನು ತೆರೆಯುವುದಕ್ಕೆ ಅಂಜಿ ಕುಳಿತಿದ್ದಾರೆ ಯುದ್ಧಕಾಲದ ಅತಿ ಲಾಭಕ್ಕೆ ನುರಿತ ವ್ಯಾಪಾರಿವರ್ಗ ಈಗ ಅತೃಪ್ತಿ ತಾಳಿದೆ, ಅದು ಸಟ್ಟಾದಲ್ಲಿಯೇ ತನ್ನ ಭವಿಷ್ಯವನ್ನು ಹುಡುಕುತ್ತಿದೆ ಮಧ್ಯವರ್ತಿ ಜೀವನದಲ್ಲಿಯೇ ಅವರಿಗೆ ತೃಪ್ತಿ, ಉತ್ಪನ್ನ ಹೆಚ್ಚಬೇಕೆಂಬ ಲವಲವಿಕೆ ಯಿಲ್ಲ ಇದ್ದುದನ್ನೇ ಅಡಗಿಸಿಟ್ಟು ಹೆಚ್ಚಿನ ಬೆಲೆಗೆ ಮಾರುವ ಚಟ. ಎಲ್ಲ ಬಗೆಯ ತರಿಗೆಗೂ ಇವರು ವಿರೋಧ ದೇಶದಲ್ಲಿ ಹಲವಾರು ವಿಧದ ಉದ್ಯೋಗಗಳು ಬೆಳೆಯದೆ ಜನರ ಅಭಿವೃದ್ಧಿಯಾಗದು. ಎಲ್ಲ ವನ್ನೂ ಸರಕಾರ ತಾನೇ ಮಾಡುವೆನೆಂದು ಕುಳಿತರೂ ಅದು ಅಸಾಧ್ಯ. ಈಗಾಗಲೇ ಅದು ವಿದ್ಯುತ್, ಗನಿ, ಮೊದಲಾದುವುಗಳನ್ನು ಸಾಕಷ್ಟು ಬೆಳೆಯಿಸಿ ತನ್ನದಾಗಿ ಮಾಡಿಕೊಂಡಿದೆ ಈಗ ಹೊಸತಾಗಿ ಖನಿಜ ವ್ಯವಸಾಯದ ವಿಸ್ತರಣ ತೊಡಗಿದ್ದಾರೆ ಎಲ್ಯುಮಿನಿಯಂ, ಮಿಶ್ರ ಲೋಹಗಳ ಉತ್ಪನ್ನ ತೊಡಗಿದ್ದಾರೆ 'ನಾವು ಬಂಡವಳ ಹಾಕು ತ್ತೇವೆ, ನೀವೂ ಕೂಡಿ' ಎಂದು ಶ್ರೀಮಂತರನ್ನು ಪ್ರಾರ್ಥಿಸಿದ್ದಾ ಯಿತು 'ಹೊರಗಿನ ಬಂಡವಳ ತರಿಸಿಕೊಳ್ಳಬೇಕಾಗುತ್ತದೆ' ಎಂಬ ಅಂಜಿಕೆ ಹುಟ್ಟಿಸಿದ ಮೇಲೆಯೇ ನಾಕಷ್ಟು ಹಣ ಕೂಡಿ ಬಂದಿತು. ಅದರಿಂದ ಸಿಮೆಂಟು, ಸಕ್ಕರೆಯಂತಹ ಹೊಸ ಉದ್ಯಮಗಳ ಪಾಯ ಹಾಕುವುದು ಸಾಧ್ಯವಾಯಿತು

ಇನ್ನೊಂದು ಕಡೆ ನೌಕರವರ್ಗದ ಚುರುಕತನ ಹೆಚ್ಚಿಸಿ, ದಕ್ಷ ರಾದವರಿಗೆ ಪ್ರೋತ್ಸಾಹ ಕೊಟ್ಟುದರಿಂದ ವಿಶೇಷ ಫಲಕಾರಿಯಾ ಯಿತು. ಅದರಿಂದ ಅನಾವಶ್ಯಕವಾದ ಎಷ್ಟೋ ಹುದ್ದೆಗಳನ್ನು ಕಡಿಮೆ ಮಾಡುವುದು ಸಾಧ್ಯವಾಯಿತು. ಖಾಸಗಿ ವ್ಯಕ್ತಿಗಳು ಸರಕಾರಕ್ಕೆ

ಮಾಡುತ್ತಿದ್ದ ಅರ್ಜಿ ಮೊದಲಾದ ಪತ್ರವ್ಯವಹಾರಗಳ ನಿವೃತ್ತಿ ಒಂದು ವರ್ಷದೊಳಗೆ ಮುಗಿಸಬೇಕೆಂಬ ಕಡ್ಡಾಯ ಹೊರಿಸಿದ್ದರಿಂದ, ಜನಕ್ಕೆ ಎಷ್ಟೋ ಹೆಚ್ಚಿನ ಅನುಕೂಲತೆಯಾಯಿತು ಅಧಿಕಾರಿಗಳ ಹಿಂದೆ ಕುಣಿಕುಣಿದು ಕೆಲಸ ಮಾಡಿಸಿಕೊಳ್ಳುವ ವಕ್ರಮಾರ್ಗ, ಅಸಂದಿಗ್ಧ ಪರಿಸ್ಥಿತಿ ತಪ್ಪಿದೆ 'ಹೀಗೇ ಇನ್ನೂ ನಾಲ್ಕು, ಹತ್ತು ವರ್ಷಕಾಲ ನಡೆದರೆ ನಮ್ಮ ದೇಶ ಒಂದು ಸ್ಥಿತಿಗೆ ಮುಟ್ಟೀತು' ಎಂಬ ವಿಶ್ವಾಸ ಸರಕಾರದೊಡನೆ ಸಂಬಂಧ ನಡೆಯಿಸುತ್ತಿದ್ದ ಜನಗಳಿಗುಂಟಾಗಿದೆ

* * * *

ಕಾಂಚನಮಾಲೆಯು ಕೈಗಾರಿಕೆಯ ಕನಸು ಯೋಚಿಸಿದಷ್ಟೂ, ಆಳದ ಪ್ರಶ್ನೆಯಾಗಿ ಕಾಣಿಸಿತು ಅದರ ಪೂರ್ವ ಪೀಠಿಕೆಗೆ ಒಂದು ವರ್ಷಕಾಲವೇ ಸರಿಯಿತು ಆಕೆ ತನ್ನ ಪ್ರಯೋಗಕ್ಕೆ ಮೂರು ಕ್ಷೇತ್ರಗಳನ್ನು ಆರಿಸಿಕೊಂಡಳು—ಮಲೆನಾಡು ಪ್ರಾಂತ ಒಂದು, ಭೀಮನೂರಿನ ನಡುವಣ ಸೀಮೆಯೊಂದು, ತೀರ ಮೂಡಣದ ಸಸ್ಯಶೂನ್ಯ ವಿಕ್ರಮ ನಗರದ ಪ್ರಾಂತ ಒಂದು ಈ ಮೂರು ಪ್ರಾಂತಗಳ ಉತ್ಪನ್ನವನ್ನು ಹೊಂದಿಕೊಂಡು ಅಲ್ಲಿನ ಹೊಸ ಕೈಗಾರಿಕೆಗಳಿಗೆ ರೂಪ ಕೊಟ್ಟಳು. ಮಲೆನಾಡಿನಲ್ಲಿ ಮರ, ಬಿದಿರು, ಬೆತ್ತಗಳ ವಿವಿಧ ವಸ್ತುಗಳ ತಯಾರಿ, ನಡುವಣ ಸೀಮೆಯಲ್ಲಿ ಆವೆ ಮಣ್ಣು, ಜೇಡಿಮಣ್ಣುಗಳ ಉದ್ಯಮ, ತೀರ ಮೂಡಣದಲ್ಲಿ ಹತ್ತಿಯ ಉದ್ಯಮ ಈ ಉದ್ಯಮಗಳನ್ನು ಕೃಷಿಯ ವೇಳೆ ಬಿಟ್ಟು, ಉಳಿದ ಎಂಟು ತಿಂಗಳ ಕಾಲ ನಡೆಯಿಸುವ ಹಂಚಿಕೆ ಹಾಕಿದಳು ಎಲ್ಲವೂ ಸಣ್ಣಪುಟ್ಟ ಗೃಹೋದ್ಯಮಗಳು, ಅಥವಾ ರೈತ ಸಂಜೆಯೊಳಗೆ ಮನೆ ಸೇರುವ, ಇಲ್ಲವೆ ಮನೆಯೊಳಗೆ ಕುಳಿತು ಮಾಡುವ ಸಮೀಪದ ಉದ್ಯಮಗಳು ಒಂದೊಂದು ಕ್ಷೇತ್ರದಲ್ಲಿ ನಾಲ್ಕೈದು ಸಾವಿರ ಕೆಲಸಗಾರರ ಪರಿಮಿತಿಯನ್ನು ಎಣಿಸಿಕೊಂಡು ಪ್ರಯೋಗ ನಡೆಯಿಸಿ, ಅದು ಆಶಾದಾಯಕವಾಗಿ ಕಂಡಲ್ಲಿ ವಿಸ್ತರಿಸುವ ಹಂಚಿಕೆ ಮಾಡಿದಳು ಇಲ್ಲಿನ ಶಕ್ತಿಯ ಪೂರೈಕೆ, ಯಂತ್ರ ಸಲಕರಣೆಗಳ ಪೂರೈಕೆ ಆರಂಭದಲ್ಲಿ ಸರಕಾರವೇ ಒದಗಿಸಿ, ಅನಂತರ ಕೆಲಸಗಾರರು ತಾವೇ ಅವನ್ನು ಕೊಂಡು ನಡೆಯಿಸುವುದಕ್ಕೂ ಏರ್ಪಾಟು ಮಾಡಿದರು. ಈ ಕೇಂದ್ರಗಳಲ್ಲಿ ಉದ್ಯಮ ನಡೆಯಿಸಲು

ಬೇಕಾದ ಶಿಕ್ಷಣ ಕೊಡಲು ಮೂರು ಶಿಕ್ಷಣಾಲಯಗಳನ್ನೂ, ತಕ್ಕ ತಜ್ಞರನ್ನೂ ಇರಿಸಿದ್ದಲ್ಲದೆ, ಒಡವೆಗಳನ್ನು ಕೊಳ್ಳುವ, ಕೊಂಡು ಮಾರುವ ವ್ಯವಸ್ಥೆ ಮಾಡಿದರು ಯಂತ್ರಬಲದಿಂದ ಉತ್ಪನ್ನ ಹೆಚ್ಚಬೇಕು, ಬೆಲೆ ತಗ್ಗಬೇಕು. ಉತ್ಪನ್ನ ಮಾಡುವ ವಸ್ತುಗಳು ನಿತ್ಯೋಪಯೋಗಿಯೂ, ಆಕರ್ಷಕವೂ, ವಿವಿಧ ರೂಪದವೂ ಆಗಬೇಕು, ಗುಡಿಕೈಗಾರಿಕೆಯೆಂಬುದು ಕೇವಲ ದೇಶಭಕ್ತಿಯಿಂದ ಬದುಕುವ ಉದ್ಯಮವಾಗಬಾರದು ಗುಣದಲ್ಲೂ, ಬೆಲೆಯಲ್ಲೂ, ಹೊರಗಿನ ವಸ್ತುಗಳೊಡನೆ ಪೈಪೋಟಿಗೆ ನಿಲ್ಲುವ ಶಕ್ತಿ ಬರಬೇಕು ಈ ಎಲ್ಲ ಆದರ್ಶಗಳೂ, ಆಶೆಗಳೂ ಅವರ ಹಳ್ಳಿಗಳ ಜೀವನಕ್ಕೆ ಹೊಸತು ಅವುಗಳನ್ನು ವ್ಯವಸ್ಥೆಗೊಳಿಸುವ ಕ್ರಮವೂ ಸುಲಭವಾಗಿರಲಿಲ್ಲ ಆದರೂ ಕಾಂಚನಮಾಲ ಉತ್ಸಾಹದಿಂದ, ವಿಚಕ್ಷಣತೆಯಿಂದ ಅವುಗಳನ್ನು ನಡೆಯಿಸಿಕೊಂಡು ಹೋಗಲು ಶಕ್ತಳಾದಳು

ಸ್ವಾತಂತ್ರ್ಯೋದಯದ ಕಾಲ, ಗೆರಿಲ್ಲಾ ಕದನ ಭೂಮಿಯಾಗಿದ್ದ ಮಾನಹಳ್ಳಿ ಪ್ರಾಂತ ಅಂಥ ಒಂದು ಪ್ರಯೋಗ ಕ್ಷೇತ್ರವಾಯಿತು. ಅದು ಅರಣ್ಯದ ನಡುಗು ಅಲ್ಲಿ ಮರ, ಬಿದಿರು, ಓಟೆಗಳನ್ನು ಬಳಸಿ ಮಾಡುವ ಹಲವಾರು ಉದ್ಯಮಗಳಿಗೆ ಅದು ಕೇಂದ್ರವಾಯಿತು ಮರದಿಂದ ಗೃಹೋಪಯೋಗಿ ವಸ್ತುಗಳಲ್ಲದೆ ಬೆಂಕಿ ಪೆಟ್ಟಿಗೆಯ ಕೈಗಾರಿಕೆ ತೊಡಗಿದರು ಬಿದರು, ಓಟೆಗಳಿಂದ ಹಲವಾರು ಬಗೆಯ ಅಲಂಕಾರದ, ಉಪಯೋಗದ ವಸ್ತುಗಳನ್ನು ನಿರ್ಮಿಸುವುದಕ್ಕೆ ಒಬ್ಬ ಜಪಾನೀ ತಜ್ಞನೆರವಾದ ಅವಕ್ಕೆ ಬೇಕಾದ ಚಿಕ್ಕ ಪುಟ್ಟ ಯಂತ್ರ ತರಿಸಿಕೊಂಡರು ಸಾಮಾನ್ಯ ಕೆಲಸಗಾರರಲ್ಲಿ, ಚಿತ್ರ, ಅಲಂಕಾರ, ಸೂಕ್ಷ್ಮ ಕಸುಬಿನ ಬೋಧನೆ ಕೊಟ್ಟರು ಕೈಗಾರಿಕಗಳಿಗೆ ಯಂತ್ರೋಪಕರಣಗಳ ಬೆಂಬಲ ಬೇಕಾದಂತ ಕರಕೌಶಲ್ಯ, ಸೌಂದರ್ಯ ಪ್ರಜ್ಞೆಗಳೂ ಅವಶ್ಯವೆಂದು ಬೋಧಿಸಿದರು

ಭೀಮಸೂರಿನ ಬಳಿಯಲ್ಲಿ ವಿದ್ಯುತ್ ತೀರ ಸಮೀಪಕ್ಕದೆ, ಜೇಡಿಮಣ್ಣು ಧಾರಾಳವಾಗಿದೆ ಎಂಬುದರಿಂದ ವಿಸ್ತೃತ ಕುಲಾಲ ವೃತ್ತಿಗೆ ಪ್ರೋತ್ಸಾಹ ಕೊಟ್ಟರು ನಾಜೂಕಿನ ಪಿಂಗಾಣಿ ಪಾತ್ರೆಗಳನ್ನು ಮಾಡುವುದಕ್ಕೂ, ಅಲಂಕರಿಸುವುದಕ್ಕೂ ಶಿಕ್ಷಣ ಕೊಟ್ಟು ಗ್ರಾಮ

ಕ್ಕೊಂದರಂತೆ ಆವುಗೆ ಮನೆ ಮಾಡಿಕೊಟ್ಟು, ಸಾಮೂಹಿಕ ಕೈಗಾರಿಕೆ ಏರ್ಪಡಿಸಿದರು ಇಲ್ಲಿಯೂ ತಜ್ಞರ ಬೆಂಬಲ ಅಲಂಕಾರ ಶಾಸ್ತ್ರಗಳನ್ನು ಅನಿವಾರ್ಯವಾಗಿತ್ತು ಮೊದಲ ಹೆಜ್ಜೆಗಳು ಕುಂಟುತ್ತ ನಡೆದಂತೆ ಕಂಡರೂ ಈ ಉದ್ಯಮಗಳು ಆಕರ್ಷಕವೂ, ಲಾಭದಾಯಕವೂ ಆಗುವ ಭರವಸೆ ತೋರಿತು

ಮೂರನೆಯ ಕೇಂದ್ರ ಹತ್ತಿ ಕೈಗಾರಿಕೆಯದು ಇದನ್ನು ನಿಷ್ಕೇಂದ್ರೀಕೃತ ಉದ್ಯಮವನ್ನಾಗಿಮಾಡುವ ಪ್ರಯತ್ನ ನಡೆಯಿಸಿದರು ನೆಯ್ಗೆ ಗೃಹಕೈಗಾರಿಕೆಯಾಗಿ ಯಾಂತ್ರೀಕರಣಗೊಂಡಿತು, ನೂಲುವ ಕೈಗಾರಿಕೆಯೂ ಯಾಂತ್ರೀಕರಣಗೊಂಡ ಗೃಹೋದ್ಯಮವಾಯಿತು ಹತ್ತಿಯನ್ನು ಹಿಂಜಿ ಒದಗಿಸುವುದಕ್ಕೆ, ನೂಲನ್ನು ರಂಗಾಯಿಸುವುದಕ್ಕೆ ಅಲ್ಲಲ್ಲಿ ಕೇಂದ್ರ ಶಾಲೆಗಳನ್ನು ಸಹಾಯಕವಾಗಿ ತೆರೆದರು ಇವೆಲ್ಲ ಹೆಜ್ಜೆ ಹೆಜ್ಜೆಗೂ ಹೊಸ ಹೊಸ ಸಮಸ್ಯೆಗಳನ್ನು ತಂದೊಡ್ಡುವ ಕೆಲಸಗಳಾಗಿದ್ದರೂ, ಆಕೆ ತಾಳ್ಮೆವಹಿಸಿ ದುಡಿದಳು ಇದರಿಂದ ಗ್ರಾಮಗಳ ನೂರಾರು ತರುಣರು ಹೊಸ ಉದ್ಯಮ ಕಲಿಯುವುದಕ್ಕೆ ಮುಂದಾದರು. ನೆರೆ ಕರೆಯ ಜನ ಆಸಕ್ತಿಗೊಂಡು ತಮ್ಮಲ್ಲೂ ಅಂತಹ ಕ್ಷೇತ್ರ ತೆರೆಯುವಂತೆ ಬೇಡಿದರು ಮಾಡಿದ ಉತ್ಪನ್ನಗಳನ್ನು ಮಾರುವ ಕೆಲಸ ಕಷ್ಟವಾಗಿ ಕಾಣಿಸಲಿಲ್ಲ ಬೆಲೆ ಆಕರ್ಷಕವಾಗಿದ್ದುದರಿಂದ ವ್ಯಾಪಾರಿಗಳು ತಾವಾಗಿ ಬರತೊಡಗಿದರು ಆದರೆ ಈ ಸಾಹಸವನ್ನು ಆದರದಿಂದ ನೋಡುವ ಬದಲು ಶ್ರಮವಾದಿ ಪಂಗಡದವರು ಅದರ ಮೇಲೆ ಅವ್ಯಾಹತವಾಗಿ ಟೀಕೆಯ ಸುರಿಮಳೆ ಕರೆದರು.

"ಸರಕಾರ ರಾಷ್ಟ್ರ ಸ್ವಾಮ್ಯದಿಂದ ದೊಡ್ಡ ಉದ್ಯಮ ತೊಡಗುವ ಬದಲು, ನೆಪದಲ್ಲಿ ಕಣ್ಣು ಮುಚ್ಚಾಲೆಯಾಡುತ್ತಿದೆ"

"ರಾವಣನ ಹೊಟ್ಟೆಗೆ ಕಾಸಿನ ಮಜ್ಜಿಗೆಯೇ?" ಎಂದು ಕೇಳಿದರು

ನಡೆಯುತ್ತಿದ್ದುದೇನೆಂದು ಕಣ್ಣಾರೆ ನೋಡುವ ತಾಳ್ಮೆ ಅವರಿಗಿರಲಿಲ್ಲ. ಈ ಉದ್ಯಮಗಳನ್ನು ನಡೆಯಿಸಿಕೊಂಡು ಹೋಗುತ್ತಿದ್ದ ದಾರಿಯೇ ಅವರಿಗೆ ತೃಪ್ತಿಕೊಡುವಂತಿರಲಿಲ್ಲ ಏಕೆಂದರೆ ಇವೆಲ್ಲ 'ಒಡೆಯ, ಕೂಲಿ' ಎಂದು ವರ್ಗ ಕಲಹಕ್ಕೆ ಎಡೆಕೊಡದ ದಾರಿ

ಗಳಾಗಿದ್ದುವು ಕೂಲಿಯೇ ಪುಟ್ಟ ಯಜಮಾನನಾಗಿದ್ದ. ಆತ ಗ್ರಾಮದ ಕೈಗಾರಿಕೆಯ ಮನೆಗೆ ಬಂದು ದುಡಿದರೂ ಸರಿಯೆ, ಸ್ವಂತ ಮನೆಯಲ್ಲಿ ಕುಳಿತು ಉತ್ಪನ್ನ ಮಾಡಿದರೂ ಸರಿಯೆ–ಉತ್ಪನ್ನ ಮುಖ್ಯ. ಅವರಾಗಿ ಕಚ್ಚಾ ವಸ್ತುಗಳನ್ನು ಕೊಂಡು ಮಾರಬಹುದು, ಗುತ್ತಿಗೆಯಿಂದ ಕೆಲಸಮಾಡಿ ಕೊಡಬಹುದು ಉತ್ಪನ್ನಕ್ಕೆ ತಕ್ಕ ಪ್ರತಿಫಲ ಪಡೆಯಬಹುದು. ಯಂತ್ರಗಳ ಉಪಯೋಗಕ್ಕ ಬಾಡಿಗೆ ಕೊಟ್ಟರೂ ಸರಿಯೇ ಅದನ್ನು ತಾನೇ ಕೊಂಡು ನಡೆಯಿಸಿದರೂ ಸರಿಯೆ ಮಾಡಿದ ವಸ್ತುಗಳನ್ನು ತಾವೇ ಮಾರುವುದಕ್ಕೆ ಸಹಕಾರದ ವ್ಯಾಪಾರ ಕೇಂದ್ರಗಳು ಸಹಾಯಕವಾದುವು ಹೀಗೆಯೇ ಉದ್ಯಮದ ಬಡತನವನ್ನೇ ಅವನಿಗೆ ಹೂರಿಸಿದುದರಿಂದ, ವ್ಯಾಪಾರದ ನಿಯಮಕ್ಕೆ ಸಮನಾಗಿ ಉತ್ಪನ್ನದ ಬೆಲೆ, ಲಾಭಾಂಶ ನಿರ್ಣಯವಾಗಬೇಕು "ಕೆಲಸ ಮಾಡಲಿ, ಮಾಡದೆ ಇರಲಿ ತನ್ನುನ್ನು ಸುಲಿಯುವ ಒಬ್ಬ ಧನಿಯಿದ್ದಾನೆ" ಎಂಬ ದ್ವೇಷಕ್ಕೆ ಎಡೆಯಿರಲಿಲ್ಲ. ಇಂಥ ಕ್ಷೇತ್ರ ಕ್ರಮವಾದಿಗಳ ಚಳವಳಕ್ಕೆ ನಿರಾಕರ್ಷವಾಗಿತ್ತು.

ಈ ಉದ್ಯಮವನ್ನು ತೊಡಗಿದ ಎರಡು ವರ್ಷಗಳಲ್ಲಿ, ಆಕೆ ವಿಕ್ರಮನಗರದಲ್ಲಿ ಇಂಥ ವಿವಿಧ ವಸ್ತುಗಳ ಪ್ರದರ್ಶನವನ್ನು ನಡೆಯಿಸಿದಳು, ಇತರ ಗುಡಿ ಕೈಗಾರಿಕೆಗಳ ಪ್ರದರ್ಶನದಂತೆ ಅದು ಇದ್ದಿರಲಿಲ್ಲ. ಆಕರ್ಷಣೆ, ವೈವಿಧ್ಯ, ಬೆಲೆ–ಈ ಎಲ್ಲ ದೃಷ್ಟಿಗಳಿಂದಲೂ ವ್ಯಾಪಾರಿಗಳನ್ನೂ, ಗಿರಾಕಿಗಳನ್ನೂ ಒಲಿಸುವಂತಿದ್ದುವು ಪ್ರದರ್ಶನಕ್ಕೆ ಸೇತುರಾಯನೂ ಬಂದಿದ್ದ ಆತ ಅಲ್ಲಿನ ವಸ್ತುಗಳ ಬೆಲೆಯನ್ನು ಕಂಡು, ಕಾಂಚನಮಾಲೆಯೊಡನೆ "ಇಷ್ಟೆಲ್ಲ ಶ್ರಮದಿಂದ ಮಾಡಿದ ಈ ವಸ್ತುಗಳ ಬೆಲೆ ಇಷ್ಟು ಕಡಮೆಯೇ? ಇದರಿಂದ ದುಡಿದವನಿಗೆ ದಿನಕ್ಕೆ ಎರಡಾಣೆ ಸಿಕ್ಕೀತೇ? ಅಥವಾ ನಷ್ಟವನ್ನು ಕೈಯಿಂದ ಹಾಕಿಕೊಂಡು ಸರಕಾರ ಅಗ್ಗದಲ್ಲಿ ಮಾರುತ್ತಿದೆಯೇ? ಆಗಲೂ ತೆರಿಗೆದಾರ ಅದಕ್ಕೆ ದಂಡ ತೆರಬೇಕು" ಎಂದ

ಇಂಥ ಸಂಶಯಗಳನ್ನು ಹೊತ್ತು, ಒಳಗಿನ ಹುಳುಕುಗಳನ್ನೆಲ್ಲಾ ಹೊರ ತೆಗೆಯುವ ಉದ್ದೇಶದಿಂದ ಆತ ಈ ಕೇಂದ್ರಗಳನ್ನು ಸಂದರ್ಶಿಸಲು ಹೊರಟ. ಕೇವಲ ದೇಶಭಕ್ತಿಯ ಮಂತ್ರದಿಂದ ಪೋಷಿತವಾದ

ಖಾದಿ ಉದ್ಯಮವಂತೆ ಇವು ಇರಬಹುದು ಎಂಬ ಊಹೆಯಿಂದ ಹೋಗಿ ನೋಡಿದ. ಆದರೆ ಹೋಗಿ ನೋಡಿದಾಗ ಕಾಣಿಸಿದ ಚಿತ್ರ ಬೇರೆ. ಹಳ್ಳಿಯ ಮನೆಗಳಿಗೆ ವಿದ್ಯುತ್ತನ್ನು, ಯಂತ್ರ ಸಲಕರಣೆಗಳನ್ನು ಒದಗಿಸಿ ಕೊಟ್ಟಿದ್ದರು. ಊರ ಮನೆಗಳು ದೂರವಾಗಿರುವಲ್ಲಿ ಸಾಮೂಹಿಕ ಉದ್ಯೋಗಶಾಲೆ ಹಾಕಿದ್ದರು. ಸುಲಭ ಬೆಲೆಯ ಕಟ್ಟಡಗಳು; ಅನೇಕ ಬಗೆಯ ಸರಳ ಯಂತ್ರೋಪಕರಣಗಳು, ಒಂದೊಂದೇ ಭಾಗವನ್ನು ಮಾಡುವುದರಲ್ಲಿ ಚುರುಕು ಬೆಳೆಯಿಸಿಕೊಂಡ ಕೆಲಸಗಾರರು- ಇವನ್ನೆಲ್ಲ ಕಂಡ. ಅನೇಕರು ಕೆಲ ಕೆಲವೇ ಭಾಗಗಳನ್ನು ತಮ್ಮ ಮನೆಗೊಯ್ದು, ಅಲ್ಲಿ ಕುಳಿತು ಸಂಸಾರ ಸಮೇತರಾಗಿ ಮಾಡಿ, ಮುಗಿಸಿ-ಉತ್ಪನ್ನಕ್ಕೆ ತಕ್ಕ ವೇತನ ಪಡೆಯುತ್ತಿದ್ದರು. ಇಲ್ಲಿ ಸೇತುರಾಯನ ವಿಮರ್ಶೆಗೊಂದು ಅವಕಾಶ ದೊರೆಯಿತು. ಜನಗಳ ದುಡಿಮೆ, ಅವರ ಕೃಷಿಗೆ ಅಡ್ಡ ಬರುತ್ತಿರಲಿಲ್ಲ. ಶ್ರದ್ಧೆಯಿಂದ ಕೆಲಸಮಾಡಿದ ಯಾರೂ ದಿನಕ್ಕೊಂದೆರಡು ರೂಪಾಯಿಗಳನ್ನು ಗಳಿಸುವುದು ಕಷ್ಟವಾಗಿರಲಿಲ್ಲ. ತಾವೇ ಸ್ವಂತ ಸಾಮಗ್ರಿಗಳನ್ನು ಕೊಂಡು ತಾವೇ ಮಾರಬಹುದು, ಸಂಘಗಳ ಮೂಲಕವೂ ಮಾರಿಸಬಹುದು. ಇಲ್ಲಿ ಹುಳುಕು ಕಾಣಿಸದಿದ್ದರೂ, ಕೆಲವೊಂದು ಮನೆಗಳಲ್ಲಿ ಚಿಕ್ಕವರು, ದೊಡ್ಡವರು ದುಡ್ಡಿನ ಆಸೆಗೆ ದಿನಕ್ಕೆ ಹತ್ತೆಂಟು ತಾಸು ದುಡಿಯುವುದೂ ಕಾಣಿಸಿತು. "ಇದು ನ್ಯಾಯವೇ ?" ಎಂಬ ಆರೋಪ ಅವನದು. ಈ ವಿಷಯವನ್ನು ದೊಡ್ಡದಾಗಿಮಾಡಿ ಕಾಂಚನಮಾಲೆಯನ್ನು ನಿರುತ್ಸಾಹಗೊಳಿಸಬೇಕು, ತನ್ನ ಕಡೆಗೆ ಸೆಳೆಯಬೇಕು ಎಂಬುದು ಅವನ ಹಂಬಲ. ಅವಳು ಮಾಡುತ್ತಿರುವ ಈ ಕೆಲಸದಲ್ಲಿ ತನ್ನ ಅಭಿಲಾಷೆಗೆ ವಿರುದ್ಧವಾದ ಏನೋ ಒಂದು ದೆವ್ವ ಅಡಗಿದೆ ಎಂದು ಅವನ ಅಂತರಂಗ ಹೇಳುತ್ತಿತ್ತು.

ಆಕೆಯ ಬಳಿಗೆ ಹೋಗಿ "ಇದು ಫೇಕ್ಟರಿ ನಿಯಮಗಳ ಉಲ್ಲಂಘನೆಗೆ ಒಂದು ದಾರಿಯಲ್ಲವೇ ? ಎಳೆಯ ಮಕ್ಕಳಿಂದಲೂ ದಿನಕ್ಕೆ ಆರೆಂಟು ತಾಸು ದುಡಿಸುವುದನ್ನು ನಾನು ಕಂಡಿದ್ದೇನೆ. ದೊಡ್ಡವರ ದುಡಿಮೆಗೆ ಕಾಲ ನಿಯಮವೇ ಇಲ್ಲ. ಇದಕ್ಕಿಂತ ದೊಡ್ಡ ಅನ್ಯಾಯ ವೇಸಿದೆ ?" ಎಂದು ವಾದಿಸಿದ.

"ಅದಕ್ಕೂ ನಿರ್ಬಂಧವೇ ? ಅವರವರ ಮನೆಯೊಳಗೆ ಕುಳಿತು

ಹೆಚ್ಚು ಶ್ರಮಿಸಿದರೆ ಏನು ಕಷ್ಟ? ನಮ್ಮ ಸಮಾಜದ ಆರ್ಥಿಕ ಸ್ಥಿತಿಯಲ್ಲಿ ಹಿರಿಯರ ಜತೆಗೆ ಮಕ್ಕಳೂ ದುಡಿಯುತ್ತಾರೆ ಮನೆಯಲ್ಲಿ ಕೆಲಸ ಮಾಡುವುದಕ್ಕೆ ಹೇಗೆ ನಿರ್ಬಂಧವಿಲ್ಲವೋ ಬಿಡುವುದಕ್ಕೂ ನಿರ್ಬಂಧವಿಲ್ಲ ಕೃಷಿಯ ವೇಳೆಯಲ್ಲಿ ಮಕ್ಕಳು ಹೊಲ ನೋಡಿಕೊಂಡು ಇರುತ್ತಾರೆ, ಉಳಿದ ವೇಳೆಗಳಲ್ಲಿ ಈ ಕೆಲಸ ಮಾಡುತ್ತಾರೆ. ಮನೆಯ ನಡವಳಿಕೆಯನ್ನು ಶಾಸನದಿಂದ ನಿರ್ಬಂಧಿಸ ಬಂದೀತೇ? ಆದರೆ ಇಷ್ಟು ನಿಜ–ಕಾರ್ಖಾನೆಗಳ ಕಷ್ಟಾಯದ ದುಡಿತಕ್ಕಿಂತ ಈ ಕೆಲಸ ಅವರಿಗೆ ಪ್ರೀತಿ "

"ನನಗೆ ಇಂಥ ಆಟಗಳಲ್ಲಿ ನಂಬಿಕೆಯಿಲ್ಲ ಇದು ಎಷ್ಟುಕಾಲ ನಡೆದೀತು? ಎಷ್ಟು ಜನರಿಗೆ ಉದ್ಯೋಗ ಕೊಟ್ಟೀತು? ದೊಡ್ಡ ಉದ್ಯಮಗಳೆದುರು ಏನು ಸ್ಪರ್ಧೆ ಮಾಡೀತು?"

"ದೇಶದ ಜನಗಳೆಲ್ಲರೂ ದೊಡ್ಡ ಕಾರ್ಖಾನೆಗಳಲ್ಲೇ ದುಡಿದರೆ ಮೋಕ್ಷ ಎನ್ನುತ್ತೀರಾ? ಜಪಾನಿನಲ್ಲಿ ಮುಕ್ಕಾಲುಪಾಲು ಜನ ಗ್ರಾಮೋದ್ಯೋಗ ನಿರತರು "

"ಹೀಗೆ ಮುಂದುವರಿಯುವಲ್ಲಿ ಯುಗಗಳೇ ಬೇಕಾಗಬಹುದು. ರಾಷ್ಟ್ರಸ್ವಾಮ್ಯದಿಂದ ಸಂಪತ್ತು, ವಿಶ್ರಾಂತಿ ಎರಡೂ ಸಮವಾಗಿ ಹಂಚಿ ಹೋಗುತ್ತವೆ ಸಂಪತ್ತಿನ ಅಂತರ ಕಡಿಮೆಮಾಡುವುದಕ್ಕೆ ಅದೊಂದೇ ದಾರಿ ಅಂಥ ಮುಖ್ಯ ಕೆಲಸ ಬಿಟ್ಟು ನೀವು ಬಡಜನರ ಗಮನವನ್ನು ನಾಲ್ಕು ದಿನ ಮರೆಯಿಸುವ ಆಟ ಮಾಡುತ್ತೀರಿ "

"ನಿಜ ಇದು ಬಡಜನರ ಚಿಂತೆಯನ್ನು ಮರೆಯಿಸುವ ಆಟವೇ. ಅಂಥವರು ಬಡತನದಲ್ಲೂ ಸ್ವತಂತ್ರರಾಗಿರಲಿ. ಕಾರ್ಖಾನೆಯ ಗುಲಾಮರು ಆಗದಿರಲಿ ಎಂಬುದು ಅರುಣಾಚಲಯ್ಯನವರ ಧೋರಣೆ. ದೇಶದಲ್ಲಿ ಸರಕಾರ ಒಂದನ್ನೇ ಮೆಚ್ಚಿ ಬಾಳುವ ಗುಲಾಮತನ ನಮಗೆ ಇಷ್ಟವಿಲ್ಲ ಅನ್ಯರ ಮುಖ ನೋಡಿ ಗಳಿಸುವ ಸಂಪತ್ತಿಗಿಂತ ಸ್ವಶ್ರಮದಿಂದ ಗಳಿಸುವ ಅಲ್ಪ ವರಮಾನದ ತೃಪ್ತಿ, ಸ್ವತಂತ್ರ ಜೀವನದ ತೃಪ್ತಿ ಅನೇಕರಿಗೆ ಬೇಕಾಗಿದೆ ವೇತನ, ಹಣ ಇವೆರಡೇ ಸುಖವನ್ನಳೆಯುವ ಮಾನಗಳಲ್ಲ 'ಸ್ವಾತಂತ್ರ್ಯ', 'ತೃಪ್ತಿ' ಇನ್ನೂ ಹೆಚ್ಚಿನ ಅಳತೆಗಳು."

"ನೀವು ರಾಜಕೀಯ ಅರ್ಥಶಾಸ್ತ್ರವನ್ನು ಮರೆತು ಮಾತನಾಡು

ತ್ತೀರಿ. ನೀವೀ ಉದ್ಯೋಗ ಮಂತ್ರಿಗಳಾದುದರಿಂದ ಈ ಅಲ್ಪ ಕೆಲಸಗಳನ್ನು ಮಹಾ ಪುರುಷಾರ್ಥವೆಂದು ತಿಳಿಯುತ್ತಿದ್ದೀರಿ ರಷ್ಯ ದೇಶ ಉದ್ಯಮಗಳನ್ನೂ, ಕೃಷಿಯನ್ನೂ ರಾಷ್ಟ್ರಸ್ವಾಮ್ಯಕ್ಕೆ ಒಳಪಡಿಸಿ, ಯಾಂತ್ರೀಕರಣಗೊಳಿಸಿ ದೇಶದ ಉತ್ಪನ್ನವನ್ನು ಎಷ್ಟು ಹೆಚ್ಚಿಸಿದೆ ಎಂದು ನೋಡಬಾರದೇ ?"

ಕಾಂಚನಮಾಲೆ ಅವನ ಮುಖವನ್ನೇ ನೋಡಿದಳು ತಾವು ರಷ್ಯದ ಅಡಿಯಾಳುಗಳಲ್ಲ, ಆದರಿಂದ ಪ್ರೇರಿತರಲ್ಲ ಎಂದು ಶ್ರಮವಾದಿಗಳು ಎಷ್ಟು ವಾದಿಸಿದರೂ ಅವರ ಬುದ್ಧಿ,- ಪ್ರೇರಣೆಗಳು ಅಲ್ಲಿಂದಲೇ ಬರುತ್ತಿದ್ದುವೋ ಎಂಬುದಕ್ಕೆ ಆ ಮಾತು ಸಾಕ್ಷಿಯಾಗಿತ್ತು ಅನ್ಯ ದಾರಿಗಳನ್ನೇ ಕಾಣಲಾರರು ಅವರು ಆಕೆಗೂ ಮನಸ್ಸು ತಡೆಯದೆ ಅಂದಳು "ರಷ್ಯದ ಅಂಕೆಸಂಖ್ಯೆಗಳು ಬಹುದೊಡ್ಡವಾಗಿ ಕಾಣಿಸ ಬಹುದು ಅಲ್ಲಿನ ಶ್ರಮಗಾರರೂ ಬಂಡವಳಗಾರರ ಗುಲಾಮರಲ್ಲ; ಆದರೆ ಸರಕಾರದ ಗುಲಾಮರು ಸ್ವತಂತ್ರರಲ್ಲ, ತಮ್ಮ ಒಡೆಯರು ಯಾವಂತು ಅಲ್ಲವೇ ಅಲ್ಲ ಅದೇ ವ್ಯತ್ಯಾಸ ತಮ್ಮ ಉದ್ಯೋಗದ ಆಯ್ಕೆಯಲ್ಲಾಗಲೀ, ಇರುವ ಸ್ಥಳದ ಆಯ್ಕೆಯಲ್ಲಾಗಲೀ, ದುಡಿಮೆಯ ಆಯ್ಕೆಯಲ್ಲಾಗಲೀ, ಏನು ಸ್ವಾತಂತ್ರ್ಯ ಉಳಿದಿದೆ? ತಮ್ಮದು ಎಂಬ ಮನೆ, ತಮ್ಮದು ಎಂಬ ವಸ್ತು, ತಮ್ಮದು ಎಂಬ ವಿರಾಮ— ಎಷ್ಟು ಅವರ ಕೈಯಲ್ಲಿದೆ? ಸರಕಾರ ಬಿಟ್ಟಷ್ಟು, ಕೊಟ್ಟಷ್ಟು ನಿನಗೆ ಅಂಥ ಪ್ರಯತ್ನ ರುಚಿಸಲಾರದು ಎಂದು ನನಗೆ ಗೊತ್ತು ಈ ಜನ ತಮ್ಮ ಮುಷ್ಕರ, ಸಂಪುಗಳಿಗೆ ಸಿಕ್ಕುವವರಲ್ಲ ರಾಷ್ಟ್ರದ ಗುಲಾಮರಂತೆ ಮೇಲಿನವರು ಇಷ್ಟಕಂಡಂತೆ ಕುಣಿಸಲು ಬರುವುದೂ ಇಲ್ಲ. ಅವರು ಸ್ವತಂತ್ರ ವ್ಯಕ್ತಿಗಳಾಗಿ ಉಳಿಯುತ್ತಾರೆ 'ಬಡತನ', ಸ್ವಾತಂತ್ರ್ಯ'—ಇವುಗಳಲ್ಲಿ ಯಾವುದು ನಿನಗೆ ಮೆಚ್ಚು ಎಂದರೆ ನನ್ನಂತಿರುವವಳು, ಸ್ವಾತಂತ್ರ್ಯ ಮೆಚ್ಚುವವಳು ಬಡತನಕ್ಕಾಗಿ ಅಂಜಿ, ನನ್ನನ್ನು ತಾನು ಸರಕಾರಕ್ಕಾಗಲೀ, ಬಂಡವಳಿಗೇ ಆಗಲಿ ಮಾರಿಕೊಳ್ಳ ಬೇಕಿಲ್ಲ. ದೇಶದಲ್ಲಿ ದೊಡ್ಡ ಉದ್ಯಮಗಳೇ ಬೆಳೆದು ಶ್ರಮಗಾರರೇ ನಾಡನ್ನು ತುಂಬಿದರೆ, ಅವರ ಅಜ್ಞಾನದ ಮೇಲೆ ನಿಮ್ಮ ವ್ಯಾಪಾರ ನಡೆಯುತ್ತದೆ. ನೀರ್ಕಟ್ಟೆಯ ಸಂಪನ್ನು ನಡೆಯಿಸಿದಂತೆಯೇ—"

"ಇದು ಒಣವಾದ ಇಂದು ಔದ್ಯೋಗೀಕರಣ ಜಗತ್ತಿನಲ್ಲಿ ಮುಂದುವರಿದಿದೆ, ರೇಶನಲೈಸೇಶನ್ ಹೆಚ್ಚಾಗಿದೆ. ಅಂಥ ದೇಶಗಳೊಡನೆ ನಾವು ಸ್ಪರ್ಧಿಸಬೇಕು ದೊಡ್ಡ ಬಂಡುವಳಗಳನ್ನು ತೊಡಕಿಸಿದ ಉದ್ಯಮಗಳಿಂದಷ್ಟೇ ಅಂಥ ಸ್ಪರ್ಧೆ ಸಾಧ್ಯ ನಿಮ್ಮದು ಗುಡಿಕೈಗಾರಿಕೆಗಳಿಗಿಂತ ಒಂದು ಹೆಜ್ಜೆ ಮುಂದೆ ಹೋಗಿವೆಯಾದರೂ ಅದು ಇನ್ನೂ ಪುರಾಣಯುಗದ್ದೇ"

"ಇರಬಹುದು ಇವತ್ತು ಸ್ವಿಜರ್‌ಲೆಂಡ್ ಗಡಿಯಾರದ ಉದ್ಯಮವನ್ನು ಗೃಹಕೈಗಾರಿಕೆಯಾಗಿ ನಡೆಸುತ್ತಿಲ್ಲವೇ? ನಾವು ಕರೆಯಿಸಿಕೊಂಡ ಜಪಾನೀ ತಜ್ಞರು ಅಲ್ಲಿನ ಅನೇಕಾನೇಕ ಉದ್ಯಮಗಳು ಗುಡಿಕೈಗಾರಿಕೆಗಳಾಗಿವೆ ಎನ್ನುತ್ತಾರೆ ಅಂಥ ತಜ್ಞರ ಸಲಹೆಯನ್ನು ಪಡೆಯುತ್ತಿದ್ದೇವೆ ನನಗೆ ಕೈಗಾರಿಕೆಯ ಜ್ಞಾನ ತೀರ ಕಡಿಮೆ, ನಿಜ. ಇಂದು ಜಪಾನ್ ವ್ಯಾಪಾರಿ ಸ್ಪರ್ಧೆಯಲ್ಲಿ ಪ್ರಪಂಚಕ್ಕಿಂತ ಏನು ಕಡಮೆಯಾಗಿದೆ ತುಸು ಸಹನೆಯಿಂದ ಇಂಥ ಪ್ರಯತ್ನಗಳನ್ನು ನೀವು ನೋಡುವುದು ಒಳ್ಳೆಯದು ದೃಷ್ಟಿ ಕೇವಲ ರಾಜಕೀಯವಾಗಬಾರದು. ಮಾನವತೆಯ ದೃಷ್ಟಿಯೂ ಒಂದಿದೆಯಲ್ಲ"

ಹೀಗೆ ಅವರಲ್ಲಿ ದೀರ್ಘಕಾಲ ಚರ್ಚೆ ನಡೆದರೂ ಕೆಂಗಾಜನ್ನು ಧರಿಸಿ ನೋಡುತ್ತಿದ್ದ ನೇತುರಾಯನಿಗೆ, ಅರುಣಾಚಲಯ್ಯ ಕಾಂಚನಮಾಲೆಯರ ಈ ಪ್ರಯತ್ನದಲ್ಲಿ ಒಳಿತೆಂಬುವೇ ಕಾಣದು ರಾಷ್ಟ್ರದ ಯಾವತ್ತು ಪ್ರಜೆಗಳನ್ನು ಒಂದೇ ನೊಗಕ್ಕೆ ಕಟ್ಟಿ ನಡೆಯಿಸುವ ಆಶೆ ಅವನದು ದೇಶದ ಜನಗಳು ದುಡಿದು ತಮ್ಮ ಹೊಟ್ಟೆ ಹೊರೆಯುವುದಕ್ಕಿಂತಲೂ ಮುಖ್ಯವಾಗಿ ಅವರ ದುಡಿಮೆಯಿಂದ ಮಿಲಿಯಗಟ್ಟಲೆ ಸೈನಿಕರು ಯುದ್ಧಸನ್ನದ್ಧರಾಗಿ ರಸ್ಯಾ, ಚೀನಾಗಳಂತೆ ಮೆರೆಯಬೇಕೆಂಬ ಆಸೆ ಅವನಿಗೂ ಇತ್ತೋ ಏನೋ ಗುಲಾಲಿ ಪತ್ರಿಕೆಗಳಲ್ಲವೂ ಮಾಡುತ್ತಿದ್ದ ಟೀಕೆಗಳಿಂದ ಅವರು ಲೋಕವನ್ನು ನೋಡಲು ಬಳಸುತ್ತಿದ್ದ ಕೆಂಗಾಜು ಎಲ್ಲಿನದೆಂದು ಗೊತ್ತಾಗುತ್ತಿತ್ತು

ಇದರಿಂದ ನೇತುರಾಯನ ಮನಸ್ಸು ಎಷ್ಟು ವ್ಯಾಕುಲಕ್ಕೆ ಒಳಗಾಗಿತ್ತೋ ಅಷ್ಟೇ ಚಿಂತೆಗೊಳಗಾಗಿತ್ತು. ಕಾಂಚನಮಾಲೆಯ ವ್ಯಕ್ತಿತ್ವ ಸಾಮರ್ಥ್ಯಗಳನ್ನು ಬಲ್ಲ ಆತ, ಅವಳನ್ನು ಸುಲಭವಾಗಿ ತನ್ನ

ಆದರ್ಶಕ್ಕೆ ಸೆಳೆಯುವೆನೆಂದುಕೊಂಡಿದ್ದ. ಆ ದೃಷ್ಟಿಯಿಂದ ತನ್ನ ನೀರ್ಕಟ್ಟೆಯ ಮುಷ್ಕರದ ಪ್ರಯೋಗ ಒಂದು ರಾಜಕೀಯ ಪ್ರಮಾದ ವಾಯಿತೆಂದು ತಿಳಿದ ಆದರೆ ಅವಳು ಈಗ ಹಿಡಿದಿರುವ ದಾರಿ ಮತ್ತೂ ಅಪಾಯಕರ ದೇಶದಲ್ಲಿ ಸ್ವತಂತ್ರ ಜೀವಿಗಳನ್ನು ನಿರ್ಮಿಸುವ ಹಂಬಲ ರಾಷ್ಟ್ರಸ್ವಾಸ್ಥ್ಯಕ್ಕೆ ವಿಘಾತಕ ಪ್ರವೃತ್ತಿ ಇನ್ನಿನ್ನು ಅವಳನ್ನು ಶ್ರಮ ವಾದಿ ಪಕ್ಷಕ್ಕೆ ಒಲಿಸಿಕೊಳ್ಳುವುದು ಕಷ್ಟವೆಂದೇ ತೋರತೊಡಗಿತು.

ಸೇತುರಾಯನ ಯಾವತ್ತು ಆಸೆ, ಆದರ್ಶ, ತಂತ್ರಗಳು ಎಷ್ಟೇ ಸ್ವತಂತ್ರವಾದುವೆಂದರೂ ಅವುಗಳನ್ನು ನಡೆಯಿಸುವ ಮನಸ್ಸು ಕ್ರಾಂತಿ ವಾದವನ್ನು ನೆಚ್ಚಿದ್ದು ವರ್ಗಕಲಹ, ಅಶಾಂತಿಯಮೇಲೆ ಅಶಾಂತಿ ಯನ್ನು ಬೆಳೆಯಿಸಿ ಬಂದಲ್ಲಿ ಅಧಿಕಾರದ ಗದ್ದುಗೆಯನ್ನು ಏರುವುದು ಸುಲಭ ಎಂಬ ವಾದಸರಣಿ ವಿದೇಶದಿಂದಲೇ ಅವನ ತಲೆಯನ್ನು ತುಂಬಿ ಕೊಂಡುದು. 'ಶಾಂತಿ', 'ತೃಪ್ತಿ' ಎಂಬಿವು ಅವರ ಪಾಲಿಗೆ ಅಮಲು ಪದಾರ್ಥಗಳು, ತ್ಯಾಜ್ಯ ವಸ್ತುಗಳು ನಿಷ್ಕೇಂದ್ರೀಕೃತ ಉದ್ಯಮಗಳ ಸ್ವರೂಪ ಹೀಗಿದ್ದೀತು ಎಂದು ಅವನು ಊಹಿಸಿರಲಿಲ್ಲ ಅವನ್ನು ನೋಡಲು ಹೋಗಿ, ಕಾಣುವೆನೆಂದುಕೊಂಡ ನಿರಾಶೆಯನ್ನು ಕಾಣ ಲಿಲ್ಲ. ಬೇಸಾಯಗಾರರು ವಿರಾಮದಲ್ಲಿ ನೆಯ್ಗೆ ಮೊದಲಾದ ಕೆಲಸ ಮಾಡಿ ಉಪವೃತ್ತಿ ಗಳಿಸಿಕೊಂಡಿದ್ದಾರೆ ಜೀವನಕ್ಕೊಂದು ಹೊಸ ದಾರಿ ಸಿಕ್ಕೀತು ಎಂದು ಸಂತೋಷ ತಾಳಿದ್ದಾರೆ ಅಂತಹವರನ್ನು ಕೆದಕಿ, ಸರಕಾರದ ಮೇಲೆ ಎತ್ತಿಕಟ್ಟುವುದು ಕಷ್ಟ. ಹೀಗೆಯೇ ಉಪ ವೃತ್ತಿಗಳು ಬೆಳೆದರೆ ಹಳ್ಳಿಯ ಜನ ನಗರಗಳನ್ನು ತುಂಬಲಾರರು. ಕಾರ್ಖಾನೆಗಳ ಹುಚ್ಚು ಇಳಿದೀತು ಸಂಸಾರದಿಂದ ದೂರವಾಗಿ ರಾಜಕೀಯ ಅಮಲಿನಿಂದ ತೃಪ್ತಿತಂದುಕೊಳ್ಳುವ ದಾರಿ ನಿಂತೀತು. ಸಂಸಾರಯುಕ್ತರಾಗಿ ಇರುವರಲ್ಲಿ ಕ್ರಾಂತಿ ಕೆರಳಿಸುವುದು ಕಷ್ಟ. ಸಂಸಾರದಿಂದ ದೂರವಾಗಿದ್ದು ನಗರಗಳಲ್ಲಿ ತೇಲುತ್ತಿರುವ ಕೂಲಿಕಾರ ವರ್ಗವನ್ನು ಉದ್ವೇಗದ ಮಾತುಗಳಿಂದ ಕೆರಳಿಸುವಷ್ಟು ಸುಲಭ ಇದಲ್ಲ ಇವೆಲ್ಲ ಸೇತುರಾಯನ ಪಾಲಿಗೆ ಅಪ್ರಿಯ ಸತ್ಯಗಳಾಗಿವೆ.

ಇದರಂತೆಯೇ ಅರುಣಾಚಲಯ್ಯನವರ ಸರಕಾರ ಹೊಸದಾಗಿ ತೆರೆಯುತ್ತಿರುವ ಕಾರ್ಖಾನೆಯಲ್ಲಿ ಭಿನ್ನದೃಷ್ಟಿ ಕಾಣುತ್ತಿದೆ. ಶ್ರಮಗಾರ

ರಿಗೆ ವೇತನದ ಕನಿಷ್ಟ ಮಿತಿ ನಿರ್ಣಯಗೊಂಡಿದೆ. ಅದರಂತೆಯೇ ಸಮಾನ ಉದ್ಯಮಗಳನ್ನು ಪರಿಶೀಲಿಸಿ, ಒಬ್ಬ ಕೆಲಸಗಾರನ ಕನಿಷ್ಟ ದುಡಿಮೆಯ ಮಿತಿಯನ್ನೂ ಸಾರಿದ್ದಾರೆ ಅದಕ್ಕಿಂತ ಕೆಳಗಿಳಿದರೆ ಕೆಲಸ ಸಿಗದು ಹೆಚ್ಚು ಉತ್ಪನ್ನ ಮಾಡಿದರೆ ಲಾಭದಲ್ಲೂ, ವೇತನದಲ್ಲೂ ಅಷ್ಟೇ ಪಾಲು ವರಮಾನ. ಕೆಲವೊಂದು ಉದ್ಯಮಗಳಲ್ಲಿ ಕೆಲಸಗಾರರು ಪಾಲುಗಾರರಾಗುವ ಅವಕಾಶ ಕಲ್ಪಿಸಿದ್ದಾರೆ 'ಬೋನಸ್ಸಿ'ನ ಬದಲು ಒಡೆತನದಲ್ಲಿಯೆ ಪಾಲು ದೊರೆಯುತ್ತದೆ ಹೀಗಾಗಿ ನಿಷ್ಠೆಯಿಂದ ದುಡಿಯಬಲ್ಲವರಿಗೆ ಸಂಪು, ಮುಷ್ಕರಗಳ ಕೂಗು ಆಕರ್ಷಕವಾಗಿಲ್ಲ

"ಈ ವಾರ ಇಷ್ಟು ಗಜ ಹೆಚ್ಚಾಗಿ ನೆಯ್ದುದರಿಂದ, ಇಷ್ಟು ಹೆಚ್ಚಾಗಿ ಲಾಭ ದೊರೆಯಿತು" ಎಂದು ಹಿಗ್ಗುವವರನ್ನು ಸಂಪಿಗೆ ಒಲಿಸುವುದು ಕಷ್ಟ

ಶ್ರಮಗಾರ, ಬಂಡವಳುಗಾರ ವಿವಾದದಲ್ಲಿ 'ಹೆಚ್ಚಾಗಿ ಕೂಗಿದವರಿಗೆ ಮನ್ನಣೆ ಸಿಗುತ್ತದೆ' ಎಂಬ ಭಾವನೆ ತೊಲಗಬೇಕಾಯಿತು. ಸಂಪು ಹೂಡಿದಲ್ಲೆಲ್ಲ ಬರಿಯ ಕೆಲಸಗಾರರ ಕೂಗಿಗೆ ತಲೆದೂಗುವ ನ್ಯಾಯಾಲಯಗಳಿಲ್ಲ ಉತ್ಪನ್ನ, ಲಾಭ, ಕೆಲಸದ ವೇಳೆ, ವ್ಯಾಪಾರದ ಸ್ಥಿತಿಗತಿ, ಗಿರಾಕಿಯ ಶಕ್ತಿ, ಪ್ರಜೆಯ ಸರಾಸರಿ ವರಮಾನ–ಇವೆಲ್ಲವುಗಳ ದೃಷ್ಟಿಯಿಂದ ಬಂಡವಳುಗಾರರ ಮತ್ತು ಶ್ರಮಗಾರರ ಹಕ್ಕುಬಾಧ್ಯತೆಗಳ ನಿರ್ಣಯವಾಗತೊಡಗಿತು ಇದರಿಂದ ಸೇತುರಾಯರೇಗಿ, ಒಂದೆರಡು ಕಡೆ "ಮೆಲ್ಲಗ ದುಡಿಯುವಂತೆ" ಬೋಧಿಸಿದ. ಧನಿಗಳು ಅದರಿಂದ ತಮ್ಮ ಕಾರ್ಖಾನೆ ನಿಲ್ಲಿಸಿದರು ಅಲ್ಲಿಂದ ವಿವಾದ ಕೋರ್ಟಿಗೆ ಹೋಯಿತು ಕೆಲಸಗಾರರ ವಿರುದ್ಧವಾದ ತೀರ್ಮಾನ ಬಂದಿತು "ನ್ಯಾಯವಾದ ವೇತನದ ಹಕ್ಕು, ಶ್ರಮಗಾರನಿಗೆ ಇರುವಂತೆಯೇ ಕೆಲಸದ ಮಿತಿಯೂ ಇದೆ ಕಾರ್ಖಾನೆಯವರು ಇರಿಸಿದ ಮಿತಿ ನ್ಯಾಯವಾದುದು ಅದನ್ನು ತಗ್ಗಿಸಿದ ಶ್ರಮಗಾರರ ಪ್ರಯತ್ನ ಖಂಡನೀಯ" ಎಂದರು. ನಾಲ್ಕುದಿನ ಕೆಲಸಗಾರರು ಕೆಲಸಕ್ಕೇ ಹೋಗದೆ ಹಿಂದೆ ಕುಳಿತರು ಹಸಿವು ಹೆಚ್ಚುತ್ತಲೇ, ತಿರುಗಿ ಬಂದರು. "ಗೋ ಸ್ಲೋ" ತಂತ್ರ, ನ್ಯಾಯಕ್ಕೆ ವಿರುದ್ಧವೆಂದು ಸಾರಿದಾಗ, ಸೇತು

ರಾಯ ಚಡಪಡಿಸಿದ ಮುಷ್ಕರಗಳನ್ನು ಪ್ರೇರಿಸುವ ಕೆಲಸ ಸುಲಭವಾಗಿತ್ತು. ಆದರೆ ಈಗೀಗ ಸುಲಭ ವಿಜಯಕ್ಕೆ ದಾರಿಯಿಲ್ಲ. ಕೆಲಸ ಬಿಡಿಸಿದರೆ ಕೆಲಸಗಾರರ ಹೊಟ್ಟೆ ತುಂಬಿಸುವ ಕೆಲಸ ಮಾತಿನಿಂದಾಗದು. ನ್ಯಾಯಾಲಯಕ್ಕೆ ಹೋದರೆ ಕೆಲಸಗಾರನ ಹಕ್ಕಿನ ಜತೆಗೆ, ಕೊಳ್ಳುವ ಗಿರಾಕಿಯ ಹಕ್ಕೂ, ಶಕ್ತಿಯೂ ಮುಂದೆ ಬರುತ್ತದೆ. ಅರುಣಾಚಲಯ್ಯ ಶ್ರಮಗಾರ ವಿರೋಧಿಗಳಂತೆ ಕಾಣಿಸಿದರೂ, ಬಂಡವಳಗಾರ ಪಕ್ಷಪಾತಿಗಳಾಗಿರಲಿಲ್ಲ. ಅಧಿಕ ಲಾಭಕ್ಕೆ, ವಕ್ರ ಮಾರ್ಗಗಳಿಗೆ ತೆರುವಷ್ಟು ಅಡ್ಡಿ ತಂದು ಅವರಿಗೆ ವಿವೇಕ ಬೋಧಿಸುತ್ತಿದ್ದರು. "ಶ್ರಮಗಾರರಾಗಲೀ, ಬಂಡವಳಗಾರರಾಗಲೀ ಸಮಾಜ ಹಿತಕ್ಕೆ ಅಡಿಯಾಳುಗಳು" ಎಂಬ ನೀತಿ ಅವರದು.

ಇತ್ತ ಕಾಂಚನಮಾಲೆಗೆ, ಸೇತುರಾಯನೊಡನೆ ವಾದದಲ್ಲಿ ಗೆದ್ದೆನೆಂದೆನಿಸಿದರೂ ಮನಸ್ಸು ನೆಮ್ಮದಿಯಾಗಿರಲಿಲ್ಲ. ಎಷ್ಟೆಂದರೂ ಯುದ್ಧಾನಂತರದ ಕಾಲ. ವಸ್ತುಗಳ ಬೆಲೆ ಹೆಚ್ಚಿದೆ. ದುಡಿದವರಿಗೆ ಲಾಭವಿದೆ. ಆದರೆ ನಾಳೆದಿನ ಜಪಾನು ಮೊದಲಾದ ದೇಶಗಳಿಂದ ಗಾಜು, ಪಿಂಗಾಣಿ ಮೊದಲಾದ, ಇದಕ್ಕಿಂತ ಅಗ್ಗದ ಸಾಮಾನುಗಳು ಬಂದರೆ—ಏನುಗತಿ ಎಂಬ ಭಯವೂ ಉಂಟು. ಅವರಕ್ಕೆ ಚಳಕಕ್ಕೆ ಸಮನಾಗಿ ಇವರದೂ ಬೆಳೆಯಬೇಕು. ಅಲ್ಲದೆ ಗೊಂಡಾರಣ್ಯದ ಎಲ್ಲ ಜನಗಳಿಗೂ ಪ್ರಯೋಜನವಾಗಲು ಇಂಥ ಉದ್ಯೋಗಗಳನ್ನು ಎಷ್ಟೆಷ್ಟೋ ಪಾಲು ಹೆಚ್ಚಿಸಬೇಕು. ಆಗ ಅಧಿಕ ಉತ್ಪನ್ನ ತಮ್ಮಲ್ಲೇ ಖರ್ಚಾಗದೆ, ಹೊರಗೂ ಹೋಗಬೇಕು. ಆಗ ಇನ್ನಷ್ಟು ಸ್ಪರ್ಧೆಯ ಭಯವಿದೆ! ಗಿರಾಕಿಗಳ ವಿಸ್ತಾರ, ಅಭಿರುಚಿಗಳ ವೈವಿಧ್ಯ ಎಲ್ಲವನ್ನೂ ಗಳಿಸಿಕೊಳ್ಳಬೇಕು. ತಮ್ಮ ಜನ ಇಂಥ ನಿತ್ಯ ನಿತ್ಯದ ಸಮಸ್ಯೆಗಳನ್ನು ಇದಿರಿಸಿ, ಮುಂದುವರಿಯುವ ಶಕ್ತಿ, ಸಾಹಸ ಗಳಿಸುವುದು ಅನಿವಾರ್ಯವೆನಿಸುತ್ತದೆ. ಆದರೆ ಜನ ಇನ್ನೂ ಬದಲಾವಣೆಗೆ ಹೊಂದಿಕೊಳ್ಳುವಂತಿಲ್ಲ. ಕಾಲಕ್ಕೆ ತಕ್ಕ ಓಟ ಓಡಲಾರರು. ಇದನ್ನೆಲ್ಲ ನೆನೆದಾಗ ಬೇರೊಂದೇ ಸಮಾಧಾನ ಬರುತ್ತದೆ. ಈ ಎಲ್ಲ ಪ್ರಶ್ನೆಗಳು ಸಣ್ಣ ಕೈಗಾರಿಕೆಗಳೊಂದಕ್ಕೇನು? ದೊಡ್ಡವಕ್ಕೂ ಅನ್ವಯಿಸುತ್ತವೆ. ಹೊಸ ಸಂಶೋಧನೆಗಳು ಎಲ್ಲವನ್ನೂ ತಲೆಕೆಳಗು

ಮಾಡಬಲ್ಲವು ಇಂಗ್ಲೆಂಡು, ಜರ್ಮನಿಯನ್ನು ಇದಿರಿಸಬೇಕಾಗಿದೆ; ಯುರೋಪು, ಜಪಾನಿನ ಸ್ಪರ್ಧೆಯನ್ನು ಇದಿರಿಸಬೇಕಾಗಿದೆ ಸೇತು ರಾಯ ಒಡ್ಡುವ ಸಮಸ್ಯೆಗಳು ರಷ್ಯಾ ದೇಶಕ್ಕೂ ಇದೆ ನಮಗೂ ಇದೆ ಎಂದು ತನಗೆ ತಾನು ತೃಪ್ತಿ ತಂದುಕೊಳ್ಳುತ್ತಾಳೆ

ಕಾಂಚನಮಾಲೆ ತನ್ನ ಕ್ಷೇತ್ರದಲ್ಲಿ ದೆವ್ವದಂತೆ ದುಡಿಯುತ್ತಿದ್ದು ಪ್ರಧಾನಿಯ ಮತ್ತು ಗೆಳೆಯರ ಸಹಕಾರದಿಂದ ಮೂರನೆಯ ವರ್ಷ ಕಾರ್ಯಕ್ಷೇತ್ರವನ್ನು ವಿಸ್ತರಿಸಲು ಶಕ್ತಳಾದಳು "ಇಲ್ಲದ ಭಯ ತಂದುಕೊಳ್ಳಬೇಡಿ ಸಮಸ್ಯೆಗಳು ಬಂದೇ ಬರುತ್ತವೆ ಬಂದುದನ್ನು ಇದಿರಿಸುವ ಗಡಸುತನ ನಮಗ ಇರಬೇಕು ಬರಿಯ ವಾದ, ತತ್ವಗಳು ದಾರಿ ತೋರಿಸಲಾರವು ಈ ಎರಡು ವರ್ಷಗಳಲ್ಲಿ ನಿಮಗೆ ದೊರಕಿದ ಅನುಭವ, ಪ್ರೇರಣೆ ಕೊಡಲಾರದೆ" ಎಂದು ಅರುಣಾಚಲಯ್ಯನವರು ಹಿತವಚನ ನುಡಿಯುತ್ತಿದ್ದರು ಆಕೆ ಕಾರ್ಯದಲ್ಲಿ ತಲ್ಲೀನಳಾದಂತೆ ಮನಸ್ಸಿಗೆ ಬರಿಯ ರಾಜಕೀಯ ವಾದಗಳ ಮೋಹ ಕದಿಮೆಯಾಗುತ್ತ ಬಂದಿತು

ಈಗ ಮೂರನೆಯ ವರ್ಷ ಕಳೆದಿದೆ ಒಂದು ರೀತಿಯಿಂದ ನಾಡಿ ನಲ್ಲೆಲ್ಲ ಶಾಂತಿ ನಲೆಸಿತ್ತೆನ್ನಬಹುದು ನೀರ್ಕಟ್ಟೆಯ ಪ್ರಕರಣದಿಂದ ತೊಡಗಿದ ಪ್ರವ ವಾದಿಗಳ ಅವನತಿ ಸ್ವಲ್ಪವಾದರೂ ಕಾಣಿಸುತ್ತಿದೆ. ಅವರು ಪ್ರೇರಿಸಿಯೂ, ಬೆದರಿಸಿಯೂ ಮುಷ್ಕರ ಹುಟ್ಟಿಸಲೊಲ್ಲರು. ಮಾಡಿದ ಸಂಪುಗಳಲ್ಲಿ ಅವರ ಕೈವಾಡ ನಡೆಯಲಿಲ್ಲ ಅರುಣಾಚಲಯ್ಯ ನವರ 'ಸಾಮಾಜಿಕ ನ್ಯಾಯನೀತಿ', ಅತಿ ಬೇಡಿಕೆಗಳಿಗೆ ಮನ್ನಣೆ ಕೊಡಲಿಲ್ಲ ಇದರಿಂದೆಲ್ಲ ತಮ್ಮ ಪಕ್ಷದ ಭವಿಷ್ಯವನ್ನು ಕುರಿತು ಚಿಂತಿ ಸುವ ಸರದಿ ಸೇತುರಾಯನಿಗೆ ಬಂದಿತು ಅರುಣಾಚಲಯ್ಯನವರ ಸರಕಾರವನ್ನು ಹೇಗಾದರೂ ಮುರಿಯುವ ಹಟ ಅವನದು. ಅವರಿಗೆ ಸಹಕಾರ ಕೊಟ್ಟ ಸ್ವತಂತ್ರರನ್ನು ತನ್ನ ಕಡೆಗೆ ಸೆಳೆಯುವ ಉಪಾಯ ಹುಡುಕಿದ, ಸಾಧ್ಯವಾಗಲಿಲ್ಲ. ಹೀಗೆ ದಾರಿಗಾಣದಾಗ ವಿಪ್ಲವದ ಇನ್ನೊಂದು ಕ್ಷೇತ್ರವನ್ನು ಹುಡುಕಿದ

ವನಶ್ರೀ ನದಿಯನ್ನು ಮಾನವತಿಯೆಂಬ ಪುಟ್ಟ ನದಿಯೊಂದು ಸೇರಿಕೊಳ್ಳುತ್ತದೆ. ಆ ಕಿರುನದಿಗೆ ಒಡ್ಡು ಕಟ್ಟುತ್ತಿದ್ದಾರೆ. ವಿದ್ಯುತ್

ಉತ್ಪನ್ನದ ಕೆಲಸವೂ ಆಗುತ್ತಲಿದೆ. ಈ ವರ್ಷವೇ ಅದು ಕೊನೆಗೊಳ್ಳಬೇಕು ಒಡ್ಡು ಮುಗಿದು ಮಳೆ ನೀರು ತುಂಬಿಕೊಳ್ಳುವಾಗ ಸುಮಾರು ಐವತ್ತು ಚದರ ಮೈಲು ವಿಶಾಲಭೂಮಿ ನೀರು ಪಾಲಾಗಿ ಎರಡು ಮೂರು ಸಾವಿರ ರೈತ ಕುಟುಂಬಗಳು ವಸತಿ ಬಿಡಬೇಕಾಗುತ್ತದೆ ಅದು ಅಸಂತುಷ್ಟಿ ಬೆಳೆಯಿಸುವುದಕ್ಕೆ ಯೋಗ್ಯ ಕ್ಷೇತ್ರ ಸರಕಾರ ಅವರಿಗೆ ಪರಿಹಾರ ಕೊಡುತ್ತವೆ, ಬೇರೊಂದು ಕಡೆ ಬದಲು ಜಮೀನು ಕೊಡುತ್ತವೆ ಅಂಥ ಏರ್ಪಾಟು ನಡೆದಿದೆಯಾದರೂ, ಇರುವ ಹೊಲ ಮನೆ ಬಿಟ್ಟು ಹೋಗುವ ಕಲಸ ಯಾರಿಗೂ ಇಷ್ಟವಿಲ್ಲದ್ದು ದೊರೆಯುವ ಹೊಸ ಜಮೀನು ಸಾಗು ಮಾಡದ ನೆಲ ಅಲ್ಲಿ ತಿರುಗಿ ಜೀವನ, ವ್ಯವಸಾಯ ನಡೆಯಿಸುವ ಕೆಲಸ ಕಷ್ಟದ್ದು ಈ ತಕ್ಷೇತ್ರಕ್ಕೆ ಹೋಗಿ ಅಲ್ಲಿನ ಜನಗಳನ್ನು ಎತ್ತಿ ಕಟ್ಟಿದ "ಕೊಡುವ ಪರಿಹಾರ ದ್ರವ್ಯ ಸಾಲದು ಸಾಗು ಮಾಡಿದ ಜಮೀನಿಗೆ ಪ್ರತಿಯಾಗಿ ಸಾಗುವಳಿಯಾದ ಅದೇ ಬಗೆಯ ಜಮೀನು ಬೇಕು ಮಲೆನಾಡಿನಿಂದ ಬಯಲು ನಾವು ಸೀಮೆಗೆ ಹೋಗಲಾರೆವು ಇಲ್ಲಿನ ಗ್ರಾಮ ಸಮುದಾಯವನ್ನು ಅಲ್ಲಿಗೂ ಗ್ರಾಮಸಮುದಾಯವಾಗಿಯೇ ಸಲ್ಲಿಸಿ ಉಳಿಸಬೇಕು" ಎಂಬ ಬೇಡಿಕೆಗಳನ್ನು ಅವರ ಮೂಲಕ ಹೊರಡಿಸಿದ ರೈತರು ಹಿಂದೆ ಕೊಟ್ಟ ಒಪ್ಪಿಗೆಗಳನ್ನು, ಬಲವಂತದಿಂದ ಕೊಟ್ಟದ್ದೆಂದು ಹೇಳಿ ನಿರಾಕರಿಸುವಂತೆ ಮಾಡಿದ ಕೇಳಿಕೆಗಳನ್ನು ಸಲ್ಲಿಸದಿದ್ದರ ಸತ್ಯಾಗ್ರಹ ಹೂಡುವ ನಿಶ್ಚಯವೂ ಆಯಿತು.

ಸರಕಾರದ ಕಡೆಯಿಂದ ಯಾರೇನು ಬಂದು ಹೇಳಿದರೂ "ನಾವು ಇಲ್ಲಿಂದ ಕದಲುವುದಿಲ್ಲ ಇಲ್ಲಿಯೇ ಮುಳುಗಿ ಸಾಯುತ್ತೇವೆ. ಸರಕಾರ ನಮ್ಮನ್ನು ಕೇಳಿ ಒಡ್ಡು ಕಟ್ಟಲಿಲ್ಲ, ಮೊದಲಿನಿಂದ ನಾವು ಆಕ್ಷೇಪಿಸಿದವರು" ಎಂದು ಒರಟಾಗಿ ಉತ್ತರಿಸಿದರು

ವಿಕ್ರಮನಗರದ ಪತ್ರಿಕೆಗಳು ದೊಡ್ಡ ದೊಡ್ಡ ಬರಹಗಳಲ್ಲಿ 'ಹತ್ತು ಸಾವಿರ ಗ್ರಾಮನಿವಾಸಿಗಳನ್ನು ಸರಕಾರ ವಂಚಿಸಿ, ಸರಿಯಾದ ಪರಿಹಾರ ಕೊಡದೆ, ಸ್ಥಳಾಂತರ ಮಾಡುವುದು ತೀರ ಅನ್ಯಾಯ' ಎಂದು ಬರೆಯತೊಡಗಿದವು ಭಾಷಣಗಳಾದುವು ಈ ವಿರೋಧದ ಗಾಳಿ ಎಸೆಂಬ್ಲಿಯಲ್ಲಿಯೂ ತಲೆದೋರಿತು ಅನೇಕರ ಸ್ವಾರ್ಥಕ್ಕೆ

ಇದು ಆಹಾರವಾಯಿತು ಕಾದಿದ್ದ ವಾಮನರಾಯ, ಅರುಣಾಚಲಯ್ಯನವರನ್ನು ಉರುಳಿಸಲು ಇದೇ ಸಮಯವೆಂದರಿತು ಶ್ರಮವಾದಿಗಳ ಜತೆಗೆ ಕೂಗುವಂತೆ ತಮ್ಮ ಜನಗಳನ್ನು ಪ್ರೇರಿಸಿದ

ಇಂಥ ಚಿಕ್ಕವಿಷಯದಲ್ಲಿ ಉರಿ ಹೊತ್ತೀತೆಂದು ಅರುಣಾಚಲಯ್ಯನವರು ಯೋಚಿಸಿರಲಿಲ್ಲ ಅವರು ಆತ್ಮವಿಶ್ವಾಸದಿಂದ "ನಾನು ಮಾಸನತಿ ಪ್ರದೇಶದ ಗ್ರಾಮಸ್ಥರಿಗೆ ಸಮಾಧಾನ ಹೇಳುತ್ತೇನೆ" ಎಂದು ಆ ಸತ್ಯಾಗ್ರಹಿಗಳೊಡನೆ ಸಂಧಾನಕ್ಕೆ ಹೊರಟರು

ಮಾಸನತಿ ಸೀರ್ಕಟ್ಟೆಯ ಭೂಮಿ ಮಲೆನಾಡು ಭೂಮಿ, ಗುಡ್ಡಗಾಡುಗಳಿಂದ ತುಂಬಿದ ಭಾಗ ಯಾವ ಸೂಚನೆಯನ್ನೂ ಕೊಡದೆ ಅರುಣಾಚಲಯ್ಯ ಅಲ್ಲಿಗೆ ಹೊರಟಾಗ, ಈ ಸತ್ಯಾಗ್ರಹ ವಿಷಯದಲ್ಲಿ ಅನುಮಾನಗ್ರಸ್ತಳಾದ ಕಾಂಚನಮಾಲೆ ಅವರ ಬೆನ್ನಿಗೆ ಹೊರಟಳು. ಆಚೀಚೆಗಿನ ಊರುಗಳ ಪ್ರಮುಖರನ್ನು ಕರೆದುಕೊಂಡು ಅಲ್ಲಿನ ಜನಗಳಿಗೆ ಸಮಾಧಾನ ಹೇಳಬಹುದೆಂದು ಅವಳೂ ಯೋಚಿಸಿ ಹೊರಟಳು. ಬೆಟ್ಟದ ತಪ್ಪಲಿನ ದಾರಿ ಮುಂದೆ ಅರುಣಾಚಲಯ್ಯನವರು ಒಂದು ಮೋಟಾರಿನಲ್ಲಿ ಕುಳಿತು ಹೋಗುತ್ತಿದ್ದರೆ ಒಂದೆರಡು ಮೈಲುಗಳ ಅಂತರದಲ್ಲಿ ಕಾಂಚನಮಾಲೆ ಜತೆಯವರೊಡನೆ ಹಿಂಬಾಲಿಸುತ್ತಿದ್ದಳು. ದಾರಿ ಬೆಟ್ಟದ ಒಂದು ಮಗ್ಗುಲಿಂದ ಹೋಗುತ್ತಿತ್ತು. ಅದರ ತಿರುವು ಮುರುವುಗಳಲ್ಲಿ ಬಂಡಿಯನ್ನು ವೇಗವಾಗಿ ನಡೆಯಿಸುವುದಕ್ಕೂ ಸಾಧ್ಯವಿರಲಿಲ್ಲ. ಆಕೆ ಸಂಗಡಿಗರೊಡನೆ ಮಾತಿನಲ್ಲಿ ತಲ್ಲೀನಳಾಗಿದ್ದಳು ಬೆಟ್ಟದ ತಿರುವೊಂದು ಬಂದಾಗ ಅವಳ ಗಾಡಿಯ ಡ್ರೈವರು ಬಿರಿಯನ್ನು ಜಗ್ಗಿ, ಒದ್ದು, ಕಿರಿಚಿ ಬಂಡಿಯನ್ನು ನಿಲ್ಲಿಸಿದಾಗ ಎಲ್ಲರಿಗೂ ಮೈಕುಲುಕಿ ಎಚ್ಚರವಾಯಿತು

'ಏನು ?' 'ಏಕೆ ?' ಎಂದು ನೋಡುವಾಗ, ಎದುರಿಗೆ ಬಂಡೆಯೊಂದು ಉರುಳಿ ದಾರಿಯನ್ನು ಅಡ್ಡ ಕಟ್ಟಿತ್ತು ಅವಸರದಿಂದ ಬಂಡಿಯಿಂದಿಳಿದರು ಬಂಡೆಯ ಆಚೀಚೆ ನೋಡಿದರು ಕೆಳಗಿನ ತೆವರಿನಲ್ಲಿ ದಿಗಿಲು ಹಾರಿಸುವ ನೋಟವೊಂದಿತ್ತು ಐವತ್ತು ನೂರು ಅಡಿ ಆಳದಲ್ಲಿ, ಅವರಿಗಿಂತ ಮುಂಚೆ ಹೋದ ಅರುಣಾಚಲಯ್ಯನವರ ಮೋಟಾರು ಉರುಳಿ ನುಗ್ಗು ನುರಿಯಾಗಿ ಬಿದ್ದಿತ್ತು. ಎಲ್ಲರೂ ಗಾಬರಿ

ಯಿಂದ ಶವಗಳನ್ನು ಇಳಿಯುವ ಪ್ರಯತ್ನ ಮಾಡಿದರು. ಹಿಂದಿನಿಂದ ಬೇರೆ ಬಂಡಿಗಳು ಬಂದುವು ಜನ ಕಲೆತರು ಕೆಳಗಿನ ಪ್ರಪಾತವನ್ನು ಇಳಿಯುವುದು ಸುಲಭವಾಗಿರಲಿಲ್ಲ. ಇತರರೊಡನೆ ಕಾಂಚನ ಮಾಲೆ ಬಳಸು ದಾರಿಯಿಂದ ಸುತ್ತಿ, ಇಳಿದು ಹೋಗಿ, ನೋಡಿದಾಗ–ಕಾಣ ಲಾರದ ನೋಟ ಕಾದಿತ್ತು ಅರುಣಾಚಲಯ್ಯ ಮತ್ತು ಡ್ರೈವರನ ಶರೀರಗಳು ಎಸೆದು ಬಿದ್ದಿದ್ದುವು ವೈಕೈಗಳು ರಕ್ತಮಯವಾಗಿ ದ್ದುವು ಆಕೆ ಅರುಣಾಚಲಯ್ಯನವರ ಬಳಿಗೆ ಧಾವಿಸಿ ಅವರ ರಕ್ತ ರಂಜಿತ ಶರೀರವನ್ನು ಬಳಿ ಸೆಳೆದುಕೊಂಡು ಮುಖ ಮುಖ ನೋಡ ತೊಡಗಿದಳು ಅವಳ ಕಾತರ ನಯನಗಳು 'ಏನಾಯಿತು?' ಎಂದು ಕೇಳುತ್ತಿವೆ ಅವರಿಗೆ ಮಾತ್ರ ಸ್ಮೃತಿ ಇತ್ತೋ ಇಲ್ಲವೋ? ಮಾತು ಹೊರಡದು ಕೊನೆಯ ಉಸಿರು ಎಳೆಯುತ್ತಿತ್ತು ಅವರ ತಲೆಯನ್ನು ತನ್ನ ತೊಡೆಯಮೇಲಿರಿಸಿಕೊಂಡು ಅವರ ಅಂತಿಮ ಗಳಿಗೆಗೆ ಸಾಕ್ಷಿಯಾ ಗುವುದಷ್ಟೇ ಅವಳ ಭಾಗ್ಯವಾಗಿತ್ತು

ಎಲ್ಲರೂ ಸೇರಿ ಅವರಿಬ್ಬರ ಶರೀರಗಳನ್ನು ಹೊತ್ತು, ಮೇಲಕ್ಕೆ ತಂದರು ವಿಸ್ಮೃತಿಗೊಂಡ ಡ್ರೈವರು ಇನ್ನೂ ಉಸಿರಾಡುತ್ತಿದ್ದುದರಿಂದ ಅವನನ್ನು ದೂರದ ಆಸ್ಪತ್ರೆಗ ಸಾಗಿಸಿದರು ಆಶೆ, ವಿಶ್ವಾಸಗಳಿಂದ ಹೊರಟ ಕಾಂಚನಮಾಲೆ ಮತ್ತು ಅವಳ ಮಿತ್ರರು, ತಮ್ಮ ನಾಯಕ ನನ್ನು ಹೊತ್ತು ಮೋಟಾರು ವಾಹನದ ಬಳಿಗೆ ತಂದು ನಗರಕ್ಕೆ ಹೊರಟರು. ಸ್ಥಳದಲ್ಲಿ ಕಾವಲು ನಿಂತಿತು ಹೃದಯದಲ್ಲಿ ಶೋಕ ತುಂಬಿಸಿಕೊಂಡು, ಮುಖ ತಗ್ಗಿಸಿಕೊಂಡು ಕಾಂಚನ ಮಾಲೆ ತನ್ನ ಅತ್ಯಾಪ್ತ ವಸ್ತುವೊಂದನ್ನು ಕಳೆದುಕೊಂಡವಳಂತೆ ವಿಕ್ರಮ ನಗರ ವನ್ನು ಸೇರಿದಳು

## ಅಧ್ಯಾಯ ೧೦

ಅರುಣಾಚಲಯ್ಯನವರ ಆಕಸ್ಮಿಕ ಮೃತ್ಯುವು, ಅದು ಸಂಭವಿಸಿದ ಬಗ್ಗೆ, ಎಷ್ಟು ವಿಚಿತ್ರವಾಗಿತ್ತೋ ಗೊಂಡಾರಣ್ಯದ ಪಾಲಿಗೆ ಅದು

ಅಷ್ಟೇ ದೊಡ್ಡ ಆಘಾತವೂ ಆಯಿತು ಅವರ ಕಳೇಬರ ವಿಕ್ರಮ ನಗರವನ್ನು ಸೇರುವುದರೊಳಗಾಗಿಯೇ, ನಾಡಿನ ಉದ್ದಕ್ಕೂ ಆ ವಾರ್ತೆ ಹಬ್ಬಿ ದುಃಖ, ಉದ್ವಿಗ್ನತೆಗಳು ಮೂಡಿದುವು ಅಂತಹ ಪ್ರಾಮಾಣಿಕನಾದ, ದೇಶಕ್ಕಾಗಿ ನಿರ್ವಂಚನೆಯಿಂದ ದುಡಿಯಬಲ್ಲ ವ್ಯಕ್ತಿಯನ್ನು ಕಳೆದುಕೊಂಡುದಕ್ಕಾಗಿ ನಾಡಿನ ಹಿತಚಿಂತನೆಯುಳ್ಳ ಪ್ರತಿಯೊಬ್ಬರಿಗೂ ದೊಡ್ಡ ನಷ್ಟವೆನಿಸಿತು ನಗರಕ್ಕೆ ನಗರವೇ ಈ ರಾಷ್ಟ್ರವೀರನಿಗೆ ಅಂತ್ಯದ ಕಾಣಿಕೆಯನ್ನು, ಕಂಬನಿಯನ್ನು ಸುರಿಸುವುದಕ್ಕೆ ಬಂದಿತ್ತು. ಶವದ ಕಾವಲಿಗೆ ನಿಂತವಳಂತೆ, ಕಾಂಚನಮಾಲೆ ದುಃಖತಪ್ತಳಾಗಿ ತಲೆತಗ್ಗಿಸಿ ಕುಳಿತಿದ್ದಳು ನಗರದ ಪ್ರಮುಖರೆಲ್ಲ ಅವರ ಕಳೇಬರವನ್ನು ಪುಷ್ಪಹಾರಗಳಿಂದ ಮುಚ್ಚಿ, ತಾವು ಅವರಿಗೆ ಕೊಡದ ನೆರವಿಗಾಗಿ ಪರಿತಾಪ ಪಡುವಂತೆ ಕಾಣುತ್ತಿತ್ತು ಆ ಒಂದು ಗಳಿಗೆಯಲ್ಲಿ ಸೇತುರಾಯ, ವಾಮನರಾಯ ಮೊದಲಾದ ಎಲ್ಲರೂ ಪಕ್ಷಭೇದ, ವ್ಯಕ್ತಿ ದ್ವೇಷವಿಲ್ಲದವರಂತೆ ನೆರೆದಿದ್ದರು ಬದುಕಿನಲ್ಲಿ ನಲ್ಲದ ಕಾಣಿಕೆ ಅದರ ಅಂತಿಮ ಯಾತ್ರೆಗೆ ಸಂದಿತು. ಜನಸ್ತೋಮ ದಾರಿಯುದ್ದಕ್ಕೂ ನೆರೆದಿತ್ತು ರಾಜಪ್ರಮುಖ ಪ್ರತಾಪರಾಯ, ತಾನೇ ಹಿರಿಯನಾಗಿ, ಈ ಸಂತಾಪದ ಮೆರವಣಿಗೆಯೊಡನೆ ವನಶ್ರೀ ನದಿದಂಡೆಯ ಮೇಲಿರುವ ಸ್ಮಶಾನದ ತನಕ ಸಾಗಿದ ಅಲ್ಲಿ ಭಾಷಣದ ಭಾಷ್ಪಾಂಜಲಿಗಳಾದುವು. ಎಲ್ಲರೂ ಅವರನ್ನು ಹೊಗಳಿ ಮಾತನಾಡಿದರು ಮಾತಿಗೆ ಉಸಿರಿಲ್ಲದೆ ನಿಂತವಳು ಗದ್ಗದಿತ ಕಾಂಚನಮಾಲೆಯೊಬ್ಬಳೇ ಅಲ್ಲಿ ಮಾನವ ಸಾಗರ, ಆ ಗಳಿಗೆಯಲ್ಲಾದರೂ, ತಾವು ಕಳೆದುಕೊಂಡ ಅಪೂರ್ವ ವ್ಯಕ್ತಿಯನ್ನು ಸ್ಮರಿಸಿ, ಕಂಬನಿಸುರಿಸಿ ಬೀಳ್ಕೊಟ್ಟಿತು.

ಕಾಂಚನಮಾಲೆ ತನ್ನ ಬದುಕಿನ ಅತ್ಯಂತ ಆಪ್ತವಸ್ತುವೊಂದನ್ನು ಕಳೆದುಕೊಂಡವಳಾಗಿ ಚಿಂತೆಗೀಡಾದಳು ವಾದದಿಂದಲಲ್ಲವಾದರೂ ಪ್ರಾಮಾಣಿಕತೆಯಿಂದ, ಸತ್ಯ, ನಿಷ್ಠೆಗಳಿಂದ ಅವಳ ಅನೇಕ ಸಂಶಯ, ಆವೇಶಗಳನ್ನು ತಣಿಸಿ, ಮಿದುಗೊಳಿಸಿ, ಪಕ್ವಮಾಡಿದ ವ್ಯಕ್ತಿಯೊಬ್ಬರಿದ್ದುದಾದರೆ ಅದು ಅರುಣಾಚಲಯ್ಯನವರು ವ್ಯಕ್ತಿಯಾಗಿಯೂ, ಪ್ರಧಾನಿಯಾಗಿಯೂ ಅವರು ದೇಶವನ್ನು ನಡೆಯಿಸಿಕೊಂಡು ಹೋದ ಬಗೆ ಅಷ್ಟೇ ಉದಾರವಾಗಿತ್ತು ಆಡಂಬರವಿಲ್ಲದೆ, ದುಂದುಗಾರಿಕ

ಯಿಲ್ಲದೆ, ಆರ್ಥಿಕ ಹಾನಿಗೆ ಎಡೆಕೊಡದೆ ನಾಡನ್ನು- ಮೇಲು ಹೆಜ್ಜೆಯಲ್ಲಾದರೂ ಸಮನಾದ ಹೆಜ್ಜೆಯಲ್ಲಿ ನಡೆಯಿಸಿಕೊಂಡು ಹೋದ ಪ್ರಬುದ್ಧನಾತ ಅವಳ, ಅವರ ಸ್ನೇಹಸಂಬಂಧ ತಂದೆ ಮಕ್ಕಳಷ್ಟು ಪಕ್ಕಾಗಿ ಬೆಳೆದಿತ್ತು. ಈ ಸಾವಿನ ನೋವು ಅವಳ ಹೃದಯದಿಂದ ಸುಲಭದಿಂದ ಅಳಿಯದು. ಅಷ್ಟೇ ಉದ್ವೇಗ, ಕೋಪಗಳು ನಡೆದ ಅಪಘಾತದ ವಿಷಯದಲ್ಲಿ ಉಂಟಾಗಿತ್ತು ಅವಳ ಅಂತಃಸಾಕ್ಷಿ "ಇದು ಆಕಸ್ಮಿಕವಲ್ಲ, ಅಪಘಡನಲ್ಲ, ಬುದ್ಧಿಪೂರ್ವಕ ಮಾಡಿದ ಕೊಲೆ" ಎಂದು ಹೇಳುತ್ತಿದೆ ಅದರಿಂದಲೇ ಇಂಥ ತಳಮಳ, ಬಾಯಿ ತೆರೆದು ಹೇಳಲಾರದ ರೋಷ, ಅಪಘಡ ನಡೆದ ಆಯಕಟ್ಟಿನ ಜಾಗ, ಉರುಳಿದ ಬಂಡೆ–ಇವೆಲ್ಲ ಅವಳಲ್ಲಿ ಅನುಮಾನ ಹುಟ್ಟಿಸಿವೆ ಅವಳು ಕಾವಲಿಗಿರಿಸಿದ ಪೋಲೀಸು ಅಧಿಕಾರಿಯು ಗುಪ್ತ ವರದಿಯಿಂದ ಆ ಬಂಡೆಯನ್ನು ಉರುಳಿಸುವುದಕ್ಕೆ ಸಾಧನಗಳನ್ನು ಬಳಸಿದ ಗುರುತಿತ್ತೆಂದೂ ತಿಳಿಯುತ್ತದೆ. ಮೋಟರು ಬಿರಿದು ನಿಲ್ಲುವ ಬದಲು, ಪ್ರಪಾತಕ್ಕೆ ಧುಮುಕಿದ್ದು ಹೇಗೆ–ಎಂಬ ಅನುಮಾನವಿತ್ತು ಮೋಟರು ತಿರುಗಿದ ತಾವಿನಲ್ಲಿ ನೆಲದ ಮೇಲೆ ನೀಳವಾದ ಆಣಿಗಳು ಬಿದ್ದಿದ್ದುವಂತೆ. ಅವುಗಳಿಂದ ಟಯರು ತೂತಾಗಿ ಆಕಡೆ ತಿರುಗುವುದಕ್ಕೂ ಕಾರಣವಾಗಿರಬೇಕು. ಆದರೆ ಪ್ರತ್ಯಕ್ಷ ಸಾಕ್ಷಿಗಳಾರು? ಮೋಟರು ನಡೆಯಿಸಿದ ಡ್ರೈವರು ನಂಬೀಶನೊಬ್ಬನೇ ಆತನೀಗ ವಿಸ್ಮೃತ ಸ್ಥಿತಿಯಲ್ಲಿ ಭೀಮನೂರ ಆಸ್ಪತ್ರೆಯಲ್ಲಿ ಮಲಗಿದ್ದಾನೆ ಅವಳು ಗಳಿಗೆ ಗಳಿಗೆಗೂ ಫೋನ್ ಮೂಲಕ ವಾರ್ತೆ ತರಿಸಿಕೊಳ್ಳುತ್ತಿದ್ದಾಳೆ ಅವನ ಸ್ಥಿತಿ ಹಾಗೆಯೇ ಇದೆ. ಮನಸ್ಸು ತಡೆಯದ್ದಕ್ಕೆ ಆಕೆ ಮರು ಸಂಜೆಯೊಳಗೆ ಭೀಮನೂರು ಸೇರಿ ಅವನ ಹಾಸುಗೆಯ ಬಳಿ ಹೋಗಿ ನಿಂತಳು. ಮೊದಲ ಬಾರಿಗೆ ಎಂಬಂತೆ ಆತ ಭಯಭೀತ ನಯನಗಳಿಂದ ಅವಳನ್ನು ನೋಡಿದ, ಚೀರಿದ, ತಿರುಗಿ ವಿಸ್ಮೃತಿ ಬಂತು. ಆ ವಿಸ್ಮೃತಿಯಿಂದ ಅವನು ತಿರುಗಿ ಚೇತರಿಸಲಿಲ್ಲ. ಅಂದೇ ಅವನ ಕೊನೆಯಾಯಿತು. ಹೇಳುವ ಒಂದು ಗಂಟಲು ಹೀಗೆ ಮುಚ್ಚಿಕೊಂಡಿತು. ಆಕೆ ಅವನ ಉಡುಗೆ ತರಿಸಿಕೊಂಡು ಅದರಲ್ಲೇನಾದರೂ ಕಾಗದ ಪತ್ರಿಕೆಗಳಿವೆಯೇ ಎಂದು ನೋಡಿದಳು. ಶವದ ಮಹಜರು ನಡೆಯಿಸಿ ಅದನ್ನು ವಿಕ್ರಮ

ನಗರದಲ್ಲಿರುವ ತಾಯಿಯ ಬಳಿಗೊಯ್ದು, ಅವಳಿಗೆ ಹೇಳುವ ಸಮಾಧಾನ ಹೇಳಿ, ಅಂತ್ಯಕ್ರಿಯೆಗೆ ನೆರವಾದುದಾಯಿತು

ತಾಯಿಯ ಬಳಿಗೆ ಶವವನ್ನು ಒಯ್ದಾಗ ಆಕೆಗೆ ಈ ವಿಷಯದಲ್ಲಿ ಎಷ್ಟು ಸಂತಾಪ ತುಂಬಿತ್ತೋ, ಅವಳ ಮಗನ ವಿಷಯದಲ್ಲಿ ಅಷ್ಟೇ ಸಂಶಯವೂ ತುಂಬಿತ್ತು ಆ ಮನೆಯನ್ನು ಹೊಕ್ಕಾಗ, ಗೋಡೆಯಲ್ಲಿ ಕಾಣಿಸಿದ ಸೋವಿಯಟ್ ಧುರೀಣರ ಚಿತ್ರ ಅವಳನ್ನು ಬೆರಗುಗೊಳಿಸಿತು ಅರುಣಾಚಲಯ್ಯನವರ ನೆಚ್ಚಿನ ಈ ಸೇವಕ 'ಗುಲಾಲಿ ಪಡೆಯವನೇ' ಎಂಬ ಅನುಮಾನವಾಯಿತು ಮುಂದೆ-ಅಷ್ಟು ನಿಜವೆಂಬ ಪುರಾವೆಗಳು ದೊರಕಿದವು ಆದರೆ ಅವಘಡದ ಕಾರಣ ಇನ್ನೂ ಅಸ್ಪಷ್ಟ. ಪೋಲೀಸು ವರದಿಯಿಂದ, ಮೋಟರು ತಜ್ಞರ ವರದಿಯಿಂದ ಟಾಯರು ತೂತಾಗಿ, ಬ್ರೇಕ್ ಹಿಡಿದಾಗ ಬಂಡಿ ತಿರುವಿ ಮಗುಚಿಕೊಂಡಿತು-ಎಂದಿಷ್ಟು ತಿಳಿದುಬಂದಿತು.

ಈ ಚಿಂತೆ ಕೊರೆಯುತ್ತಿರುವಾಗಲೇ, ರಾಜಕೀಯದ ಚಿಂತೆಯೊಂದು ಇದೆಯಲ್ಲ. ಪ್ರಧಾನಿ ಮೃತನಾಗಿ, ಮಂತ್ರಿಮಂಡಳದ ವ್ಯಾಪ್ತಿ ನಿಂತು, ಹೊಸ ಮಂಡಳ ನಿರ್ಮಾಣವಾಗಬೇಕು ಅವಸರದಿಂದ ಜನವಾದಿ ಪ್ರಮುಖರು ಕುಳಿತು ವಿಚಾರಮಾಡಿದರು. ಉಳಿದವರಲ್ಲಿ ತಿರುಮೂರ್ತಿ ಸಾಕಷ್ಟು ವರ್ಚಸ್ವಿಯಾದ ವ್ಯಕ್ತಿ ಕಾಂಚನಮಾಲೆಯ ವಿಚಾರದಲ್ಲಿ ಆತನಿಗೆ ಅರುಣಾಚಲಯ್ಯನವರು ಇರಿಸಿದ ವಿಶ್ವಾಸವಿಲ್ಲ. ನ್ಯಾಯಕ್ಕೂ ಪಕ್ಷದಲ್ಲಿ ನಾಯಕತ್ವ ಸಲ್ಲಬೇಕಾದುದು ಕಾಂಚನಮಾಲೆಗಾದರೂ-ಆಕೆ ಸ್ಪಷ್ಟ ಧ್ಯೇಯವಿಲ್ಲದವಳು, ಹೆಂಗುಸು, ಎಂಬುದರಿಂದ ತಿರುಮೂರ್ತಿ ಅವಳನ್ನಾರಿಸಲು ವಿರೋಧಿ ಅರುಣಾಚಲಯ್ಯನವರು ಇದ್ದಾಗ ಕಾಣಿಸದ ಒಡಕುಗಳು, ಅಧಿಕಾರದ ಲಾಲಸೆಯಿಂದ ಈಗ ತಲೆದೋರುವಂತೆ ಕಂಡಿತು ಕಾಂಚನಮಾಲೆಯ ಮನಸ್ಸನ್ನು ಪ್ರಧಾನಿಯ ಸಾವು, ಅದರ ಹಿಂದಿನ ಸಂಶಯಗಳು ಕಾಡುತ್ತಿದ್ದುವಾದುದರಿಂದ, ತಾನಾಗಿಯೇ ಆಕೆ ಮುಂದಾಳುತನ ಬೇಡಿ ಹೋಗಲಿಲ್ಲ. ಇತ್ತ ಜನವಾದಿ ಪಕ್ಷ ಸಂಪೂರ್ಣ ಬಹುಮತ ಪಡೆದುದಲ್ಲ. ಸ್ವತಂತ್ರರ ಸಹಾಯ ಅದಕ್ಕೆ ಅನಿವಾರ್ಯ. ಅದನ್ನು ಗಳಿಸಬಲ್ಲವಳು ಕಾಂಚನಮಾಲೆಯೊಬ್ಬಳೇ. ಇಲ್ಲದೆ ಹೋದರೆ ಈ ಸಂದರ್ಭ ನಷ್ಟವಾಗು

ತ್ತದೆ-ಹೀಗಿದ್ದುದರಿಂದ ತಿರುಮೂರ್ತಿ ಮನಸ್ಸಿಲ್ಲದೆಯೂ ಅವಳ ನಾಯಕತ್ವ ಒಪ್ಪಿಕೊಳ್ಳಬೇಕಾಯಿತು. ಅನಂತರ ರಾಜಪ್ರಮುಖರಿಂದ ಕರೆ ಬಂದಿತು ಕರೆಗೆ ತಟ್ಟನೆ ಪ್ರತ್ಯುತ್ತರ ಕೊಡುವ ಸ್ಥಿತಿ, ಧೈರ್ಯ ಅವಳಿಗಿಲ್ಲದುದರಿಂದ, ನಾಲ್ಕು ದಿನಗಳ ಅವಕಾಶವನ್ನು ಬೇಡಿಕೊಂಡು ಬಂದಳು

ಈತನಕ ಅವರಿಗೆ ಬೆಂಬಲಕೊಟ್ಟ ಸ್ವತಂತ್ರ ಸದಸ್ಯರು ಮುಂದೆಯೂ ಬೆಂಬಲ ಕೊಡುವುದಕ್ಕೆ ಅಧಿಕಾರದ ಬೆಲೆ ಕೇಳಿದರು. ಬಹು ಮಟ್ಟಿಗೆ ಮತ್ತೊಂದು ಚುನಾವಣೆಯ ಅನಿಷ್ಟ ಅವಳ ಪಾಲಿಗೊದಗಿತು ಈ ವೇಳೆಯಲ್ಲಿ ಸೇತುರಾಯ ಸಖ್ಯದ ಬಯಕೆಯಿಂದ ಅವಳ ಬಳಿಗೆ ಧಾವಿಸಿ ಬಂದ. ತಮ್ಮೆರಡು ಪಂಗಡಗಳು ಉಭಯತರು ಒಪ್ಪಿದ ತೀರ್ಮಾನ, ಧೋರಣೆಗಳನ್ನು ನಡೆಯಿಸಿಕೊಂಡು ಹೋಗಬಹುದು ಎಂಬುದಾಗಿ ಬೋಧನೆ ಮಾಡಿದ

"ಅದು ಅರುಣಾಚಲಯ್ಯನವರ ಆತ್ಮಕ್ಕೆ ತೃಪ್ತಿಯಾಗದ ಕೆಲಸ" ಎಂದಳು ಈಕೆ

"ನೀವಷ್ಟು ಭಾವ ಪ . ವಶರೇ ? ಜನವಾದಿಗಳ ನಾಯಕರಾಗಿ ದೇಶವಾದಿಗಳ ಇದಿರಿಗೆ ಕಾದಾಡುವಂಥ ಯೋಗ್ಯತೆ ಅರುಣಾಚಲಯ್ಯರೊಬ್ಬರಿಗೇ ಇದ್ದದ್ದು ಈಗ ವಾಮನರಾಯನ ಕೈಯು ತಿರುಗಿ ಬಲವಾಗಿದೆ. ಆತ ನಿಮ್ಮ ಜನಗಳನ್ನು ಒಲಿಸಿ ಒಡಕು ತರುವ ಪ್ರಯತ್ನ ಮಾಡುತ್ತಿದ್ದಾನೆ ಅವನ್ನು ತಡೆಯಲು ಇದೊಂದೇ ಉಪಾಯವಲ್ಲವೇ" ಎಂಬುದಾಗಿ ಕೇಳಿದ ದೇಶವಾದಿಗಳಿಂದ ಪ್ರತ್ಯಕ್ಷ ವಿರೋಧವಿದೆ ಸ್ವಜನರು ಆಚೆಯೂ, ಈಚೆಯೂ ಓಲಾಡುವ ಸ್ಥಿತಿ ಕಾಣುತ್ತಿದೆ ಆದರೂ ವಾಮ ಪಂಗಡವನ್ನು ಬಿಟ್ಟು ಮಧ್ಯವರ್ತಿ ದಾರಿಯಿದೆಯೇ ಎಂದು ಯೋಚಿಸಿ ಆಕೆ ಕಂಗಾಲಾದಳು ವಾಮನರಾಯ, ಸ್ವತಂತ್ರರನ್ನು ಸಮಯ ಸಾಧಿಸಿ ತನ್ನ ಬಲೆಗೆಳೆದುಕೊಂಡ ಅವಳ ಪಾಲಿಗ ಉಳಿದುದು ಶ್ರಮವಾದಿಗಳ ಅಪ್ರಿಯ ಬಾಂಧವ್ಯ, ಇಲ್ಲವೆ ಮರುಚುನಾವಣೆ ಚುನಾವಣೆಯ ಭವಿಷ್ಯ ಹೇಳುವುದಕ್ಕಿಲ್ಲ ಬದಲು ಈಗ ತೊಡಗಿದ ಕೆಲಸವನ್ನು ಒಂದು ಗುರಿಗೆ ಮುಟ್ಟಿಸುವ ಹಂಬಲ ಬಹಳ. ಅವರಲ್ಲಿಯೂ ಅರುಣಾಚಲಯ್ಯನವರು ಹಾಕಿಕೊಟ್ಟ ಕೆಲ

ವೊಂದು ದಾರಿಗಳನ್ನು ಪೂರ್ಣ ಪ್ರಯೋಗ ಮಾಡಿ ನೋಡುವ ಹಟ. ಅದಕ್ಕಾಗಿ ಸ್ವಪಕ್ಷದ ಜನಗಳನ್ನು ಕರೆಯಿಸಿಕೊಂಡಳು ತನಗೆ ತುಂಬ ಸಹಕಾರಿಯಾಗಿದ್ದ ರಾಮದಾಸನನ್ನು ಕರೆದು ಪರಿಸ್ಥಿತಿಯನ್ನು ಕುರಿತು ವಿವರಿಸಿ 'ಇನ್ನೆರಡು ವರ್ಷಕಾಲ ಹೀಗೆಯೆ ತಳ್ಳುವುದು ಒಳ್ಳೆಯ ದಲ್ಲವೇ ?' ಎಂದು ಕೇಳಿದಳು

"ನೀವೂ ಹಾಗೆನ್ನುತ್ತೀರಾ! ಎಷ್ಟಕ್ಕೂ ವಾಮ ಪಕ್ಷದವರ ಸಹವಾಸ ಬೇಡವೆಂಬುದು ಅವರ ಧೋರಣೆಯಾಗಿತ್ತು. ಅದನ್ನು ಮರೆತಿರಾ ?"

"ಎರಡು ಕೇಡುಗಳ ನಡುವೆ ಕಡಿಮೆ ಕೇಡಿನ ದಾರಿ ಯಾವುದು ?"

"ಯಾವುದು ? ಸೇತುರಾಯನ ಸ್ನೇಹವೇ ?"

"ಅಹುದು, ಇಲ್ಲದಿದ್ದರೆ ಮರು ಚುನಾವಣೆಯೇ ಗತಿ ನಮ್ಮ ಕೈಕೊಂಡ ಕಾರ್ಯ ಯೋಜನೆಗಳನ್ನು ಅವರು ಒಪ್ಪಿಕೊಂಡರೆ ಯಾಕಾಗಬಾರದು ? ಅವರ ತೂಕವೂ ಸಂಪೂರ್ಣವಾಗಿ ತಿಳಿಯುತ್ತದೆ ಇಲ್ಲದೆ ಹೋದರೆ ಅಹಂಕಾರದಿಂದ ಇನ್ನೊಂದು ಚುನಾವಣೆ ಯನ್ನು ಇದಿರಿಸಬೇಕಾಗುತ್ತದೆ ಆ ಯೋಚನೆ ಬೇಡ ನಮ್ಮ ಜನಕ್ಕೆ ನಿಜಕ್ಕೂ ಪಕ್ಷಗಳ ಧ್ಯೇಯ ತಿಳಿಯುತ್ತಲಿಲ್ಲ. ಉಳಿದ ಪ್ರಾಂತ್ಯ ಗಳನ್ನು ನೋಡಿ–ಮೂರ್ತಿ ಪೂಜೆಯ ಮೇಲೆ ದೇಶವಾದಿಗಳ ಪ್ರಭಾವ ನಡೆದಿದೆ ಅರುಣಾಚಲಯ್ಯನವರಿದ್ದಾಗ ಅಂಥ ಮೂರ್ತಿಯ ಲಾಭ ನಮಗಿತ್ತು, ಈಗ ಅವರಿಲ್ಲ ನಮ್ಮ ಯೋಗ್ಯತೆ ಅವರಿಗೆ ಸಮನಲ್ಲ ನಮ್ಮ ಕಾಲಿನ ಮೇಲೆ ನಿಲ್ಲುವ ಕೆಲಸ ಅಷ್ಟು ಸುಲಭವಲ್ಲ ಇನ್ನೆರಡು ವರ್ಷಗಳ ಕಾಲ ಅವರು ಹಾಕಿಕೊಟ್ಟ ಕೆಲಸ ಮುಗಿಸಿದೆವಾದರೆ ಜನಗಳ ಮುಂದೆ 'ಇಂಥದನ್ನು ಮಾಡಿದ್ದೇವೆ' ಎಂಬುದಕ್ಕೊಂದು ಧೈರ್ಯ. ಈಗ ಅವೆಲ್ಲ ಅರ್ಧ ಸ್ಥಿತಿಯಲ್ಲಿವೆ ಗ್ರಾಮಗಳ ಔದ್ಯೋಗೀ ಕರಣ, ಮಲೆನಾಡಿನಲ್ಲಿ ಹೊಸ ಕುಟುಂಬಗಳನ್ನು ಸ್ಥಾಪಿಸುವ ಪ್ರಯತ್ನ–ಎಲ್ಲವನ್ನೂ ತೊಡಗಿದ್ದೇವೆ. ಅವನ್ನು ಒಂದು ಹಂತ ಕ್ಕೊಯ್ದು ನಿಲ್ಲಿಸಬೇಡವೇ ?

"ಸೇತುರಾಯನನ್ನು ನಂಬುತ್ತೀರಾ ?" ಎಂದು ಕೇಳಿದ

ತಿರುಮೂರ್ತಿ.

" ಖಂಡಿತವಾಗಿಯೂ ಇಲ್ಲ "

" ಆದರೂ ನಿಮ್ಮ ಒಲ ಅವನ ಕಡೆಗೇ ಇದೆ "

" ನಿಮ್ಮ ಆರೋಪವನ್ನು ಅರ್ಧದಷ್ಟು ಒಪ್ಪಬಹುದು ಅದು ಹಿಂದೆ ನಿಜವಿತ್ತು. ಈಗ ಎಂದೂ ಇಲ್ಲ ನಾನು ಏತಕ್ಕೆ ಈ ದಾರಿಯಲ್ಲಿ ಹೋಗುತ್ತಿದ್ದೇನೆ ಎಂಬ ಸತ್ಯವನ್ನು ಈಗ ಹೇಳಲಾರೆ ನೀವು ನಂಬಿದರೂ ಸರಿಯೇ. ಬಿಟ್ಟರೂ ಸರಿಯೇ–ನನ್ನ ಅಂತರಂಗದಲ್ಲಿ ಬಚ್ಚಿಟ್ಟುಕೊಂಡ ಕೆಲವೊಂದು ರಹಸ್ಯಗಳನ್ನು ನಾನೀಗ ನಿಮ್ಮ ಮುಂದೆ ಇಡುವುದಿಲ್ಲ, ಕಾಲ ಬಂದಿಲ್ಲ. ಅವರು ತೀರಿಕೊಂಡ ನಾಲ್ಕು ದಿನ ನನಗೆ ಸರಕಾರವೂ ಬೇಡವಾಗಿತ್ತು, ಜೀವವೂ ಬೇಡವಾಗಿತ್ತು ಆದರೆ ಯಾರು ನಮ್ಮ ನಾಯಕನನ್ನು ಕೊಲ್ಲಿಸಿದರೊ ಅದರ ರಹಸ್ಯ ತಿಳಿದು ನ್ಯಾಯ ಸಲ್ಲುವ ತನಕ ಸರಕಾರದ ಸೂತ್ರವನ್ನು ನಾವು ಬಿಡಬಾರದು ಎಂಥ ರೀತಿಯಿಂದಲೂ ಇರಿಸಿಕೊಳ್ಳಬೇಕು ಅದು ಆಕಸ್ಮಿಕ ಅಪಘಾತವಲ್ಲ, ಉದ್ದೇಶ ಪೂರ್ವಕವಾಗಿ ನಡೆದ ಕೊಲೆ. ಎಡ ಬಲಗಳ ಚಿಂತೆ ಬಿಟ್ಟು ಆ ಒಂದು ಕಾರಣಕ್ಕಾದರೂ ನಿಮ್ಮ ಸಹಕಾರ, ಸಹಾಯ ಬೇಡುತ್ತೇನೆ. 'ಇಲ್ಲ' ಎನ್ನಬೇಡಿ ಆ ಒಂದು ಕೆಲಸ ಮುಗಿದ ಮೇಲೆ ಈ ನಾಯಕತ್ವವನ್ನಲ್ಲ, ಗೊಂಡಾರಣ್ಯವೇ ಬಿಟ್ಟು ಹೋಗು ಎಂದರೆ ಹೋಗುತ್ತೇನೆ."

ಅವಳ ಮಾತು, ಧ್ವನಿ, ಭಾವೋದ್ವೇಗ, ಅಂತರಂಗದ ಯಾವುದೋ ಪ್ರಾಮಾಣಿಕ ನೋವನ್ನು ಹೊರಡಿಸುತ್ತಿದೆಯೆಂದು ಅವರೆಲ್ಲರಿಗೂ ಕಾಣಿಸಿತು ಪ್ರತಿಯೊಬ್ಬರಲ್ಲಿಯೂ ತಮ್ಮ ನಾಯಕನ ದುರ್ಮರಣವನ್ನು ಕುರಿತಾದ ಯೋಚನೆ ಹುಟ್ಟಿಸಿತು ಅದು ಖಾಸಗಿ ಸಭೆ, "ವಾಮನರಾಯರು ಹಾಗೆ ಮಾಡಿಸಿದರು ಅನ್ನುತ್ತೀರಾ ?" ಎಂದು ಕೇಳಿದರು ಒಬ್ಬರು

" ಪೂರ್ಣ ತಿಳಿಯುವತನಕ ಹೇಗೆ ಹೇಳಲಿ ? ಪೋಲೀಸರ ವರದಿಯಂತೆ ಅದು ಬರಿಯ ಅಪಘಾತ" ಎಂದಂದು ಸುಮ್ಮನಾದಳು ವಾಮನರಾಯನ ಕೀರ್ತಿ ಅಂಥ ಸಂಶಯಕ್ಕೆ ಎಡೆಕೊಟ್ಟುದು ನಿಜವೆ ಅದು ಕೊಲೆ ನಿಜವಾದಲ್ಲಿ ಜನವಾದಿಗಳಾದ ತಮ್ಮಲ್ಲಿ ಅನೇಕರಿಗೆ

ಕಠಿಣ ದಿನಗಳು ಇದಿರು ಕಾದಿವೆ–ಎಂದು ಹೊಳೆಯಿತು. ಆಕೆಯ ಮಾತು ಕಪಟ, ಸ್ವಾರ್ಥಗಳೆರಡರಿಂದಲೂ ಕೂಡಿಲ್ಲವೆಂದು ತಿರು ಮೂರ್ತಿಗೂ ಅನಿಸಿತು ಆತ ಧಾರಾಳ ಮನಸ್ಸು ಮಾಡಿ "ಆಗಲಿ, ನಿಮ್ಮನ್ನು ನಾಯಕರನ್ನಾಗಿ ಮಾಡಿದ್ದೇವೆ ನಾವಿರಿಸಿದ ನಂಬಿಕೆ ಯನ್ನು ಕಾಯುವ ಇಲ್ಲವೆ ಮುರಿಯುವ ಭಾರ ನಿಮ್ಮದೇ ಮರು ಚುನಾವಣೆಯ ದಿನ ದೂರ ಹೋಗುವುದು ಒಳ್ಳೆಯದು" ಎಂದು ಉತ್ತರಿಸಿದ ಅಲ್ಲಿಂದ–ಇನ್ನೊಮ್ಮೆ ಸೇತುರಾಯನ ಕರೆ ಬಂದರೆ ಒಪ್ಪಿ, ಒಂದೆರಡು ಮಂತ್ರಿ ಸ್ಥಾನಗಳನ್ನು ಶ್ರಮವಾದಿಗಳಿಗೆ ಕೊಟ್ಟು, ತಾತ್ಕಾಲಿಕ ಸ್ನೇಹ ನಡೆಯಿಸಿ ನೋಡಬಹುದೆಂಬ ತೀರ್ಮಾನ ವಾಯಿತು

ಅವಸರದಲ್ಲಿ ಕಾಂಚನಮಾಲೆ ಸೇತುರಾಯನ ಬಳಿಗೆ ಜನ ಕಳು ಹಿಸಲಿಲ್ಲ, ಅವನೇ ಬರಲೆಂದು ಆಸೆ ಮಾಡಿದಳು. ಅವಳ ಮನಸ್ಸು ಇನ್ನೂ ಅಪಘಾತದ ವಿಷಯದಲ್ಲಿಯೇ ಲೀನವಾಗಿತ್ತು ಸಿ ಐ.ಡಿ ಗಳನ್ನು ಆಕೆ ಅನ್ವೇಷಣೆಗೆ ತೊಡಗಿಸಿ ಕುಳಿತಿದ್ದಳು ಅರುಣಾ ಚಲಯ್ಯನವರನ್ನು ಕುರಿತು ದಿನಂದಿನ ಪತ್ರಿಕೆಗಳಲ್ಲಿ ಬರುವ ಟೀಕೆ ಟಿಪ್ಪಣಿಗಳನ್ನು ಓದಿ ತಿಳಿಯುತ್ತಿದ್ದಳು. ಒಂದು ದಿನ ಶ್ರಮವಾದಿಗಳ "ಚೆಂಗುಲಾಬಿ" ಪತ್ರಿಕೆಯಲ್ಲಿ ಮಡಿದ ಡ್ರೈವರ್ ನಂಬೀಶನ ವಿಚಾರ ದಲ್ಲಿ ಒಂದು ಮಾತು ಕಾಣಿಸಿತು "ನಂಬೀಶನು ಅಪಘಾತಕ್ಕೆ ತುತ್ತಾಗಿ ಜೀವದಾನ ಮಾಡಿದರೂ ಅವನ ಕುಟುಂಬ ರಕ್ಷಣೆಯ ಹೊರೆಯನ್ನು ಎಲ್ಲರೂ ಮರೆತಂತಿದೆ" ಎಂಬ ಬರಹ ಬಂದಿತು ನಾಲ್ಕಾರು ದಿನಗಳ ಬಳಿಕ, ಇನ್ನಷ್ಟು ಸುದ್ದಿ ಬಂದಿತು ಆ ಪತ್ರಿಕೆ ನಂಬೀಶನ ಬಡ ತಾಯಿಯ ವಿಚಾರದಲ್ಲಿ ಸಹಾನುಭೂತಿ ವ್ಯಕ್ತಮಾಡಿ ಅದರ ಜತೆಗೆ "ಆತನಿಗೆ ಮದುವೆ ಗೊತ್ತಾಗಿತ್ತು, ಅವನ ಪ್ರೇಯಸಿ ಸರೋಜ ಇದೇ ನಗರದವಳು" ಎಂದು ಉಲ್ಲೇಖ ಮಾಡಿ, ಅವಳ ಬಗ್ಗೆಯೂ ಸಂತಾಪದ ಮಾತುಗಳಿದ್ದುವು ಕಾಂಚನಮಾಲೆ ಆ ಸುದ್ದಿಯನ್ನು ಹಿಂಬಾಲಿಸಿ, ಅವಳು ಯಾರೆಂಬುದನ್ನು ಗೊತ್ತು ಮಾಡಿದಳು ಸಂತಾಪ ವ್ಯಕ್ತ ಮಾಡಲು ತಾನೇ ಅವಳ ಮನೆಗೆ ಹೋದಳು. ಹೋಗಿ ಅಲ್ಲಿ "ಲಗ್ನಕ್ಕೆ ಮುಂಚಿತವಾಗಿ ಹೀಗಾದುದು ದೈವ ಸಂಕಲ್ಪ 'ಗಂಡ

ವಾದರೆ. ." ಎಂದಾಗ ಆಕೆ ವಿಚಿತ್ರ ರೀತಿಯಲ್ಲಿ ಅಳತೊಡಗಿದಳು ಅವಳ ಮುಖ, ಮೈಗಳು ಕಾಂಚನಮಾಲೆಯ ಕುತೂಹಲವನ್ನು ಕೆರಳಿಸಿದುವು ಆಕೆ ಗರ್ಭಿಣಿಯೆಂಬುದು ತಿಳಿಯಿತು, ಇದರಿಂದ ಸಹಾನುಭೂತಿ ಹೆಚ್ಚಿ ಅವಳನ್ನು ತನ್ನ ಮನೆಗೇ ಕರೆದು ತಂದು ಧೈರ್ಯ ಹೇಳಿದಳು "ನಾಳೆ ಕಷ್ಟ ಬಾರದಂತೆ ನೋಡಿಕೊಳ್ಳುತ್ತೇನೆ" ಎಂದು ಧೈರ್ಯ ಕೊಟ್ಟಳು ಅಲ್ಲಿದ್ದ ಕೆಲವು ದಿನ ಅವಳಿಂದ ನಂಬೀಶನ ಮತ್ತು ಅವಳ ಪ್ರಣಯ ಪ್ರಕರಣವನ್ನೆಲ್ಲ ತಿಳಿಯುವುದು ಸಾಧ್ಯವಾಯಿತು ಸರೋಜ ಒಮ್ಮೆ ತನ್ನ ದುಃಖ ಭರದಲ್ಲಿ "ಅವರು ಹೀಗೆ ಮೋಸಮಾಡಿ ಸಾಯುತ್ತಾರೆಂದು ನನಗೆ ಗೊತ್ತೇ 'ನೋಡು ದಿನ ಕಾದಿರು ಒಂದು ದಿನ ಅತಿ ದೊಡ್ಡ ಕೆಲಸ ಮಾಡುತ್ತೇನೆ' ಎಂದು ಹೇಳಿಹೋದರು. ಮಾಡಿದ್ದು ಇದನ್ನು. ಮದುವೆಯಾಗಲು ಇಷ್ಟವಿಲ್ಲದಿದ್ದರೆ ಹೀಗೆ ವಂಚಿಸಿ ಹೋಗಬಾರದಿತ್ತು" ಎಂದಳು ಈ ಮಾತು ಕಾಂಚನಮಾಲೆಯನ್ನು ಇನ್ನಷ್ಟು ಬೆರಗುಗೊಳಿಸಿತು ನಂಬೀಶಗೆ ತನ್ನ ಸಾವಿನ ದಿನ ಗೊತ್ತಿದ್ದಂತೆ ಅನಿಸಿತು ಅವಳ ಮನಸ್ಸಿಗೆ ಅವನ ಕಾರ್ಯ ಆತ್ಮಹತ್ಯವಲ್ಲ, ತನ್ನ ಗುರುವಿನ ಕೊಲೆ ಎಂದು ತೋರ ತೊಡಗಿತು ಸ್ವಲ್ಪ ಸಮಯದಲ್ಲಿ ನಂಬೀಶಗೆ ಎರಡು ಹೆಸರುಗಳಿದ್ದುದೂ, ಆ ಇನ್ನೊಂದು ಹೆಸರಿನಲ್ಲಿ ಆತ ಭ್ರಮವಾದಿಗಳ ಆಪ್ತಕೂಟದವನಾಗಿದ್ದುದೂ ತಿಳಿಯಿತು

ಅವಳೊಂದು ದಿನ ಮನೆ ಬಿಟ್ಟು ಹೊರಗೆ ಹೋದಾಗ, ಸರೋಜಳ ತಂದೆ ಬಂದು ಮಗಳನ್ನು ಮರಳಿ ಒಯ್ದೂ ಆಗಿತ್ತು ತಂದೆ ಮಕ್ಕಳಿಬ್ಬರೂ ಗೊಂಡಾರಣ್ಯದಿಂದ ಕಣ್ಮರೆಯಾದುದೂ ಆಯಿತು. ಇವೆಲ್ಲವುಗಳಿಂದ ಕಾಂಚನಮಾಲೆಯ ಮನಸ್ಸಿನಲ್ಲಿ ಒಂದು ನಿಶ್ಚಯಬುದ್ಧಿಯು ಹುಟ್ಟಿತು ಹಿಂದಿನಿಂದಲೂ ಅವಳಲ್ಲಿ ಮೂಡಿ ಕಣ್ಮುಚ್ಚಾಲೆಯಾಡುತ್ತಿದ್ದ ಸಾಹಸ ಪ್ರವೃತ್ತಿ, ಈಗ ಸೇಡಿನ ರೂಪ ತಾಳಿತು 'ಮುಳ್ಳಿಂದ ಮುಳ್ಳನ್ನು ಕೀಳುತ್ತೇನೆ' ಎಂದುಕೊಂಡಳು ತನ್ನಷ್ಟಕ್ಕೆ ಅವಳೀಗ ಉಗ್ರ ಚಾಮುಂಡಿಯಂತೆ ಕೆರಳಿದ್ದಾಳೆ, ವ್ಯಾಘ್ರ ಸೌಂದರ್ಯ ತಾಳಿದ್ದಾಳೆ ಹೃದಯದಲ್ಲಿ ಹೆಚ್ಚಿನ ಸೇಡಿನ ದಳ್ಳುರಿ ಉರಿಯುತ್ತಿದೆ: "ಅರುಣಾಚಲಯ್ಯ ನನಗೆ ತಂದೆ, ನಾನೇ ದತ್ತು

ಕೊಂಡ ತಂದೆ ಆ ತಂದೆಗೆ ಸಮನಾದ ರಕ್ತತರ್ಪಣ ಕೊಡುವ ತನಕ ನಾನು ತೃಪ್ತಳಲ್ಲ" ಎಂಬ ಧೃಡನಿಶ್ಚಯ ಅವಳಲ್ಲಿ ಮೂಡಿತು

ಮೊದಲಿನ ಈ ದಿನಗಳಲ್ಲಿ ಅವಳ ಸ್ವಂತ ಸ್ಥಿತಿ ಹೇಗಿದ್ದರೂ, ಮೃತ್ಯುವಾರ್ತೆಯನ್ನು ಕೇಳಿ ಬಂದ ಅರುಣಾಚಲಯ್ಯನವರ ಮಗನ ಬಳಿಗೇ ಸೊಸೆಯು ಬಳಿಗೆ ನಿತ್ಯವೂ ಹತ್ತು ನಿಮಿಷಕಾಲ ಹೋಗಿ ಬರುತ್ತ, ಅವರ ದುಃಖಕ್ಕೆ ಸಮಾಧಾನ ಹೇಳುತ್ತಾ ಅವರ ಕಂಬನಿಗೆ ತನ್ನ ಕಂಬನಿ ಸೇರಿಸುತ್ತಾ ಬರುತ್ತಿದ್ದಳು

ಅವಳ ಮನಸ್ಸಿನ ದಾರಿ ನಿಶ್ಚಯಕ್ಕೆ ಬಂದ ದಿನ, ರಾಜಕೀಯಕ್ಕಿಂತ ಸೇಡು ಅಧಿಕವೆನಿಸಿದ ದಿನ, ತಾನಾಗಿ ಸೇತುರಾಯನಿಗೆ ಹೇಳಿ ಕಳುಹಿಸಿದಳು ಆತ ಅರಳಿದ ಮುಖದಿಂದಲೇ ಬಂದ ಒಮ್ಮೆ ಅಧಿಕಾರಕ್ಕೆ ಬಂದುದಾದರೆ ತನ್ನ ಬೇರನ್ನು ಭದ್ರವಾಗಿ ಇಳಿಸುವ ಯೋಚನೆ ಮಾಡಿದ ಆತ ಚತುರನೇ ! " ಈ ಒಂದೆರಡು ವರ್ಷಗಳ ಆಡಳಿತೆಯಲ್ಲಿ ನಿಮ್ಮ ಧೋರಣೆಯನ್ನು ಬದಲಿಸಬೇಕಿಲ್ಲ, 'ಕೃಷಿಕರ ಮತ್ತು ಶ್ರಮಗಾರರ ಆರ್ಥಿಕ ಜೀವನ ಉತ್ತಮಗೊಳಿಸುತ್ತೇವೆ' ಎಂದು ಸಾರಿದರೆ ಸಾಕು" ಎಂದು ಪ್ರೇರಿಸಿದ ಆತನಿಗೆ, ಕಾಂಚನ ಮಾಲೆಯನ್ನು ಕ್ರಮೇಣ ಒಲಿಸಿ, ಜನವಾದಿ ಪಕ್ಷವನ್ನು ಒಡೆದು, ಗೆಲ್ಲಬಹುದೆಂಬ ಆತ್ಮವಿಶ್ವಾಸವಿದ್ದುದರಿಂದ ಹಾಗೆ ಮಾಡಿದ ಅವನ ಪಕ್ಷದಿಂದ ಲಾಲಚಂದ, ಸುನೀತ ಎಂಬಿಬ್ಬರನ್ನು ಮಂತ್ರಿಪದಕ್ಕೆ ಕೊಳ್ಳುವ ಶರ್ತದ ಮೇಲೆ ಸಂಧಾನವಾಯಿತು ಇತರ ಯಾವ ಶರ್ತಗಳೂ ಬಾರಧುದರಿಂದ ಜನವಾದಿ ಸದಸ್ಯರಿಗೆ ಆ ಗಳಿಗೆಯಲ್ಲಿ ಹೆಚ್ಚಿನ ಅಚ್ಚರಿ ಕಾಣಲಿಲ್ಲ. ಹೀಗೇ ಮಂತ್ರಿ ಸಂಪುಟವನ್ನು ಬೆಳೆಯಿಸಿ, ಕಾರ್ಯ ಜರಗಿಸುವುದಾಗಿ ತಿಳಿಸಲು ಆಕೆ ರಾಜ ಪ್ರಮುಖನಲ್ಲಿಗೆ ಹೋದಳು

ಮೊದಲೊಮ್ಮೆ ಅವಳು ಅಲ್ಲಿಗೆ ಹೋದದ್ದು ವಾಮನರಾಯನಿಗೆ ತಿಳಿಯದು ಬೇಕಾದಾಗ ಹೋಗಿ ಬರುವಂಥ ಸೌಕರ್ಯವಿದ್ದವಳು ಅವಳು ಎರಡನೆಯ ಬಾರಿ ಹೋದುದು ಅವನಿಗೆ ತಿಳಿಯುವಾಗ, ಮಂತ್ರಿ ಮಂಡಳದ ಹೆಸರನ್ನು ಸಾರಿಯೂ ಆಗಿತ್ತು ಆತನಿಗೆ ಈಗ ತುಂಬ ಗಾಬರಿ. " ಈ ಜನವಾದಿಗಳೂ ಗುಲಾಲಿ ಟೋಪಿಯವರೇ

ಕಾಂಚನಮಾಲೆ ಅರುಣಾಚಲಯ್ಯನಿಗಿಂತ ದೊಡ್ಡ ಗೋಮುಖ ವ್ಯಾಘ್ರ" ಎನ್ನತೊಡಗಿದ

ರಾಜಪ್ರಮುಖ ಪ್ರತಾಪರಾಯ ಎರಡನೆಯ ಬಾರಿ ಅರಮನೆಗೆ ಬಂದ ಕಾಂಚನಮಾಲೆಯೊಡನೆ ವಿಶೇಷ ಸ್ನೇಹ, ಸಹಾನುಭೂತಿ ಗಳಿಂದ ಬಹು ಹೊತ್ತು ಮಾತಿನಲ್ಲಿ ಕಳೆದ ಕಾಂಚನಮಾಲೆ ಒಂದು ರೀತಿಯಿಂದ ಅವನಿಗೆ ಸೋದರಿಯಾದರೂ ರಾಜಕೀಯವನ್ನು ಕುರಿತು ಅವಳೊಡನೆ ಚರ್ಚಿಸಿದವನಲ್ಲ ಈ ಬಾರಿ ಅವಳು ವಾಮ ಪಕ್ಷದ ಸದಸ್ಯರ ಹೆಸರನ್ನು ಸೂಚಿಸಿದಾಗ ಆತನಿಗೆ ವಿಸ್ಮಯವಾಯಿತು ಇಷ್ಟು ಕಾಲ ಆತ ಮಂತ್ರಿ ಸಂಪುಟದ ರಚನೆಯಲ್ಲೂ ಆಸಕ್ತಿ ತೋರಿ ದವನಲ್ಲ ವಾಮನರಾಯನ ಬಹು ದಿನಗಳ ಒಡನಾಟದಲ್ಲಿ ದೊರೆಗೆ ಜಿಗುಪ್ಸೆ, ನಿರಾಶೆಗಳು ಬಂದಿದ್ದುವು ಈಗ ಬಂದವಳು ಕಾಂಚನಮಾಲೆ ಎಂಬುದರಿಂದ, ಮನಸ್ಸು ಬಿಚ್ಚಿ ಮಾತನಾಡುವ ಹಂಬಲ ಉಂಟಾಗಿ, ವಿಚಾರ ವಿನಿಮಯಕ್ಕೆ ಕುಳಿತ ಅರುಣಾಚಲಯ್ಯನವರನ್ನು ಕುರಿತು ಆತ ಪ್ರಶಂಸೆಯ ಮಾತುಗಳನ್ನಾಡಿದಾಗ ಅವಳಿಗೆ ಕಂಬನಿ ಬಂದಿತು ಮುಂದೆ "ನೀನು ವಾಮನರಾಯನಿಂದ ದೂರಾದದ್ದು ತುಂಬ ಸಂತೋಷದ ಕೆಲಸ ಆದರೆ ನಿನ್ನೀ ನೂತನ ಬಾಂಧವ್ಯ ಸಮನೇ ? ರಾಜ್ಯ ಕಳೆದುಕೊಂಡ ನನಗೆ ಅಧಿಕಾರಕ್ಕೆ ಯಾರು ಬಂದರೇನು-ಎಂದು ತೋರಬಹುದು ಈಗ ಬರಿಯ ಸಹಿ ಮಾಡುವ ಕೆಲಸ ನನ್ನದು ನಾವು ರಾಜರುಗಳು ಹಿಂದೆ ಮೂರ್ಖರಾಗಿ ಬಾಳಿದ್ದು ನಿಜ 'ನಾನೂ ಅದಕ್ಕೆ ಒಬ್ಬ ಆಕ್ಷೇಪನಲ್ಲ ಎಂದು ತಿಳಿದುಕೋ ಆದರೆ ಈ ಗೊಂಡಾರಣ್ಯ ನನ್ನ ದೇಶ ಎಂಬ ಪ್ರೀತಿ ನನ್ನ ಹೃದಯದಲ್ಲಿ ಉಳಿದಿದೆ ವಾಮನರಾಯನ ನಿರಂಕುಶ ಆಡಳಿತೆಯನ್ನು ನೋವಿನಿಂದ ಸಹಿಸಿದೆ ನನ್ನನ್ನು ಪದಚ್ಯುತಿಗೊಳಿಸಿದ ದೇಶವಾದಿಗಳು ಈ ನಾಯಿಯನ್ನು ಗದ್ದುಗೆಯ ಮೇಲೆ ಏರಿಸಿದರಲ್ಲ! ಏನು ಪ್ರಜಾಪ್ರಭುತ್ವವಿದು! ಇವನೂ ಒಬ್ಬ ಪ್ರಜಾಪ್ರಮುಖನೇ-ಎಂದು ತುಂಬ ಮರುಗಿದ್ದೆ. ಆ ಸ್ಥಿತಿಯನ್ನು ತಪ್ಪಿಸಿ, ಆಸ್ಥಾನಕ್ಕೆ ತಕ್ಕ ಮರ್ಯಾದೆ ತಂದುಕೊಟ್ಟ ಮನುಷ್ಯ ಅರುಣಾಚಲಯ್ಯ, ಬಹು ಯೋಗ್ಯ, ಎಷ್ಟಕ್ಕೂ ನಂಬ ಬಹುದಾದ ವ್ಯಕ್ತಿ. ಒಂದು ಕ್ಷಣ ನನ್ನೊಡನೆ ವಿನಯ ತಪ್ಪಿ ಮಾತ

ನಾಡಲಿಲ್ಲ. ಮಾತಿಗೆ ನಿಂತರೋ-ಕನ್ನಡಿಯಂಥ ಹೃದಯ ! ಆತ ತೀರಿಕೊಂಡ ನನ್ನ ಮತ್ತು ನಾಡಿನ ದುರ್ದೈವದಿಂದ

"ನೀನು ಬಲ್ಲವಳು. ಈಗ ಶ್ರಮವಾದಿಗಳನ್ನು ಕೂಡಿ ಕೆಲಸ ಮಾಡುವುದು ಇಷ್ಟಿಷ್ಟೂ ಸಮವೆಂದು ನನಗನಿಸುವುದಿಲ್ಲ. ಈ ಮಾತನ್ನು ರಾಜಪ್ರಮುಖನಾಗಿ ಆಡುತ್ತಿಲ್ಲ-ಎಂದು ತಿಳಿದುಕೋ. ಅನ್ನುವುದು-ನಿನ್ನ ಮೇಲಿನ ಪ್ರೀತಿಯಿಂದ, ಗೊಂಡಾರಣ್ಯದ ಮೇಲಿನ ಪ್ರೀತಿಯಿಂದ" ಎಂದು ಅವಳ ಮುಖವನ್ನೇ ದಿಟ್ಟಿಸಿ ನೋಡಿದ.

ಆ ಸಂದಿಗ್ಧ ಸ್ಥಿತಿಯಲ್ಲಿ ಆತ ತೋರಿಸಿದ ವಿಶ್ವಾಸ, ಪ್ರೀತಿಗಳನ್ನು ಕಂಡು "ನಾನು ಆ ದೃಷ್ಟಿಯಿಂದಲೇ ಒಪ್ಪಿಕೊಂಡೆ" ಎಂದಳು.

"ಅವರೊಡನೆ ಸ್ನೇಹವನ್ನೇ ಒಂದು ನೇರಾದ ಪ್ರಶ್ನೆ ಕೇಳಲೇ? ವ್ಯಕ್ತಿಯಾಗಿ ಕೇಳುತ್ತೇನೆ, ನಿನ್ನ ಸ್ನೇಹಿತನಾಗಿ ಕೇಳುತ್ತೇನೆ"

"ಕೇಳಿ"

"ನೀನು ಮೊದಲಿನಿಂದಲೂ ಶ್ರಮಗಾರ ಪಕ್ಷಪಾತಿ ಎಂಬ ಸುದ್ದಿ ಉಂಟು ಇಷ್ಟು ದಿನ ಅದರ ಪ್ರಭಾವವನ್ನು ಅರುಣಾಚಲಯ್ಯನವರು ತಡೆದರು ಎನ್ನುತ್ತಾರೆ"

"ಅಷ್ಟೇ ಏನು? ನಾನು ಪಕ್ಷಾತೀತಳು. ಸ್ವಾರ್ಥಕ್ಕಾಗಿ ನಾನು ದೇಶವಾದಿ ಪಂಗಡದಿಂದ ಜನವಾದಿ ಪಕ್ಷ ಸೇರಿದೆ ಎನ್ನುತ್ತಾರೆ ಈಗ ಶ್ರಮವಾದಿಯಾಗಿದ್ದೇನೆ ಅನ್ನುತ್ತಾರೆ ಹೊರಗಿಂದ ಕಾಣುವವರಿಗೆ ಇದು ನಿಜವೆ ನಮ್ಮ ಪಕ್ಷ ಕೇವಲ ನೈತಿಕ ಪಕ್ಷ ಅದರಿಂದ ವಾಮ ಪಕ್ಷದವರೊಡನೆ ಸೇರುವುದು ಸಾಧ್ಯವಾಯಿತು"

"ನನ್ನ ಪ್ರಶ್ನೆ ತಿಳಿಯಿತಲ್ಲ, ಇತರರಿಗೆ ಅನುಮಾನ ಬರುತ್ತಿದ್ದ ಹಾಗೆ ನನಗೂ ಅನುಮಾನ ಬಂದಿದೆ" ಎಂದರು.

ಕಾಂಚನಮಾಲೆ ತುಸು ಹೊತ್ತು ಮೂಕಳಾದಳು ಏಕೋ ಆವಳಿಗೆ ಕಣ್ಣೀರು ಬಂದಿತು ರಾಜಪ್ರಮುಖ ತನ್ನ ಬಂಧು. ಅವನ ಮನದ ಕೊರಗೇನೆಂಬುದು ತಿಳಿಯುತ್ತದೆ ಅದರಿಂದಾಗಿ "ನೀವು ವಿಶ್ವಾಸ ಇರಿಸಬೇಕು, ಸ್ವಲ್ಪ ಸಮಯ ಕಾಯಬೇಕು. ಆಗ ನಾನೆಂಥ ವಳೆಂದು ತಿಳಿದೀತು ನಾಲ್ಕು ವರ್ಷಗಳಕಾಲ ಅರುಣಾಚಲಯ್ಯನವರೊಡನೆ ಇದ್ದು, ಜನತೆಯ ಸೇವೆ ಏನೆಂಬುದನ್ನು ಕಲಿತಿದ್ದೇನೆ ;

ಅವರೇ ಕಲಿಸಿಕೊಟ್ಟಿದ್ದಾರೆ. ಆದರೆ ಇದು ರಾಜಕೀಯ–ಹುಲಿ, ಚಿರತೆ
ಗಳ ಎಡೆಯಲ್ಲಿ ಹರಿಣ, ಜಿಂಕೆಗಳು ಇರಬೇಕಾದ ವ್ಯವಹಾರ ನಾನು
ಎರಿಯ ಹರಿಣ ಆದರೆ ಹುಲಿಗಳ ಎದುರು ಹುಲಿಗಳ ಸೋಗುಹಾಕಿ
ಕೊಳ್ಳಬೇಕಾಗಿದೆ "

"ನನಗೆ ನಿನ್ನ ಮಾತೇ ತಿಳಿಯದು"

"ಸ್ಪಷ್ಟ ಹೇಳಲೇ? ನಾನೂ ಗೊಂಡಾರಣ್ಯದವಳು ಅದೊಂದಕ್ಕೇ
ನನ್ನ ಭಕ್ತಿ ನಿಮಗೆ ಇರುವುದಕ್ಕಿಂತ ಹತ್ತು ಮಡಿ ಹೆಚ್ಚಿನ ಪ್ರೀತಿ
ನನಗೆ ಅದರಮೇಲಿದೆ ಅದರ ಕೆಡುತ್ತಿರುವ ರಾಜಕೀಯವನ್ನು, ಕೊಳೆ
ಯುತ್ತಿರುವ ರೀತಿನೀತಿಗಳನ್ನು ಒಂದು ಹದ್ದಿಗೆ ತಂದಿಡಲು ಪ್ರಯತ್ನಿ
ಸಿದವರು, ಬಹುಮಟ್ಟಿನ ಯಶಸ್ಸನ್ನು ಗಳಿಸಿದವರು ಅರುಣಾಚಲಯ್ಯ
ನವರೊಬ್ಬರೆ."

"ಹತ್ತುಬಾರಿ ಆ ಮಾತು ಹೇಳು"

"ಅದನ್ನು ಕುಲಗೆಡಿಸಿದವನು ವಾಮನರಾಯ ಆತನ ಬಾಧೆ
ಈಗ ತಪ್ಪಿದೆಯಾದರೂ ದೇಶಕ್ಕೆ ಇನ್ನೊಂದೇ ವಿಘ್ನ ಇದಿರು ಕಾದಿದೆ."

"ಏನದು?"

"ಅರುಣಾಚಲಯ್ಯನವರನ್ನು ಬಲಿಕೊಟ್ಟುದು ಯಾರೆಂದು
ಬಲ್ಲೆ ಅವರ ಸಂಗಡನನ್ನು ಹೊಕ್ಕು ಅವರನ್ನು ಬಲಿಕೊಳ್ಳುವತನಕ
ನನ್ನ ಆತ್ಮಕ್ಕೆ ತೃಪ್ತಿಯಿಲ್ಲ" ಎಂದೆಂದು, ಮುಂದೆ ತಾಸು ಎರಡು
ತಾಸುಗಳ ತನಕ ತನಗೆ ಗೊತ್ತಿದ್ದ ಸಂಗತಿಗಳೆಲ್ಲವನ್ನು ಹೇಳಿದಳು
ನಂತರ ಮುಂದಿನ ರಾಜಕೀಯವನ್ನೂ ತರ್ಕಿಸಿ, ಅವರಲ್ಲಿ ಭರವಸೆ
ಹುಟ್ಟಿಸಿ, ತನ್ನ ವಿಷಯದಲ್ಲಿಯೂ ಅಭಿಮಾನವುಂಟಾಗುವಹಾಗೆ ಮಾಡಿ
ಮನೆಗೆ ಮರಳಿದರು

ಇಷ್ಟರೊಳಗೇನೆ ನಗರದ ಪತ್ರಿಕೆಗಳು "ಜನವಾದಿಗಳೂ ಶ್ರಮ
ವಾದಿಗಳೂ ಕೂಡಿ ಮಿಶ್ರ ಸರಕಾರ ನಡೆಯಿಸುವ ನಿರೀಕ್ಷೆಯಿದೆ"
ಎಂದು ಸಾರಿದ್ದರು ಒಂದು ಸ್ವತಂತ್ರ ಪತ್ರಿಕೆ ಮಾತ್ರ "ಇದು
ದೇಶದ ಅಭ್ಯುದಯಕ್ಕೆ ರಾಹುಕಾಲ ರಾಜಕೀಯದಲ್ಲಿ ಮಾಟಗಾತಿ
ಯಂತೆ ಸೇರಿದ ಕಾಂಚನಮಾಲೆಯವರು ಪಕ್ಷದಿಂದ ಪಕ್ಷಕ್ಕೆ ಹಾರಿ
ಪ್ರಜಾಪ್ರಭುತ್ವದ ಅರ್ಥವನ್ನೇ ಕೆಡಿಸುತ್ತಿರುವ ದುರ್ದಿನ" ಎಂದು

ನಿಷ್ಠುರವಾದ ಲೇಖ ಬರೆದಿತ್ತು ಜನವಾದಿಗಳಲ್ಲಿ ತಿರುಮೂರ್ತಿಯೊಬ್ಬನ ಅಂತರಂಗದಲ್ಲಿಮಾತ್ರ "ನಾನು ಹೇಳಬೇಕಾಗಿದ್ದ ಮಾತನ್ನು ಆ ಪತ್ರಿಕೆ ಹೇಳಿತು" ಎಂದು ತೋರಿತು

ದಿನ ಸರಿದಂತೆ ಆತನ ಪಾಲಿಗೆ, ಕಾಂಚನಮಾಲೆಯಿಂದಲೇ ತಮ್ಮ ಪಕ್ಷದ ಭವಿಷ್ಯ ಮಣ್ಣುಗೂಡುತ್ತದೆ ಎಂದೆನಿಸುತ್ತಿತ್ತು ತಮ್ಮ ಪಕ್ಷದ ಜನಗಳು ತನ್ನ ಮಾತನ್ನು ಗಮನಿಸದೆ ಅವಳನ್ನು ನಂಬುತ್ತಿದ್ದಾರೆ, ಅವಳಿಂದ ಆಕರ್ಷಿತರಾಗಿದ್ದಾರೆ—ಎಂಬ ಭಯ ಮತ್ತಷ್ಟು ರಾಜಕೀಯವನ್ನು ಕೆಡಿಸುವುದಕ್ಕೆ ಕಾಂಚನಮಾಲೆಯಂತಹ ರೂಪವಂತ ಕಾಮಿನಿ ಅಸಾಧ್ಯ ಶಕ್ತಿಯೆಂದು ಭಯವಾಗುತ್ತದೆ ಅವಳನ್ನು ಕುರಿತು ಕೇಳುವ ಹಲವಾರು ಮಾತುಗಳು ಇಂಥ ಸಂಶಯಗಳಿಗೆ ಎಡೆ ಕೊಟ್ಟಿದೆ. ಅವಳು ತಮ್ಮ ಪಕ್ಷವನ್ನು ಬಿಟ್ಟುಹೋದರೂ ಅವನಿಗೆ ಸಂತೋಷವೇ ಹಾಗೆ ಮಾಡದೆ ಅದನ್ನು ಮುರಿದು ಶ್ರಮವಾದಿಗಳ ಬಾಯಿಗೆ ತುತ್ತಾಗಿ ಮಾಡಿಯಾಳೆಂಬ ಭಯವಿದೆ ಈ ಮಾತನ್ನು ಆತ ಬಹಿರಂಗವಾಗಿ ಆಡುವುದಕ್ಕೂ ಇಲ್ಲ ಅಂತರಂಗದಲ್ಲಿ ಬಚ್ಚಿಟ್ಟುಕೊಳ್ಳುವುದಕ್ಕೂ ಇಲ್ಲ

ಕಾಂಚನಮಾಲೆ ಮಾತ್ರ ಏನೊಂದು ವಿಶೇಷವೂ ನಡೆದಿರದಂತೆ ವರ್ತಿಸತೊಡಗಿದಳು ಬೇಕೆಂದೇ ಲಾಲಚಂದ, ಸುನೀತರಿಗೆ ಕಾಯಿದೆ, ಕಂದಾಯದ ಇಲಾಖೆಗಳನ್ನು ಒಪ್ಪಿಸಿದಳು. ಅವಳ ಮನಸ್ಸೆಲ್ಲ ಅರುಣಾಚಲಯ್ಯನವರು ಹಾಕಿಕೊಟ್ಟ ಅಭಿವೃದ್ಧಿಯ ಯೋಜನೆಗಳನ್ನು ವಿಸ್ತರಿಸುವ ಹಟದಲ್ಲಿತ್ತು ಸೇತುರಾಯನೊಡನೆ ಅವಳ ವ್ಯವಹಾರ ಇನ್ನಷ್ಟು ಹೆಚ್ಚಾಗಬೇಕಾಯಿತು. ಆದರೆ ಅವಳು ಮಾತ್ರ ವಾದದಲ್ಲಿ ವೇಳೆ ಕಳೆಯದೆ ಹೇಳಿದುದಕ್ಕೆಲ್ಲಾ 'ಹೂಂ' ಎನ್ನುತ್ತಾ ಬಂದಳು

ಲಾಲಚಂದನಿಗೆ ಪೋಲೀಸರ ಮೇಲಿನ ಅಧಿಕಾರ ಕೊಟ್ಟದು ಜನವಾದಿ ಗೆಳೆಯರಿಗೆ ಅಸಂತೋಷವಾಗಿದ್ದರೂ ಶ್ರಮವಾದಿಗಳಿಗೆ ಸಂತೋಷವೇ ಆ ಇಲಾಖೆಯ ಮೇಲೆ ಮೆಲ್ಲಗೆ ತಮ್ಮ ಹತೋಟಿ, ವರ್ಚಸ್ಸುಗಳನ್ನು ಹರಿಯಿಸಿದ್ದಾದರೆ ಮುಂದೆ ತುಂಬ ಅನುಕೂಲವಿದೆ ಎಂದು ಅನಿಸಿತು ಇನ್ನೂ ಅರುಣಾಚಲಯ್ಯನವರ ಮೃತ್ಯುವಿನ ಅನ್ವೇಷಣೆಯ ಕೆಲಸ ನಡೆಯುತ್ತಲೇ ಇದೆ ಈಕೆ ಪೋಲೀಸು

ಮುಖಂಡ ದೊರೆಸ್ವಾಮಿಯೊಡನೆ ಸಂಪರ್ಕವನ್ನಿರಿಸಿಕೊಂಡು ಎಲ್ಲ ವಿಚಾರ ತಿಳಿಯುತ್ತಿದ್ದಳು ಅದು ಅಕಸ್ಮಿಕವಲ್ಲ, ಉದ್ದೇಶಪೂರ್ವಕ ವಾಗಿ ನಡೆಸಿದ ಸಂಚು ಎಂಬುದು ತೋರಿಬಂದು, ಅನುಮಾನದ ಮೇಲೆ ಮಾನಹಳ್ಳಿಯ ಸತ್ಯಾಗ್ರಹಿಗಳ ಮೇಲೆ ಆರೋಪ ಹೊರಿಸುವ ಎಡೆ ಹುಡುಕಿದರು ಅದು ಸಾಧ್ಯವಾಗಲಿಲ್ಲ, ಇತ್ತ ಸತ್ಯಾಗ್ರಹ ತನಗೆ ತಾನೆ ನಿಂತಿತು ಅದು ನಿಲ್ಲುವುದಕ್ಕೂ ಶ್ರಮವಾದಿಗಳ ಪ್ರೇರಣೆ ಇತ್ತೆಂದೂ ಈ ಅನ್ವೇಷಣೆ ಉತ್ಸಾಹಪೂರ್ವಕವಾಗಿ ನಡೆಯದಿರಲು ಲಾಲಚಂದನ ಬೆಂಬಲವಿತ್ತೆಂಬುದೂ ಆಕೆಗೆ ಮನವರಿಕೆಯಾಯಿತು

* * * *

ಗೊಂಡಾರಣ್ಯ ಭಾರತದ ಒಂದು ತುಂಡು, ಅಲ್ಲಿ ತಲೆದೋರಿದ ಈ ವಿಚಿತ್ರ ಸಮ್ಮಿಶ್ರ ಸರಕಾರ ಕೇಂದ್ರದ ಗಮನವನ್ನು ಸೆಳೆಯಿತು ದೇಶವಾದಿ ವರಿಷ್ಠರ ಚಿಂತೆಯನ್ನು ಹೆಚ್ಚಿಸಿತು ತಮ್ಮ ಪಕ್ಷದ ಶಕ್ತಿ ಕುಗ್ಗಿ ಹೀಗೆಲ್ಲ ನಡೆಯಲು ಏನುಕಾರಣವೆಂದು ಪರಿಶೀಲಿಸಲು ಅವ ರೊಂದು ಸಮಿತಿಯನ್ನು ಏರ್ಪಡಿಸಿದರು ಸಮಿತಿಯವರು ಒಂದು ತಿಂಗಳಕಾಲ ಗೊಂಡಾರಣ್ಯಕ್ಕೆ ಬಂದು ಪ್ರಮುಖರೊಡನೆ, ಪಕ್ಷದವ ರೊಡನೆ, ಪಕ್ಷ ಬಿಟ್ಟು ಬಂದವರೊಡನೆ ವಿಚಾರ ವಿನಿಮಯಮಾಡಿದರು ತಾವು ವಾಮನರಾಯನ ಮಾತಿಗೆ ಬೆಲೆಕೊಟ್ಟು ಉಳಿದವರನ್ನು ಅಲಕ್ಷಿ ಸಿದ್ದರಿಂದ ಅರುಣಾಚಲಯ್ಯ, ಕಾಂಚನಮಾಲೆ, ರಾಮದಾಸರಂತಹ ಪ್ರಮುಖರನ್ನು ಕಳೆದುಕೊಂಡುವೆಂದೂ, ದೇಶವಾದಿ ಸರಕಾರ ನಡೆಯು ತ್ತಿದ್ದಾಗ ಸಂಭವಿಸಿದ ದುರಾಡಳಿತೆಯ ಪ್ರಕರಣದಲ್ಲಿ ದೂರು ಬಂದ ದ್ದನ್ನು ಅಲಕ್ಷಿಸಿದುದು ತಪ್ಪಾಯಿತೆಂದೂ, ಅದರಿಂದ ಜನಗಳಿಗೆ ಅವಿ ಶ್ವಾಸ ಉಂಟಾಯಿತೆಂದೂ ತಿಳಿಯಿತು ವಾಮನರಾಯ ಪಕ್ಷದ ಸದ ಸ್ಯತ್ವ ಬೆಳೆಯುತ್ತಿದೆ ಎಂದು ತೋರಿಸುತ್ತಿದ್ದ ಅಂಕೆ ಸಂಖ್ಯೆಗಳು ಕೃತಕ ವೆಂದೂ, ಯಾರಿಂದಲೋ ಹಣಕೂಡಿಸಿ, ಸುಮ್ಮನೆ ಹೆಸರು ಬೆಳೆಯಿಸಿ ಮಾಡಿದ ಮಾಟವೆಂದು ತಿಳಿದು ಬಂದಿತು.

ಸಮಿತಿಯ ಅಧ್ಯಕ್ಷನಾಗಿ ಬಂದಿದ್ದ ಅಖಿಲಭಾರತ ಪ್ರಸಿದ್ಧಿಯ ನಿಖಿಲಾನಂದಸಿಂಹ, ದೇಶವಾದಿ ಸಂಸ್ಥೆಯ ಪ್ರಮುಖ ಕಾರ್ಯದರ್ಶಿ ಆತ ಬರುವನೆಂದು ತಿಳಿದಾಗಲೇ ಕಾಂಚನಮಾಲೆ. " ಕಳ್ಳರ ಗುಂಪಿನ

ತನಿಖೆಗೆ ಇನ್ನೊಬ್ಬ ಕಳ್ಳನನ್ನು ಕಳುಹಿಸಿದಂತೆ" ಎಂದಿದ್ದಳು ಇದಕ್ಕೆ ಕಾರಣ–ಆತ ಮೊದಲಿನಿಂದಲೂ ವಾಮನರಾಯನ ಆಪ್ತಮಿತ್ರ, ಅವನ ವಿರುದ್ಧವಾಗಿ ಹೋದ ದೂರುಗಳನ್ನು ಅಡಗಿಸಿಟ್ಟವ ಈ ಬಾರಿ, ಸಂಗಡವೇ ಕುಸಿದು ಕಣ್ಮರೆಯಾಗುತ್ತದೆ-ಎಂದು ತೋರಿ ಕಣ್ತೆರೆದವನು ಸಂಗಡದ ಶಕ್ತಿ ತಗ್ಗಿದುದಕ್ಕೆ ಅವನ ದುಃಖ ಹೊರತು, ಅಧಿಕಾರ ಲಾಲಸೆ, ದುರುಪಯೋಗಗಳ ವಿಷಯದಲ್ಲಿ ಅವನಿಗೂ ಚಿಂತೆ ಬರಲಾರದು ಈ ನಡುವೆ, ಬಂದ ಸಮಿತಿಯವರನ್ನು ರಾಜಪ್ರಮುಖರು ಔತಣಕ್ಕೆ ಕರೆದಿದ್ದರು. ಅಲ್ಲಿಯೂ ವಾಮನರಾಯನನ್ನು ಕುರಿತು ಒಳ್ಳೆಯ ಅಭಿಪ್ರಾಯ ಸಿಗಲಿಲ್ಲ. ಹೀಗಾಗಿ ವಾಮನರಾಯನಂತಹ, ಸೋತ ಕುದುರೆಯನ್ನು ಇನ್ನಿನ್ನೂ ಗೊಂಡಾರಣ್ಯದ ರಥಕ್ಕೆ ಕಟ್ಟಿ ನಡೆಯಿಸಲು ಬರುವುದಿಲ್ಲ ಎಂಬ ನಿರ್ಧಾರಕ್ಕೆ ಸಮಿತಿಯವರು ಬರಬೇಕಾಯಿತು.

* * * *

ಈ ಅವಧಿಯಲ್ಲಿ ಶ್ರಮವಾದಿ ಸೇತುರಾಯನು ಸುಮ್ಮನಿರಲಿಲ್ಲ ಆತನಿಗೆ ತಮ್ಮ ಗುಂಪಿನ ಮೇಲೆ ಅನೇಕರಿಗೆ ಸಹನೆ, ಪ್ರೇಮಗಳಿಲ್ಲವೆಂದು ಗೊತ್ತು ಶ್ರೀಮಂತರು ಹೇಗೋ, ಹಾಗೆಯೇ ಮಧ್ಯಮವರ್ಗದವರು ಸಹ ತಮ್ಮ ಸಮೀಪ ಬರಲು ಅಂಜುತ್ತಿರುವರೆಂಬ ಅನುಭವವಾಗಿದೆ ಹೀಗಾಗಿ ಜನಗಳ ಮೇಲೆ ತಮ್ಮ ಹಿಡಿತವನ್ನು ಬೆಳೆಯಿಸುವುದಕ್ಕೆ ಬೇರೊಂದೇ ಬಣ್ಣದ ಸಂಸ್ಥೆ ಬೇಕೆಂದು ತೋರತೊಡಗಿದೆ ಅಲ್ಲದೆ ಹೊರಗಿನ ತೋರಿಕೆಯ ಮಟ್ಟಿಗಾದರೂ ತಮ್ಮ ಸಂಸ್ಥೆ ಸ್ವತಂತ್ರವಾದದ್ದು, ಹೊರ ಪ್ರಾಂತ್ಯಗಳಿಗಾಗಲಿ, ದೇಶಗಳಿಗಾಗಲಿ ಅಡಿಯಾಗಿಲ್ಲ ಎಂಬುದನ್ನು ತೋರಿಸುವ ಅವಶ್ಯಕತೆಯಿತ್ತು. ಅವನ ಪತ್ರಿಕೆಗಳು ಕೇವಲ ಗೊಂಡಾರಣ್ಯದ ಶ್ರೇಯಸ್ಸಿಗಾಗಿ ಹಂಬಲಿಸುವ ದೈವವಾಣಿಗಳಾದುವು ದೇಶವಾದಿಗಳನ್ನು ಬಿಟ್ಟರೆ, ಉಳಿದವರ ಮೇಲಿನ ಟೀಕೆಗಳನ್ನು ನಿಲ್ಲಿಸಿದರು. ಇತ್ತ ಗೊಂಡಾರಣ್ಯವೇ ತಮ್ಮ ತವರುಮನೆ, ಅದೇ ಸ್ವರ್ಗ ಎಂಬ ಹೊಸ ಕೂಗನ್ನು ಹೊರಡಿಸಿದರು. ಎಲ್ಲ ವಿಧಗಳಿಂದಲೂ ಕಾಂಚನಮಾಲೆಯನ್ನು ಒಲಿಸಿ ತಮ್ಮ ಪಕ್ಷದ ನಾಯಿಕೆಯನ್ನಾಗಿಯೂ ಮಾಡಿಕೊಳ್ಳುವುದಕ್ಕೂ ಅವನು ಸಿದ್ಧ.

ಅವಳೊಡನೆ ವಾದ ವಿವಾದ ಹೂಡಿ, ವಿರಸವನ್ನು ತಂದುಕೊಳ್ಳುವುದನ್ನು ನಿಲ್ಲಿಸಿ, ಆರಾಧನೆಯ ಕೆಲಸ ತೊಡಗಿದ. ಅವಳಲ್ಲಿ ಪೂರ್ವ ಪ್ರಣಯಾನುರಾಗದ ಆತುರ, ಕಾವುಗಳು ಕಡಮೆಯಾಗಿದ್ದರೂ ತನಗೆ ಮೊದಲಿನಷ್ಟೇ ಅಭಿಮಾನ, ವಿಶ್ವಾಸಗಳು ಉಳಿದಿವೆಯೆಂಬುದನ್ನು ತೋರಿಸತೊಡಗಿದ

ಇದು ತೋರಿಕೆಯ ಆಟವೆಂದು ಕಾಂಚನಮಾಲೆ ಚೆನ್ನಾಗಿ ಅರಿತವಳು ಅವಳು ಅಷ್ಟೇ ಸಹನೆ, ವಿಶ್ವಾಸಗಳ ನಾಟಕ ಹೂಡಿದಳು ತನ್ನ ವೈಯ್ಯಾರದಿಂದ ಉದ್ದೇಶಪೂರ್ವಕವಾಗಿ ಅವನನ್ನು ಮಂಕು ಗೊಳಿಸುವುದಕ್ಕೂ ಪ್ರಯತ್ನಿಸಿದಳು ರಾಜಕೀಯ ವ್ಯವಹಾರದಲ್ಲಿ ಅವಳ ವಾಲಿಗೆ ವಿಶ್ವಾಸಿಗಳೆಂದರೆ ರಾಮದಾಸನಂತಹ ಒಬ್ಬಿಬ್ಬರು ಮಿತ್ರರು ಮಾತ್ರ ಅವರು ಅವಳಂತೆಯೆ ಲಾಲಚಂದ, ಸುನೀತರ ಧೋರಣೆಯನ್ನು ಹೊಂಚು ಹಾಕಿ ನೋಡುವರು ಈ ಕ್ರಮವಾದಿ ಮಂತ್ರಿಗಳು ತಮ್ಮ ಇಲಾಖೆಗಳಲ್ಲಿ-ಯಾರನ್ನು ಮೇಲಿನ ಪಟ್ಟಕ್ಕೆ ಏರಿಸುತ್ತಿದ್ದಾರೆ, ಯಾವಾಗ ಹೊಸಬರನ್ನು ಸೇರಿಸಿಕೊಳ್ಳುತ್ತಿದ್ದಾರೆ, ಅವರ ಹಿಂದು ಮುಂದಿನ ಚರಿತ್ರೆಗಳೇನು ಎಂದು ಜಾಗ್ರತೆಯಿಂದ ವಿಚಾರಿಸಿ ತಿಳಿಯುತ್ತಿದ್ದರು

ಸೇತುರಾಯ ರಾಜಕೀಯಕ್ಕೆ ಸಂಬಂಧವಿಲ್ಲವೆಂದು ಕಾಣುವ ಕೆಲವು ಮಿತ್ರರನ್ನು ಮುಂದೆ ಇರಿಸಿಕೊಂಡು ಅವರಿಗೆ ಧನಬಲ, ಬುದ್ಧಿ ಬಲಗಳೆರಡನ್ನೂ ಒದಗಿಸಿ, ತಾನು ಮರೆಯಲ್ಲಿದ್ದು 'ಗೊಂಡಾರಣ್ಯ ಸಂಸ್ಕೃತಿ ಸೇವಾ ಸಂಘ' ಎಂಬ ಒಂದು ಹೊಸ ಸಂಸ್ಥೆಯನ್ನು ಹೊರಡಿಸಿದ ಕಾಣುವವರ ಕಣ್ಣಿಗೆ ಇದರ ಹೆಸರು, ಚಟುವಟಿಕೆ ಗಳಲ್ಲಿ ರಾಜಕೀಯದ ಗಂಧ, ಗಾಳಿಗಳಿಲ್ಲ ಅದರ ಅಧ್ಯಕ್ಷನಾಗಿ ಆರಿಸಲ್ಪಟ್ಟ ವ್ಯಕ್ತಿ ರತನವಾಡ ಎಂಬವ ನಗರದ ಪ್ರಮುಖ ವ್ಯಕ್ತಿ, ಯಾವ ಪಕ್ಷಕ್ಕೂ ಸೇರದ ಸಮಾಜ ಸೇವಕ ಅವನಿಗೂ ತನ್ನ ಆಯ್ಕೆಗೆ ಕಾರಣರಾರೆಂದು ತಿಳಿದಿತ್ತೋ ಇಲ್ಲವೋ! ಈ ಸಂಗಡ ನಾಡಿನ ಉದ್ದಕ್ಕೂ ಸಾಂಸ್ಕೃತಿಕ, ಹಬ್ಬ ಹುಣ್ಣಿಮೆಗಳನ್ನು ಜರುಗಿ ಸುತ್ತಾ, ನಾಡಿನ ಸೇವೆಗೆ ಕೆಲಸಮಾಡುವ ಸ್ವಯಂ ಸೇವಕರನ್ನು ಕೂಡಿಸುತ್ತ, ಎಲ್ಲಿಲ್ಲದ ಆವೇಗದಿಂದ ಬೆಳೆಯತೊಡಗಿತು ಗ್ರಾಮ

ಶುಚೀಕರಣ, ದಾರಿಗಳ ನಿರ್ಮಾಣ, ಉತ್ತಮ ಕೃಷಿಯ ಬೋಧನೆ-ಇಂತಹ ಕೆಲಸಗಳನ್ನು ಹಳ್ಳಿಗಳಲ್ಲಿ ಮಾಡತೊಡಗಿತು. ಕಾಂಚನಮಾಲೆಯು ಇಂಥ ಸಮಾರಂಭಗಳ ಪ್ರಾರಂಭೋತ್ಸವ ನಡೆಯಿಸುವುದಕ್ಕೆ ಹೋಗಿದ್ದಳು. ನೂರಾರು ಸ್ವಯಂ ಸೇವಕರು ಒಂದು ಗ್ರಾಮಕ್ಕೆ ಗ್ರಾಮವನ್ನೇ ಗುಡಿಸಿ ಚೊಕ್ಕ ಮಾಡುತ್ತೇವೆ ಎಂದು ಹೊರಟ ಹುಮ್ಮಸ, ಅವಳಿಗೂ ಆಶ್ಚರ್ಯವನ್ನು ಹುಟ್ಟಿಸಿತ್ತು. ಅವಳು "ನಿಮ್ಮ ಶಿಸ್ತು, ಉತ್ಸಾಹಗಳನ್ನೆಲ್ಲ ಕಂಡು ನನಗೆ ತುಂಬ ಆನಂದವಾಗುತ್ತಿದೆ. ಇದಕ್ಕಾಗಿ ನೀವು ಮಾಡುತ್ತಿರುವ ತ್ಯಾಗ ಹೆಚ್ಚಿನದು. ಆದರೆ ಒಂದು ವಿಚಾರ ನೆನಪಿನಲ್ಲಿರಲಿ-ಹೊರಗಿನಿಂದ ನೀವು ಬಂದು ಎಷ್ಟು ಗ್ರಾಮಗಳನ್ನು ಶುಚಿ ಮಾಡಬಹುದು? ಇಲ್ಲವೆ ಎಷ್ಟು ದಿನ ಮಾಡಬಹುದು? ಎಷ್ಟು ದಾರಿಗಳನ್ನು ನಿರ್ಮಿಸಬಹುದು? ಈ ಜನ ತಾವಾಗಿ ಅದನ್ನು ತಿಳಿದು ಸ್ವಸಾಮರ್ಥ್ಯದಿಂದ ಮಾಡದೆ ಹೋದರೆ, ಇದು ಬರಿಯ ಕಟ್ಟಿಕೊಟ್ಟ ಬುತ್ತಿಯಾಗುತ್ತದೆ. ನಿಮ್ಮ ತ್ಯಾಗ ಬುದ್ಧಿಯಿಂದ ನಿಮಗೆ ಒಳಿತಾದರೂ, ಅದರ ಲಾಭ ಜನಕ್ಕೆ ಉಂಟಾಗಲು, ಅವರೇನೇ ಅಷ್ಟು ಮಾಡಬೇಕು. ಅಂಥ ಬುದ್ಧಿ ಬರುವಂತೆ ಮಾಡಿದರೆ ಇದಕ್ಕಿಂತ ಹೆಚ್ಚಿನ ಪ್ರಯೋಜನವಿದೆ" ಎಂದಿದ್ದಳು.

ಈ 'ಸಂಸ್ಕೃತಿ ಸೇವಾ ಸಂಘ' ಒಂದು ವರ್ಷದೊಳಗಾಗಿ ದೇಶದುದ್ದಕ್ಕೂ ಸಾವಿರಾರು ತರುಣರ ಮನಸ್ಸನ್ನು ಸೆಳದು, ತನ್ನ ಚಟುವಟಿಕೆ ಬೆಳೆಸಿದಾಗ ಅವಳಿಗೆ ಆಶ್ಚರ್ಯವೂ ಆಯಿತು. ಅದರ ಅಧ್ಯಕ್ಷನಾದ ರತನವಾಡನನ್ನು ಕುರಿತು ವಿಚಾರಿಸಿದಾಗ-ಅವನಲ್ಲಿ ಅಷ್ಟೊಂದು ಪ್ರತಿಭೆಯಾಗಲೀ, ತಿಳುವಳಿಕೆಯಾಗಲೀ ಇದ್ದಂತೆಯೇ ಕಾಣಿಸಲಿಲ್ಲ. ಅವನಿಗಿಂತಲೂ ಹೆಚ್ಚಾಗಿ ಸಂಸ್ಥೆಯ ಸಂಚಾಲಕರಾದ ಕೆಲವೊಂದು ಯುವಕರು ತಮ್ಮ ವ್ಯಾಯಾಮ, ಅಂಗಸಾಧನೆಯಂಥ ಚಟುವಟಿಕೆಗಳಿಂದ ತರುಣರ ಮನಸ್ಸನ್ನು ಆಕರ್ಷಿಸುತ್ತಿದ್ದುದು ಸ್ವಲ್ಪ ಮಟ್ಟಿಗೆ ಕಾಣಿಸುತ್ತಿತ್ತು. ಆದರೆ ಈ ಸಂಸ್ಥೆ ಅಷ್ಟು ಬೇಗ, ಅಷ್ಟು ವಿಶಾಲವಾಗಿ ಹಬ್ಬುವುದಕ್ಕೆ ತುಂಬ ಹಣ ಬೇಕಾಗಬಹುದು. ಅದರ ಪ್ರಚಾರ, ಖರ್ಚು, ವೆಚ್ಚಗಳು ಸಾಕಷ್ಟಾಗಬಹುದು ಎಂದು ತೋರದಿರಲಿಲ್ಲ

"ಈ ಹಣ ಎಲ್ಲಿಂದ ಬರುತ್ತದೆ? ಈ ತನಕ ಹೆಸರು ಕೇಳದ ಇದರ ಸಂಚಾಲಕರಾರು? ಎಲ್ಲಿನವರು? ಯಾರು ಇವರಿಗೆ ಪ್ರೇರಣೆ?" ಎಂಬುದನ್ನೆಲ್ಲ ಹುಡುಕುವುದಕ್ಕೂ ಅವಳು ಹೊರಟಳು. ಇವೆಲ್ಲ ಸಂಗತಿಗಳು ರಹಸ್ಯಮಯವಾಗಿ ಕಾಣಿಸಿದುವು. ಆದರೆ ಸಂಸ್ಥೆಯು ಕೆಲವೊಂದು ವ್ಯಕ್ತಿಗಳಿಗೂ, ಸೇತುರಾಯನಿಗೂ ಅದೃಶ್ಯ ಬಾಂಧವ್ಯವಿದೆ ಎಂದು ತಿಳಿದುಕೊಳ್ಳುವುದಕ್ಕಾಯಿತು. ಆಗ ಮನದಲ್ಲಿ ಮೂಡಿದ ವಿಚಾರ ಸರಣಿಯೆಂದರೆ—'ಇದರ ಇಂದಿನ ಚಟುವಟಿಕೆ ಮುಖ್ಯವಾಗಿರಲಾರದು. ನಾಳೆ ಇದು ತೋರಬಹುದಾದ ರೂಪ ಮಹತ್ವದ್ದಿರಬೇಕು. ಸೇತುರಾಯನ ಸಂಬಂಧವಿದೆ—ಎಂದಾದ ಮೇಲೆ ಅದಕ್ಕೆ ರಾಜಕೀಯ ಮುಖವೊಂದು ಇದ್ದೇ ತೀರಬೇಕು. ಆತನ ಸಂಸ್ಕೃತಿ, ಪ್ರೇಮ, ಸೇವಾಸಕ್ತಿ—ಇವುಗಳ ಮಿತಿಯನ್ನು ತಿಳಿದ ಅವಳು—ಎಂದಲ್ಲ ಯೋಚಿಸಿದಳು. ಹೀಗೆಯು, ಆಕೆ ಮುಂಗುಸಿಯಂತೆ ಅವನ ಚಟುವಟಿಕೆಗಳ ವಿಚಾರದಲ್ಲಿ ವಿವಿಧ ರೀತಿಗಳಿಂದ ಎಚ್ಚರ ತಾಳಿದಳು.

## ಅಧ್ಯಾಯ ೧೧

ಕಾಲವಾಗುತ್ತಲೆ ಸಮ್ಮಿಶ್ರ ಸರಕಾರದ ಅವಧಿಯು ಮುಗಿದು, ಮುಂದಿನ ಚುನಾವಣೆಯು ಸನ್ನಿಹಿತವಾಯಿತು. ಈ ಅವಧಿಯಲ್ಲಿ ಕಾಂಚನಮಾಲೆ ಶ್ರದ್ಧೆಯಿಂದ ನಡೆಯಿಸಿಕೊಂಡು ಹೋದ ಗ್ರಾಮಾಭಿವೃದ್ಧಿಯ ಮುಖ್ಯ ಕೆಲಸ ಅವಳಿಗೆ ವಿಶೇಷ ಸಂತೋಷವನ್ನುಂಟುಮಾಡಿತ್ತು. ಅದರ ಕಾರ್ಯಕ್ಷೇತ್ರ ವಿಸ್ತರಿಸಿ ಸುತ್ತುಮುತ್ತಲಿನ ಯಾವತ್ತು ಗ್ರಾಮವಾಸಿಗಳಿಗೆ ಲಾಭದಾಯಕ ಉಪವೃತ್ತಿಯನ್ನು ಅದು ದೊರಕಿಸಿಕೊಟ್ಟಿತ್ತು. ಅದಕ್ಕೆ ಪೂರಕವಾಗಿ ತೆರದ ಆರೆಂಟು ಕೈಗಾರಿಕೆ ಶಾಲೆಗಳು ತರುಣರನ್ನು ಆಕರ್ಷಿಸುತಲಿದ್ದುವು. ಈ ಅವಧಿಯಲ್ಲಿ ಅವಳು, ನಾಡಿನಲ್ಲಿ ಆದ್ಯಂತವಾಗಿ ಸಿಗುತ್ತಿರುವ ವಿವಿಧ ಕಚ್ಚಾವಸ್ತುಗಳ ಪರಿಶೀಲನೆ ನಡೆಯಿಸಿದ್ದಾಳೆ. ಅವುಗಳನ್ನು ಪ್ರಯೋಗ

ಶಾಲೆಗಳಿಗೆ ಕಳುಹಿಸಿ ಅವುಗಳಿಂದ ತಯಾರಿಸಬಹುದಾದ ವಸ್ತುಗಳನ್ನು, ನಡೆಯಿಸಬಹುದಾದ ವೃತ್ತಿಗಳನ್ನು ತಜ್ಞರಿಂದ ತಿಳಿದುಕೊಂಡಿದ್ದಳು. ಒಂದು ದಿನ ಆಕೆ ತನ್ನ ಸಹೋದ್ಯೋಗಿ ರಾಮದಾಸನನ್ನು ಕರೆಯಿಸಿಕೊಂಡು ಆ ವಿವರಗಳನ್ನೆಲ್ಲ ತೋರಿಸಿ "ನೋಡಿ, ಇಷ್ಟೆಲ್ಲ ರೀತಿಯಿಂದ ಕಾರ್ಯ ವಿಸ್ತರಣ ಸಾಧ್ಯ. ಮುಂದೆ ಬರುವವರು ಇದಕ್ಕಿಂತ ಹತ್ತು ಪಾಲು ಹೆಚ್ಚಿಗೆ ವಿಸ್ತಾರಗೊಳಿಸಬಹುದು. ಅದು ಪ್ರಯೋಗದ ಸ್ಥಿತಿಯನ್ನು ದಾಟಿದೆ" ಎಂದಳು. ಅದರಿಂದ ಸಂತೋಷಗೊಂಡ ಆತ "ಇದನ್ನೇ ಹೊಸ ಘೋಷಣೆಯಲ್ಲಿ ಸೇರಿಸುವ. ಮುಂದಿನ ಐದು ವರ್ಷಗಳಲ್ಲಿ ಇಂಥ ನೂರು ಉದ್ಯಮ ಕೇಂದ್ರಗಳನ್ನು ತೆರೆಯುತ್ತೇವೆಂದು ಹೇಳುವ" ಎಂದ.

"ಈ ಮಾತನ್ನು ನಿಮಗೆ ಕುರಿತಾಗಿ ಹೇಳುವುದಕ್ಕೆ ಕಾರಣವಿದೆ. ನನಗೆ ಸ್ವಲ್ಪಕಾಲ ನಿಮ್ಮ ಜನವಾದಿ ರಾಜಕೀಯದಿಂದ ವಿಶ್ರಾಂತಿ ಬೇಕಾಗಿದೆ. ಆ ವಿಷಯದಲ್ಲಿ ಹೆಚ್ಚಿನ ಪ್ರಶ್ನೆ ಕೇಳಬಾರದು. ಅನ್ಯರಿಗೂ ಸಂಗತಿ ಹೇಳಬಾರದು. ಇನ್ನು ಮುಂದೆ ನಾನು ಶ್ರಮವಾದಿಗಳನ್ನು ಸೇರಿಕೊಂಡು ಬಹಿರಂಗದಲ್ಲೂ ಕೆಲಸ ಮಾಡಲು ಬಯಸುತ್ತೇನೆ. ನನ್ನ, ನಿಮ್ಮ ಸಂಪರ್ಕ ಅದರಿಂದ ಕಡಮೆಯಾಗಬೇಕಾದೀತು. ನನ್ನ ಮನಸ್ಸು ನಿಮ್ಮೊಡನೆ ಇದೆ. ನೀವೊಬ್ಬರಾದರೂ ನನ್ನನ್ನು ನಂಬಿ ವಿಶ್ವಾಸವನ್ನಿರಿಸಿದರೆ ಸಂತೋಷ. ಕಾರ್ಯರಂಗದಲ್ಲಿ ನಾನು ಇನ್ನು ಅವರೊಟ್ಟಿಗೆ ಕುಣಿಯುವವಳು."

ಈ ಮಾತುಗಳಿಂದ ರಾಮದಾಸನಿಗೆ ಎದೆಯೇ ಹಾರಿತು. ಅಂಥ ದಿನ ಬಂದೀತೆಂದು ಆತ ಎಣಿಸಿದವನಲ್ಲ, ಬಂದುದನ್ನು ನಂಬುವುದಕ್ಕೂ ಸಿದ್ಧವಾಗಿರಲಿಲ್ಲ. ಆಕೆಯಲ್ಲಿ ವಿಶ್ವಾಸವಿದೆ. ಆದರೆ ಹೆಚ್ಚಿನ ಚರ್ಚೆ ಮಾಡುವ ಧೈರ್ಯವಿಲ್ಲ. "ಹಾಗಿದ್ದರೆ ನಮ್ಮ ಪಕ್ಷದ ಗತಿ ?" ಎಂದು ಕೇಳಿದ.

"ಏಕೆ ಅಧೈರ್ಯ ತಾಳುತ್ತೀರಿ ? ನೀವಿದ್ದೀರಿ, ತಿರುಮೂರ್ತಿಗಳಿದ್ದಾರೆ. ಅರುಣಾಚಲಯ್ಯನವರು ಹಾಕಿಕೊಟ್ಟ ದಾರಿ ತಿಳಿದೇ ಇದೆ. ನನ್ನ ಅಂತರಂಗದ ಬೆಂಬಲವೆಲ್ಲ ನಿಮಗೆ ಇದೆ. ಬಹಿರಂಗದಲ್ಲಿ ಮಾತ್ರ ನಿಮಗೆ ನಾನು ವಿರೋಧಿ."

ಆ ಮಾತುಗಳನ್ನು ಗ್ರಹಿಸಿ, ಮನಸ್ಸಿಗೆ ಸಮಾಧಾನ ತಂದು ಕೊಳ್ಳುವುದು ಕಷ್ಟವಾಗಿತ್ತು. ಅವರ ಪಕ್ಷಕ್ಕೆ ಇದ್ದ ಪ್ರತಿಷ್ಠೆ ಅರುಣಾ ಚಲಯ್ಯನವರ ಮೃತಿಯಿಂದ ಅರ್ಧಕ್ಕರ್ಧ ಹೋಗಿತ್ತು. ಈಗ ಇವಳೂ ಹೋದಳಾದರೆ, ಜನಗಳಿಗೆ ಇನ್ನಷ್ಟು ಅಧೈರ್ಯ ಉಂಟಾಗುವುದು ಸಹಜ ಅವಳು ಪಕ್ಷ ಬದಲಿಸಿದರೆ-ಜನವಾದಿಗಳಲ್ಲಿ ಪ್ರಮಾಣಿಕರೇ ಇಲ್ಲ ಎಂಬ ಅಪಕೀರ್ತಿಯೂ ಅಂಟೀತು ಆ ಸುದ್ದಿಯನ್ನು ತಮ್ಮ ಗೆಳೆಯರಿಗೆ ಮುಟ್ಟಿಸುವುದಂತೂ ಇನ್ನಷ್ಟು ಕಷ್ಟವಾಗಿತ್ತು ಆದರೆ ಆಕೆ ಆಡಿದ ಮಾತಿನಂತೆ, ಜನವಾದಿ ಪಕ್ಷಕ್ಕೆ ತನ್ನ ರಾಜಿನಾಮೆ ಪತ್ರ ವನ್ನು ಆತನ ಕೈಯಲ್ಲಿಯೇ ಇರಿಸಿದಳು ಅದನ್ನು ಹಿಡಿದುಕೊಂಡು ಆತ ಖಿನ್ನವದನನಾಗಿ ತಿರುಮೂರ್ತಿಯ ಬಳಿಗೆ ಹೋಗಿ ಮುಂದಿನ ಭವಿಷ್ಯವನ್ನು ಚರ್ಚಿಸಬೇಕಾಯಿತು ಕಾಂಚನಮಾಲೆ ತನ್ನೊಡನೆ ನುಡಿದ ಯಾವೊಂದು ರಹಸ್ಯವನ್ನೂ ಅವರಿಗೆ ಹೇಳುವಂತಿಲ್ಲ ಹೇಳಿ ದರೂ ನಂಬಲಾರರು ಹೇಳಕೂಡದೆಂದು ಅವಳ ಅಪ್ಪಣೆಯಾಗಿತ್ತು ಒಂದು ದಿನವೆಲ್ಲ ಕಾದು, ತಡೆದು ಅವನಲ್ಲಿಗೆ ಹೋಗುವಾಗ, ನಗರದ ಶ್ರಮವಾದಿ ಪತ್ರಿಕೆಗಳಲ್ಲಿ - ಕಾಂಚನಮಾಲೆ ಶ್ರಮವಾದಿ ಪಂಗಡವನ್ನು ಸೇರಿದ್ದಾಳೆಂಬ ಸುದ್ದಿ ಪ್ರಕಟವಾಗಿತ್ತು

ತಿರುಮೂರ್ತಿ ರಾಮದಾಸನ ಮುಖಕ್ಕೆ ಈ ಪತ್ರಿಕೆಯನ್ನು ಹಿಡಿದು ತೋರಿಸುವುದಕ್ಕೂ, ಆತ ಅವಳ ರಾಜಿನಾಮೆ ಪತ್ರವನ್ನು ಅವನಿಗೆ ತೋರಿಸುವುದಕ್ಕೂ ಸಮವಾಯಿತು ಆತನೆಂದ "ನಿಮಗೆ ನಾನು ಮೊದಲಿನಿಂದಲೂ ಹೇಳುತ್ತಿದ್ದೇನೆ-ಆ ಹೆಂಗುಸು ಇಷ್ಟಿಷ್ಟು ನಂಬಿಕೆಯಲ್ಲದವಳೆಂದು. ಅವಳ ಅಂತರಂಗದಲ್ಲಿ ಯಾವೆಲ್ಲ ಅಭಿಲಾಷೆ ಗಳು ತುಂಬಿವೆಯೆಂದು ಬ್ರಹ್ಮನಿಂದಲೂ ಹೇಳಲು ಬಾರದ ಮಾತು ಇಷ್ಟೆಲ್ಲ ಕೆಲಸ ಮಾಡಿಯೂ ನಮ್ಮ ಪಕ್ಷ ಬಿಟ್ಟುಕೊಡಲು ಕಾರಣ ವೇನು? ನಮ್ಮ ಪಕ್ಷಕ್ಕೆ ಮೊದಲಿಗಿಂತ ಎಷ್ಟೋ ಪಾಲು ಜನಾದರಣೆ ಹುಟ್ಟಿದೆ ಇನ್ನೊಮ್ಮೆ ಅವಳೇ ಪ್ರಧಾನಿಯಾಗ ಬಹುದಿತ್ತು ಆದರೆ ನಿಮಗೆ ಇಷ್ಟು ಹೇಳುತ್ತೇನೆ" ಆಕೆ ತನ್ನ ಹೆಣ್ಣುತನವನ್ನು ಹಿಂದೆ ಯಾರಾರಿಗೋ ಮಾರಿಕೊಂಡವಳು. ಇಂದು ಸೇತುರಾಯನಿಗೆ ಪ್ರತ್ಯಕ್ಷ ಮಾರಿಕೊಂಡಿದಾಳೆ. ಅಂಥ ಸುದಿ ಮೊದಲಿನಿಂದಲೂ

ಹಬ್ಬಿತ್ತು ವಿಧ್ವಂಸಕ ಚಳವಳದ ಕಾಲದಲ್ಲಿ ಆತ ಅವಳ ಮನೆಯಲ್ಲಿಯೇ ಅಡಗಿರುತ್ತಿದ್ದ ಎಂದೂ ಕೇಳಿದ್ದೆ."

"ಇನ್ನು ಆ ಮಾತನ್ನು ಕಟ್ಟಿಕೊಂಡು ಏನು ಫಲ? ಅವಳ ದಾರಿ ಅವಳಿಗೆ, ನಮ್ಮ ದಾರಿ ನಮಗೆ ಬಂದ ಕಷ್ಟ ಅನುಭವಿಸಬೇಕು ನಾವು ಇಲ್ಲಿಯ ತನಕ ಜೋಪವಾದಿಗಳ ದೆಸ್ಸ ನಮಗಿದಿರಾಗಿದ್ದರೆ, ಇನ್ನು ಇವರು ಪ್ರಬಲ ವಿರೋಧಿಗಳು ಅವರಿಗೂ ಬಹು ಮತ ದೊರೆಯಲಾರದಾದರೂ ಮೊದಲಿಗಿಂತ ಹೆಚ್ಚು ಸಂಖ್ಯೆಯಲ್ಲಿ ಆರಿಸಿ ಬಂದಾರು

"ಏನೇ ಆಗಲಿ, ಮುಂದಿನ ಚುನಾವಣೆಯ ತನಕ ನೀವು ಅಧಿಕಾರವನ್ನು ತ್ಯಜಿಸಬೇಡಿ"

'ಪ್ರಧಾನಿಯಾದ ಅವಳೇ ಬಿಟ್ಟರೆ"

"ನೋಡೋಣ ಅವಳು ಬಿಡಲಾರಳು ಅವಳ ಈ ಪಕ್ಷ ವಾತರೋಗ ನನಗಂತೂ ತಿಳಿಯದು ಮೊದಲಿನಿಂದಲೂ ಅವಳ ಮಾತಿನ ಧೋರಣೆ ಕೆಂದಳದವರದು ಒಂದೊಂದೇ ಪಕ್ಷವನ್ನು ಹೊಕ್ಕು, ಹೊರಟು, ಇನ್ನು ಮುಂದೆ ಎಲ್ಲಿಗೆ ಜಿಗಿಯುತ್ತಾಳೆ ಎಂಬುದನ್ನು ನೋಡಬೇಕು"

"ನನಗೆ ಹಾಗೆ ಅನಿಸುವುದಿಲ್ಲ, ನಮ್ಮ ಜತೆಯಲ್ಲಿ ಇಷ್ಟೊಂದು ದೀರ್ಘಕಾಲ ಅವಳು ದುಡಿದುದನ್ನು ಕಂಡರೆ. ಅವಳ ಪ್ರಾಮಾಣಿಕತೆಯ ವಿಚಾರದಲ್ಲಿ ನನಗೆ ಏನು ಅನುಮಾನವಿಲ್ಲ ಅಧಿಕಾರದ ಲಾಲಸೆಯೋ-ಎಂದರೆ ನಮ್ಮಷ್ಟೇ ಇರಬಹುದು, ಅದಕ್ಕಿಂತ ಹೆಚ್ಚಿಲ್ಲ. ಪ್ರಧಾನಿ ಪಟ್ಟಕ್ಕಿಂತ ಹೆಚ್ಚಿನ ಅಧಿಕಾರ ಏನು ಸಿಗುವುದುಂಟು? ಅವಳ ಮನಸ್ಸಿನಲ್ಲಿ ಇನ್ನೇನೋ ಇರಬೇಕು"

ಇನ್ನೇನೋ ಅಂದರೆ – ವ್ಯಕ್ತಿ ಆಕರ್ಷಣೆ, ಸೇತುರಾಯನ ಮೇಲಿನ ಮೋಹ. ಎಷ್ಟೆಂದರೂ ಮದುವೆಯಾಗದ ಹೆಣ್ಣವಳು. ಅವರು ಅನೇಕ ಸಮಿತಿಗಳಲ್ಲಿ ಪ್ರತಿಪಕ್ಷದವರಾಗಿ ವಾದಿಸುವಾಗಲೂ, ಒಬ್ಬರನ್ನೊಬ್ಬರು ನೋಡುತ್ತಿದ್ದ ನೋಟ ಬೇರೆಯೇ ತೆರನಾಗಿತ್ತು.

"ಅದೊಂದು ಅವಳಿಗೆ ಸಾಮಾನ್ಯ ವಿಷಯ. ಹಿಂದೆ ವಾಮನರಾಯ ಅವಳನ್ನೆತ್ತಿ ಕಟ್ಟಿದ್ದೇಕೆ? ಅವಳು ಹೆಣ್ಣೆಂದು. ಆದರೆ ಅವನನ್ನು

ತುಳಿದು ನಿಂತ ಹೆಣ್ಣವಳು ”

“ ಹಾಗಾದರೆ ಈ ಬಾರಿ ನೇತುರಾಯನನ್ನೂ ತುಳಿದಾಳು–ಎನ್ನುತ್ತೀರಾ ”

“ ನನಗೆ ಹಾಗೆ ಕಾಣಿಸುತ್ತದೆ ಅವಳು ಸ್ವಯಂ ಸೇವಕಿ ಆಗಿದ್ದಾಗಿನಿಂದ ನನಗೆ ಅವಳ ಪರಿಚಯವಿದೆ ನಾವು ಜತೆಗೆ ಕೆಲಸ ಮಾಡಿದವರು ಎಲ್ಲರೊಡನೆಯೂ ಸ್ನೇಹವಾಗಿ ವರ್ತಿಸುತ್ತಿದ್ದುದರಿಂದ ಜನ ನಾನಾ ಬಗೆಯಲ್ಲಿ ಅಂದು ಕೊಳ್ಳಬಹುದು ಅವರಲ್ಲಿ ಸ್ನೇಹವಿತ್ತು, ಬಹು ಹಿಂದೆಯೇ ಅವರಿಬ್ಬರು ಮದುವೆಯಾಗುತ್ತಾರೆಂಬ ಸುದ್ದಿಯೂ ಹರಡಿತ್ತು ಅದು ತಪ್ಪಿದ್ದು ಆಶ್ಚರ್ಯವೇ ಅನಂತರ ಬಹುಕಾಲದ ತನಕ ಆಕೆಗೆ ಅವನ ವಿಷಯದಲ್ಲಿ ಒಳ್ಳೆಯ ಅಭಿಪ್ರಾಯವಿರಲಿಲ್ಲ ಈಗ ಹೇಗೋ ಹೇಗೋ ಅವನು ಅವಳನ್ನು ವಶೀಕರಣ ಗೊಳಿಸಿರಬೇಕು ಅಂತೂ ಅದರಿಂದ ಅವಳ ಭವಿಷ್ಯವೇ ಕೆಟ್ಟಿತು ಅದಕ್ಕಿಂತ ಹೆಚ್ಚಾಗಿ ನಮ್ಮ ಭವಿಷ್ಯಕ್ಕೂ ಬಾಧೆ ಬಂತು ” ಎಂದು ರಾಮದಾಸ ಮರುಗಿದ

ಅವರು ತ್ವರೆಯಿಂದ ತಮ್ಮ ಪಕ್ಷದವರನ್ನು ಕರೆಯಿಸಿಕೊಂಡು ಸಮಾಲೋಚನೆ ನಡೆಯಿಸಿದರು ಸುಮ್ಮನೆ ಕುಳಿತಿರುವ ಕಾಲವಲ್ಲ–ಹಿರಿಯ ಚುನಾವಣೆ ಮುಂದ ಗಂಟು ಬಿದ್ದಿದೆ ಅವರು ತಿರುಮೂರ್ತಿಯನ್ನು ಪಕ್ಷದ ಅಧ್ಯಕ್ಷನನ್ನಾಗಿ ಮಾಡಿ ಆತನೊಬ್ಬ ಚುನಾವಣೆಯ ಸ್ಪರ್ಧೆಯಿಂದ ಹೊರಗ ನಿಂತು ನಡೆಯಿಸಬೇಕೆಂದು ನಿಶ್ಚಯಿಸಿದರು ಪಕ್ಷದ ಪ್ರಚಾರಕ್ಕಾಗಿ ಎಲ್ಲ ತಯಾರಿಗಳನ್ನು ನಡೆಯಿಸಿದರು

ಕಾಂಚನಮಾಲೆ ತಾತ್ಕಾಲಿಕ ಸರಕಾರಕ್ಕೆ ಇನ್ನೂ ನಾಯಕಿಯಾಗಿಯೇ ಉಳಿದಳು ಹಾಗಿದ್ದುದರಿಂದ ರಾಮದಾಸರಂಥ ಸಹಚರರೊಡನೆ ಸ್ನೇಹ, ಸಂಪರ್ಕಗಳಿಗೆ ವಿಘ್ನವಿರಲಿಲ್ಲ ಕೆಲವು ದಿನ ಕಳೆದ ಮೇಲೆ ಅವಳು ರಾಮದಾಸನ ಮನೆಗೆ ನೇರಾಗಿ ಬಂದು ಮಾತನಾಡುತ್ತಾ “ ನಾನು ನಿಮ್ಮ ಪಕ್ಷವನ್ನು ಬಿಟ್ಟು ಅವರನ್ನು ಸೇರಿದರೂ ಈ ಚುನಾವಣೆಯಲ್ಲಿ ಸ್ಪರ್ಧಿಸುವುದಿಲ್ಲ ”–ಎಂದಳು

ಅದರಿಂದ ಆತನಿಗೊಂದು ಹೆಚ್ಚಿನ ಸಂತೋಷವಿಲ್ಲ ಆತ “ನೀವು ನಮ್ಮನ್ನು ವಾಮಪಕ್ಷದ ಮೈತ್ರಿಗೆ ಎಳೆದಾಗಲೇ, ಲಾಲಚಂದ,

ಸುನೀತರನ್ನು ಕರೆದುಕೊಂಡಾಗಲೇ ನಮಗೆ ವ್ಯಥೆಯಾಗಿತ್ತು. ನಿಮ್ಮ ಮಾತನ್ನು ನಂಬಿ ನಾವು ಸುಮ್ಮನಾದೆವು ಈಗ ಬಹಿರಂಗವಾಗಿ ಅವರ ಪಕ್ಷದವರೆನಿಸಿಕೊಂಡಾಗ, ನಿಮ್ಮ ಸ್ನೇಹ ತಪ್ಪಿದ್ದು ಮಾತ್ರವಲ್ಲ, ಜನಗಳ ಎದುರಿಗೆ ತಲೆ ತೋರಿಸುವುದು ಕಷ್ಟವಾಗಿದೆ ದೇಶವಾದಿಗಳಿಗೆ ಅದೊಂದು ದೊಡ್ಡ ಆಯುಧವಾಗಿದೆ 'ಈ ಜನವಾದಿಗಳು, ಮಧ್ಯಮ ಪಕ್ಷದವರು, ಪಕ್ಷಿಯೂ ಅಲ್ಲ, ಮೃಗವೂ ಅಲ್ಲ, ಬಾವಲಿಗಳು'–ಎನ್ನ ತೊಡಗಿದ್ದಾರ ಪತ್ರಿಕೆಗಳಲ್ಲೆಲ್ಲ ಅದೇ ಟೀಕೆ ಕೇಳಿ ಕೇಳಿ ಬೇಸರ ಬಂದಿದೆ"

"ಹೋಗಲಿ ಆ ಮಾತು ನಾನು ನಿಮ್ಮ ಪಕ್ಷ ಬಿಟ್ಟದ್ದು ನಿಜ, ಅವರನ್ನು ಸೇರುವುದು ನಿಜ ಸೇರಿದ್ದೇನೆಂದು ಜನರಾಡುವುದೂ ನಿಜ ನಿಮಗೆ ಅಪಕೀರ್ತಿ ತಂದು ನಿಮ್ಮೆಲ್ಲರ ವಿಶ್ವಾಸವನ್ನು ಕಳೆದು ಕೊಂಡುದೂ ನಿಜ ಆದರೆ ನನಗೆ ಮಾತ್ರ ನಿಮ್ಮಲ್ಲಿ ವಿಶ್ವಾಸವಿದೆ"

"ಅದರಿಂದ ಪ್ರಯೋಜನವೇನು? ನಾಳಿನ ಚುನಾವಣೆಯಲ್ಲಿ ನಮಗೆ ಬಹುಮತ ದೊರೆತೀತೆಂದು ಹೇಳುವುದು ಕಷ್ಟ ಅವರಿದ್ದಾಗ ಬೇರೆ ಮಾತು ಅವರ ಪ್ರತಿಷ್ಠೆಯಿಂದ ಹಣವಿಲ್ಲದೆಯೂ ಕೆಲಸ ನಡೆಯಿತು ಈಗ ನಮ್ಮಲ್ಲಿ ಹಣವಂತರಾರೂ ಇಲ್ಲ ನಾನೇ ಮಂತ್ರಿಯಾಗಿದ್ದೂ ನಾಲಕ್ಕ ತುತ್ತಾದವನು ಈ ನಡುವೆ ಎಲ್ಲಾದರೂ ಚುನಾವಣೆ ಬರುವ ಮುಂಚೆಯೇ ನೀವು ಪ್ರಧಾನಿತನಕ್ಕ ರಾಜಿನಾಮೆ ಸಲ್ಲಿಸಿದರೆ ನಮ್ಮ ಸ್ಥಿತಿ ಮತ್ತೂ ಚಿಂತಾಜನಕವಾಗುತ್ತದೆ"

ಕಾಂಚನಮಾಲೆ ಆಚೀಚೆ ನೋಡಿದಳು "ರಾಮದಾಸ್, ನಾನು ಅರುಣಾಚಲಯ್ಯನವರ ಕೊರಳಾಣೆಯಾಗಿ ಹೇಳುವ ಮಾತಿದು–ನನ್ನ ಯಾವ ಬಹಿರಂಗ ವರ್ತನೆಗೂ ನೀವು ಬೆಲೆ ಕೊಡಬೇಡಿ, ಅದಕ್ಕಾಗಿ ಚಿಂತಿಸಬೇಡಿ ಅಂತರಂಗದಲ್ಲಿ ನಾನು ನಿಮ್ಮವಳು ಶ್ರಮವಾದಿಯೆಂದೂ ಅಲ್ಲ ನನ್ನ ಮೇಲೆ ಸಿಟ್ಟು ಕಾರುತ್ತಿರುವ ತಿರುಮೂರ್ತಿಯವರ ವಿಷಯದಲ್ಲಿಯೂ ನನಗೆ ಪ್ರೀತಿಯಿದೆ. ಅವರು ಯೋಗ್ಯರು, ಪ್ರಾಮಾಣಿಕರು ಅವರು ಪಕ್ಷದ ಅಧ್ಯಕ್ಷರಾದುದು ಚೆನ್ನಾಯಿತು ನಿಮ್ಮ ಪಕ್ಷಕ್ಕೆ ಇನ್ನೂ ನಾಲ್ಕು ಹೆಸರನ್ನು ಸೂಚಿಸುತ್ತೇನೆ ಅವರು ನನ್ನವರು, ನಂಬಿಕೆಗೆ ತಕ್ಕವರು. ಅವರನ್ನು ಸೇರಿಸಿ

ಕೊಂಡು ಕೆಲಸಮಾಡಿ. ಅದಕ್ಕಾಗಿ ನಾನು ಬಂದೆ. ಚುನಾವಣೆಯ ಖರ್ಚಿಗೂ ಹೆದರಬೇಡಿ. ನನ್ನ ಸ್ನೇಹಿತರಿಂದ, ಜನವಾದಿ ಹಿತೈಷಿಗಳಿಂದ ಸಾಕಷ್ಟು ಹಣ ಬೇಡಿ ತಂದಿದ್ದೇನೆ" ಎಂದು ನಾಲ್ವತ್ತು ಸಾವಿರದಷ್ಟು ನೋಟುಗಳನ್ನು ಅವನ ಕೈಯಲ್ಲಿರಿಸಿದಳು "ಇನ್ನೂ ಸಾಧ್ಯವಾದರೆ ಕೊಡುತ್ತೇನೆ" ಎಂದಳು.

"ನಿಮ್ಮ ರೀತಿಯೇ ನನಗೆ ತಿಳಿಯುವುದಿಲ್ಲ"

"ತಿಳಿಸುವ ಕಾಲ ಬಂದಾಗ ಅದನ್ನು ತಿಳಿಸುತ್ತೇನೆ ಇವತ್ತಿನ ಸಂದರ್ಭ, ಮಾತುಕತೆ ನಿಮ್ಮಲ್ಲಿರಲಿ ನಿಮ್ಮ ಹುರಿಯಾಳು ಯಾರೆಂದು ಆರಿಸಿದ ಮೇಲೆ ತಿಳಿಸಿ ಈ ಬಾರಿ ನಾನು ಸ್ಪರ್ಧೆಗೆ ಇಳಿಯದೆ ಸೇತುರಾಯನನ್ನು ಮುಂದೆ ತಳ್ಳುತ್ತೇನೆ ಮುಂದೆಯೂ ಸಮ್ಮಿಶ್ರ ಸರಕಾರವೇ ಗತಿ ಅದಕ್ಕೆ ನೀವು ಇರಬೇಕು, ನೇರಬೇಕು"

"ಅವರೇ ಬಹುಪಕ್ಷ ಬಂದರೆ."

"ಬಂದಾರೆನ್ನುತ್ತೀರಾ? ನೆಟ್ಟಗಿನ ದಾರಿಯಿಂದ ಬರಲಾರರು. ಒಂದು ನಾಲ್ಕು ದಿನ ಕುಣಿದಾಡುವುದಾದರೆ ಕುಣಿಯಲಿ. ಅಷ್ಟೆ-ನಾಲ್ಕೇ ನಾಲ್ಕು ದಿನ" ಎಂದು ನಕ್ಕಳು ತಿರುಗಿ "ನನ್ನನ್ನು ನಂಬಿ-ನಾನು ನಿಮ್ಮನ್ನಾಗಲೀ, ಗೊಂಡಾರಣ್ಯದ ಜನಗಳನ್ನಾಗಲೀ ವಂಚಿಸುವುದಕ್ಕೆ ಹೊರಟವಳಲ್ಲ ನನಗೆ, ಸ್ವಂತಕ್ಕೆ, ಎಷ್ಟು ಕೆಟ್ಟ ಹೆಸರು ಬಂದರೂ ಅದನ್ನು ಹೊರುವುದಕ್ಕೆ ಸಿದ್ಧ"

ಆಕೆಗೆ ಚುನಾವಣೆಯ ದಿನದ ತನಕ ಒಂದು ವಿಶೇಷ ಕಾರಣಕ್ಕಾಗಿ, ಅಧಿಕಾರದಲ್ಲಿ ಕುಳಿತುಕೊಂಡಿರುವುದು ಅವಶ್ಯವಾಗಿತ್ತು ಆಕೆ ಪ್ರಧಾನಿಯಾಗಿರುವುದರಿಂದ ಉಳಿದ ಮಂತ್ರಿಗಳು ಕಾರ್ಯ ನಿರ್ವಹಣ ಮಾಡುತ್ತಾರೆ. ಅವಳೀಗ ಶ್ರಮವಾದಿ ಪಕ್ಷಪಾತಿ ಎಂಧು ತೋರಿಸಿಕೊಂಡರೂ, ಸೇತುರಾಯ ಅವಳಲ್ಲಿರಿಸಿದಂಥ ವಿಶ್ವಾಸವನ್ನು, ಲಾಲಚಂದ ಇರಿಸಿದವನಲ್ಲ ಇವಳು ಅವನ ಚಟುವಟಿಕೆಯನ್ನು ಹೊಂಚು ಹಾಕುತ್ತಿದ್ದಂತೆಯೇ ಅವಳ ಚಟುವಟಿಕೆಗಳನ್ನು ಇಣಿಕಿ ನೋಡುತ್ತಿದ್ದ. ಅದು ಅವಳಿಗೂ ಚೆನ್ನಾಗಿ ತಿಳಿದಿತ್ತು ಈ ಪರಸ್ಪರ ಅವಿಶ್ವಾಸದ ಆವರಣದಲ್ಲಿ ಅವರ ಕೆಲಸಗಳು ನಡೆಯಬೇಕಾಗಿದ್ದುವು.

ಕಾಂಚನಮಾಲೆಗೆ ತನ್ನ ಅಧಿಕಾರದ ಅವಧಿಯಲ್ಲಿ, ಎಷ್ಟೆಂದರೂ ವಿಶ್ರಾಂತಿ ಕಡಿಮೆ. ಮನೆಗೆ ಬರುವಾಗಲೇ ತಡ, ಬಂದಮೇಲೆಯೂ ಕೆಲಸದ ಹೊರೆ ಇದ್ದೇ ಇರುತ್ತದೆ ಹೀಗೊಂದು ದಿನ ಬಂದು, ತೀರ ದಣಿದು, ಊಟ ಮುಗಿಸಿ, ರಾತ್ರಿ ಮಲಗಿಕೊಂಡಿದ್ದಳಷ್ಟೆ ಫೋನ್ ಕರೆ ಬಂದಿತು ಫೋನಿಗೆ ಕೈ ಕೊಟ್ಟು ಧ್ವನಿ ಕೇಳಿದಳು "ಯಾರು? ಮುದ್ದು ವೇ" ಎಂದಳು ಧ್ವನಿ ಗುರುತಿಸಿ

"ಹೌದಮ್ಮ"

"ರಾಯರಿಲ್ಲವೇ?"

"ಲಾಲಚಂದರೊಡನೆ ಈಗಷ್ಟೆ ಕಾರಿನಲ್ಲಿ ಕುಳಿತು ಹೋದರು ಪ್ರಾಯಶಃ ಅವರ ಇನ್ನರ್ ಸರ್ಕಲ್ ಮೀಟಿಂಗ್ ಇರಬೇಕು ನೀವು ಹೊರಟಿಲ್ಲ"

"ನಾನು–ಔಟರ್ ಸರ್ಕಲ್ ಅಲ್ಲವೇ? ಏನು ಸುದ್ದಿ–ಹೇಳು."

"ಓ, ಇವತ್ತು ಅವರು ಇವರಲ್ಲಿ ತುಂಬ ಬಿಸಿಬಿಸಿ ಮಾತುಗಳಾದುವು. ನಮ್ಮ ರಾಯರು 'ನಮ್ಮ ಪಕ್ಷಕ್ಕೆ ಹೊರಗಿನ ರಾಜಕೀಯ ಪಕ್ಷಗಳ ಸಂಬಂಧವಿಲ್ಲ' ಎಂದು ಸಾರಿದ ಬಗ್ಗೆ ಲಾಲಚಂದರು ಬಹಳ ರೇಗಿ ಮಾತನಾಡಿದರು 'ನೀನು ಆ ಹೆಂಗುಸಿಗೆ ಮಾರಿ ಹೋದಂತಿದೆ. ಅವಳು ಬಲು ಅಪಾಯಕರ ಪ್ರಾಣಿ ನಮ್ಮ ಪಕ್ಷಕ್ಕೆ ಅವಳು ಬರುವುದರಿಂದ ಜನವಾದಿಗಳಗೆ ಬೆಂಬಲ ಕಡಮೆಯಾಗುವುದಾದರೂ ನಮ್ಮ ಶಕ್ತಿ ಹೆಚ್ಚುವುದಿಲ್ಲ ಅವಳನ್ನು ಸೇರಿಸಿಕೊಂಡು ಪಕ್ಷದ ಅಧ್ಯಕ್ಷಳನ್ನಾಗಿ ಮಾಡುವ ವಿಚಾರ ನನಗೆ ಏನೇನೂ ಸಮ್ಮತವಿಲ್ಲ, ಇದರಲ್ಲಿ ಪಕ್ಷ ಒಡಕು ಬರುತ್ತದೆ, ನಮ್ಮ ಗೆಳೆಯರಿಗೆ ನಿಮ್ಮ ಮೇಲೆಯೂ ಅವಿಶ್ವಾಸ ಹುಟ್ಟೀತು' ಎಂದರು"

ಕಾಂಚನಮಾಲೆ ನಕ್ಕಳು: "ಆತ ಹೇಳುವುದು ಸರಿಯೆ ಅವನಿಗೆ ನನ್ನಲ್ಲಿ ವಿಶ್ವಾಸವಿಲ್ಲ ಇರಲಿ, ರಾಯರೇನಂದರು?"

"ಯಾಕೆ ಲಾಲ್, ನೀನು ನನ್ನಲ್ಲಿ ವಿಶ್ವಾಸವನ್ನಿಡಬಾರದು? ನನ್ನ ಯಾವ ಹಂಚಿಕೆ ಕೆಟ್ಟು ಹೋಗಿದೆ? ಅವಳು ನಮ್ಮ ಪಂಗಡಕ್ಕೆ ಬರುವುದು ನಮ್ಮ ಭಾಗ್ಯ ಮೊದಲಿನಿಂದಲೂ ಅವಳಿಗೆ ನಮ್ಮ ಧ್ಯೇಯದಲ್ಲಿ ಒಪ್ಪಿಗೆಯಿದೆ ಭೀಮನೂರು ಸತ್ಯಾಗ್ರಹದಂತಹ

ಒಂದೆರಡು ಪ್ರಸಂಗಗಳಲ್ಲಿ ವೈಮನಸ್ಸು ಬಂದದ್ದು ನಿಜ. ನನ್ನ ಭಯ ಅದಲ್ಲ–ಅವಳು ನಮ್ಮ ಕ್ರಾಂತಿ ವಿಧಾನ ಒಪ್ಪುವ ಮೊದಲು, ಜನವಾದಿಗಳ 'ನಿಧಾನ ವಿಕಾಸ'ವನ್ನು ಮೆಚ್ಚಿ ಕೆಲಸಮಾಡುವುದನ್ನು ಮೊದಲು ತಪ್ಪಿಸಬೇಕಾಗಿದೆ ಪಕ್ಷದ ಮುಂದಾಳುತನದ ಆಸೆ ತೋರಿಸಿ, ನಮ್ಮ ಕೆಲಸ ಸಾಧಿಸಬೇಕು ಅವಳು ಕೆಲಸಗಾರಳು. ಅವಳು ತೊಡಗಿದ ಕೆಲಸಗಳು ಯಶಸ್ವಿಯಾಗುತ್ತ ಬಂದರೆ ನಾಳೆ ಜನ, ಅದರಲ್ಲಿಯೂ ಬಡವರು, ಅವಳನ್ನು ಆರಾಧಿಸುತ್ತಾರ, ಆ ದಾರಿಯನ್ನು ಒಲಿಯುತ್ತಾರೆ ಇದು ರಾಷ್ಟ್ರ ಕ್ರಾಂತಿಗೆ ದೊಡ್ಡ ವಿಘ್ನ' ಎಂದರು. ಆದಕ್ಕೆ ಲಾಲಚಂದರು 'ಆ ಭಯ ನನಗೂ ಇದೆ ಅಂಥ ಪ್ರಸಂಗ ಬಾರದಂತ ಮಾಡಬೇಕಾದ್ದು ನಿಜವೇ ಆದರೆ ಅವಳು ಮಂತ್ರಿ ಪದವಿಯಲ್ಲಿರುವ ನನ್ನ ಮೇಲೆಯೂ ಕಾವಲಿರಿಸಿದ್ದಾಳೆ ಎಂದು ಗೊತ್ತೇ? ನಾಳ ನಮ್ಮ ಯಾವ ಕೆಲಸವನ್ನೂ ನಡೆಯಗೊಡಲಾರಳು?'

"'ನೀನು ಅಷ್ಟು ಅನುಮಾನವನ್ನಿರಿಸಬಾರದು ಅವಳನ್ನು ಕರೆದು, ಒಲಿಸಿ ಜನವಾದಿಗಳನ್ನು ಮುರಿಯುವುದಕ್ಕೆ ಯಾವ ಬಲೆಯೂ ಹೆಚ್ಚಲ್ಲ ನಾವು ಬಹುಮತದಿಂದ ಆರಿಸಿ ಬಂದರೆ, ಅರುಣಾಚಲಯ್ಯನವರ ಎಲ್ಲ ಪ್ರೋಜೆಕ್ಟುಗಳನ್ನೂ ಸಬೊಟೇಜ್ ಮಾಡುವ ದಾರಿ ನಮಗೆ ಗೊತ್ತಿದೆ ಬಹು ಸಂಖ್ಯಾತರಾಗಿ ಬಾರದಿದ್ದಾಗ, ಸಮ್ಮಿಶ್ರ ಸರಕಾರಕ್ಕೆ ಅವರೇ ಬೇಕಾದೀತು ಆದುದರಿಂದ ಉಪಾಯವಾಗಿ ಅಂತಹ ಮಾರ್ಗ ಪ್ರಯೋಜನಕ್ಕೆ ಬರಲಿಲ್ಲವೆಂದು ತೋರಿಸಿಕೊಟ್ಟು, ಅವಳನ್ನು ನಮ್ಮದಾರಿಗೆ ಒಲಿಸಬೇಕು'

'ಅದು ಸಾಧ್ಯವಾಗದಿದ್ದರೆ?'

'ಅರುಣಾಚಲಯ್ಯನಿಗೆ ತೋರಿಸಿದ ದಾರಿಯೇ ಅವಳಿಗೆ?' ಹೀಗೆಂದು ಕೈಮೇಲೆ ಕೈಯಿಟ್ಟು ಮಾತಾದ ಮೇಲೆಯೇ ಅವರಿಗೆ ಸಮಾಧಾನವಾದುದು."

ಒಂದು ಕ್ಷಣಕ್ಕೆ ಕಾಂಚನಮಾಲೆ ಸ್ತಬ್ಧಳಾದಳು, "ಮುದ್ದು, ಮಲಗಿಕೋ ತುಂಬ ಉಪಕಾರಮಾಡಿದಿ"

"ಅಮ್ಮಾ, ಅರುಣಾಚಲಯ್ಯನ ದಾರಿಯೆಂದಿರಲ್ಲ ಏನು."

"ಸುಮ್ಮನಿರು, ಮಲಗಿಕೋ, ಮನೆಗೆ ಬಂದಾಗ ಹೇಳುತ್ತಾನೆ

ಜಾಗ್ರತೆಯಿಂದ ಇರು ಅದಿರಲಿ ನಿನ್ನ ಸಂಗತಿಯೇನು? ಮುಂದಿನ ತಿಂಗಳಿಂದ ಮೂವತ್ತು ರೂಪಾಯಿ ಸಂಬಳ ಕೊಡುತ್ತಾರೇನು?"

"ಅವರ ಸಂಬಳಕ್ಕೆ ಬೆಂಕಿ ಬಿತ್ತಮ್ಮ, ನಿಮ್ಮ ಮಾತು ಕೇಳಿ ಬಂದೆ ಹೊರತು ಸಂಬಳಕ್ಕಲ್ಲ. ಈಗ ಗುಟ್ಟು ತಿಳಿದ ಮೇಲೆ ಇರುವ ಹಟವಾಗಿದೆ ಇವರು ಬಡವರಿಗೆ ಉಪಕಾರ ಮಾಡುತ್ತಾರಂತೆ-ದಿನವೆಲ್ಲ ದುಡಿದು ಅಡುಗೆ, ಪರಿಚಾರಿಕೆ ಮಾಡುವವರಿಗೆ ಇಪ್ಪತ್ತು ರೂಪಾಯಿ ಕೊಡುವುದಕ್ಕೆ ಕಣ್ಣೀರು ಕರೆಯುತ್ತಾರೆ, ಇನ್ನು ಮೂವತ್ತು ಕೊಡುವ ಕಾಲವುಂಟೇ? ನನ್ನ ಅಪ್ಪನಿಗೆ ಮಾಡಿದ ಉಪಕಾರ ಸಾಕು"

"ಮಲಗಿಕೋ ಹೋಗು, ನನಗೂ ದಣಿವಾಗಿದೆ ನನಗಾಗಿ ಒಂದಷ್ಟು ದಿವಸ ಕಷ್ಟಪಡು, ಅವರು ಸಂಬಳ ಕೊಡದಿದ್ದರೂ ನಾನು ಕೊಡುತ್ತೇನಲ್ಲ"

ಅಲ್ಲಿಂದ ಅವಳು ಮಾತು ನಿಲ್ಲಿಸಿ ಹಾಸಿಗೆಯ ಮೇಲೆ ಹೊರಳಾಡಿದಳು ಈಗಷ್ಟೇ ಮುದ್ದು ತಿಳಿಸಿದ ಸಮಾಚಾರದಿಂದ ಅವಳ ಮನಸ್ಸು ಇನ್ನಷ್ಟು ವ್ಯಗ್ರವಾಯಿತು ಇವರಂತಹ ಖಳನಾಯಕರಿಗೆ ಪ್ರತಿನಾಯಕತನ ನಟಿಸುವ ನಿರ್ಧಾರ ಇನ್ನೂ ಬಲವಾಯಿತು 'ಅರುಣಾಚಲಯ್ಯನವರ ಗತಿ ತನಗೆ'- ಎಂದ ಬೆದರಿಕೆ, ಅವಳಲ್ಲಿ, ಆ ಗತಿಗೆ ಕಾರಣರಾರು, ಎಂಬುದನ್ನು ಸಂಪೂರ್ಣ ಖಚಿತ ಪಡಿಸಿತು ಅಲ್ಲಿಯ ತನಕ ಅವರು ನಟ್ಟು ಬೆಳಯಿಸಿದ ತೋಟವನ್ನೇ ಕಿತ್ತೆಸೆವ ಅವರ ಹಂಚಿಕೆಯನ್ನು ನೆನೆದು, ತಾನು ಅಧಿಕಾರದಿಂದ ನಿವೃತ್ತಿಗೊಳ್ಳುವುದಾಗಲೀ, ಚುನಾವಣೆಯಿಂದ ದೂರವಿರುವುದಾದಲೀ ಹಿತವೆಂದು ತೋರಲಿಲ್ಲ

ಅಲ್ಲಿಂದ ಅವಳ ಮನಸ್ಸು, ಸೇತುರಾಯನ ಮನೆಯಲ್ಲಿ ತಾನು ಉದ್ದೇಶಪೂರ್ವಕವಾಗಿ ನಟ್ಟ ಮುದ್ದುವಿನ ವಿಚಾರಕ್ಕೆ ಸರಿಯಿತು. ಆ ಹುಡುಗ ತನಗಾಗಿ ಅಲ್ಲಿ ಉಳಿದಿದ್ದಾನೆ ಅವನ ಕೆಲಸ ಕಷ್ಟದ್ದು ನಂಬೀಶನನ್ನು ಶ್ರಮವಾದಿಗಳು ಅರುಣಾಚಲಯ್ಯನವರ ಸೇವೆಯಲ್ಲಿ ನೆಟ್ಟಂತೆ ಪ್ರತೀಕಾರ ರೂಪದಲ್ಲಿ ಇವಳು ಮುದ್ದನನ್ನು ಅಲ್ಲಿರಿಸಿದ್ದಳು. ಮುದ್ದುವಿನ ಕತೆ ಹೊಸತೇನಲ್ಲ ಆತ ಮಾನಪ್ಪನ ಮಗ. ಮುಕುಂದನ

ಮೊಮ್ಮಗ ನೀರ್ಕಟ್ಟೆಯ ಪ್ರಕರಣದಲ್ಲಿ ತಂದೆಯನ್ನು ಕಳೆದುಕೊಂಡ ಆ ಹುಡುಗ ತಾಯಿ, ತಮ್ಮ, ತಂಗಿಯರೊಡನೆ ಅಜ್ಜನ ಮನೆಯನ್ನು ಸೇರಿದ ಮುಕ್ಕಣ್ಣನ ಭಾರ ತಗ್ಗಿಸುವುದಕ್ಕೆ, ಅವನಿಗೆ ತನ್ನ ಕೃತಜ್ಞತೆ ಸಲ್ಲಿಸುವುದಕ್ಕೆಂದೇ ಇವಳು ಅವನನ್ನು ತನ್ನ ಮನೆಗೆ ಕರೆದು ತಂದು ಕೆಲಸಕ್ಕೆ ಇರಿಸಿಕೊಂಡಳು ಒಳ್ಳೆಯ ಸ್ವಭಾವದ ಚುರುಕಿನ ಹುಡುಗ ಆದರೆ ತಂದೆಯ ಮೂರ್ಖತನದಿಂದ ಯಾವೊಂದು ಶಿಕ್ಷಣವಿಲ್ಲದವನಾಗಿದ್ದ ಅಂಥ ಹುಡುಗನನ್ನು ಮನೆಯಲ್ಲಿ ತಂದಿರಿಸಿಕೊಂಡಳು ಖಾಸಗಿಯಿಂದ ಪಾಠ ಹೇಳುವುದಕ್ಕೆ ವ್ಯವಸ್ಥೆ ಮಾಡಿದಳು ಅವನ ಸ್ವಭಾವ, ಕೆಲಸ ಕಂಡಷ್ಟು ಸಂತೋಷವಾಗುತ್ತಿತ್ತು ಅಲ್ಲಿಗೆ ಬಂದಮೇಲೆಯೇ ಆತನಿಗೆ ತನ್ನ ತಂದೆಯನ್ನು ಬಲಿಗೊಂಡ ರಾಜಕೀಯದ ಹಿನ್ನೆಲೆಯು ಸಂಪೂರ್ಣ ಅನುಭವವಾದದ್ದು ಕಾಂಚನಮಾಲೆ ಮುಕ್ಕಣ್ಣನಿಗೆ, ಮೊಮ್ಮಗನ ಸಂಬಳವೆಂದು ಪ್ರತಿ ತಿಂಗಳು ಮೂವತ್ತು ರೂಪಾಯಿ ಕಳಿಸುತ್ತಿದ್ದಳು ಮುದ್ದು ಅವಳ ಹಿಂದೆಯೇ ಸಂಚಾರಕ್ಕೂ ಹೋಗಿ ಬರುವ ತೈನಾತಿಯಾಗಿದ್ದ

ಒಂದು ದಿನ ಆಕೆ ಸೇತುರಾಯನ ಮನೆಯಲ್ಲಿ ಉಪಾಹಾರಕ್ಕೆ ಕುಳಿತಾಗ, ಅವನ ಓರಣವಿಲ್ಲದ ಕೊಠಡಿಯನ್ನು ಕಂಡು, ಶುಚಿಯಿಲ್ಲದ ಕೆಲಸದವನ ಕೈಯಿಂದ ಚಹ ತೆಗೆದುಕೊಂಡು ಕುಡಿಯುವ ಪ್ರಸಂಗ ಬಂದಾಗ, ವಿನೋದಕ್ಕಾಗಿ "ಮಿ. ಸೇತುರಾವ್, ಒಂದು ನಾಲ್ಕು ಚೆನ್ನಾದ ಕಪ್ಪು, ಬಸಿ ತಂದಿರಿಸಿಕೊಳ್ಳಬಾರದೇ ? ಒಬ್ಬ ಶುಚಿಯಾದ ಕೆಲಸಗಾರ ಸಿಗನೇ ? ವೆಚ್ಚ ಹೆಚ್ಚುತ್ತದೆ ಎಂದು ಮದುವೆಯನ್ನು ಮಾಡಿಕೊಳ್ಳಲಿಲ್ಲ-ಹೋಗಲಿ, ಇಷ್ಟಾದರೂ ಮಾಡಿ" ಎಂದಳು

ಸೇತು ಅವಳ ಮುಖವನ್ನು ನೋಡಿ, ಕೊನೆಯ ಮಾತಿಗಾಗಿ ನಕ್ಕ ತಮ್ಮಿಬ್ಬರ ಪ್ರಣಯ ಸೇತು ಮುರಿದದ್ದು ಗೊತ್ತಿದ್ದ ವಿಚಾರವೇ. ತಿರುಗಿ ಯಾರಾದರೊಬ್ಬರು ಆ ವಿಷಯವನ್ನು ಎತ್ತುವುದು ಅವನಿಗೆ ಇಷ್ಟವಾಗಿತ್ತು ಆತ ಅದಕ್ಕೆ "ಈತ ಇದ್ದಾನೆ, ಬೇರೆಯೇ ಚೆನ್ನಾದ ಕೆಲಸಗಾರರು ಸಿಗಬೇಕಲ್ಲ. ಇವನಿಗೆ ಚಹಾ ಮಾಡಲಿಕ್ಕೂ ಬಾರದು ಸಿಕ್ಕಿದರೆ ನಿಮ್ಮ ಮನೆಯ ಆ ಹುಡುಗನಂತಿರುವವರು ಸಿಗಬೇಕು" ಎಂದು ತುಸು ತಡೆದು "ಅವನಿಗೆ ಎಷ್ಟು ಕೊಡುತ್ತೀರಿ?"

ಎಂದು ಪ್ರಶ್ನಿಸಿದ

"ಊಟ, ಅರಿವೆ ಹೋಗಿ ತಿಂಗಳಿಗೆ ಮೂವತ್ತು."

"ಮೂವತ್ತೇ ? ತುಂಬ ಹೆಚ್ಚಲ್ಲವೇ"

ಆಕೆ ತನ್ನ ಮನಸ್ಸಿನೊಳಗೇ ನಕ್ಕಳು "ಹೆಚ್ಚೇನು ಕಡಮೆ ಯೇನು? ಆಯಾ ಪದಾರ್ಥಕ್ಕೆ ಅದರದರ ಬೆಲೆಯಿಲ್ಲವೆ! ನಂಬಿಕೆಯ ಹುಡುಗ ಗುಣ, ನಡತೆ ಎಲ್ಲ ಚೆನ್ನಾಗಿದೆ"

"ಎಲ್ಲಿಯವನು ?"

"ಅವನೋ, ನಿಮಗೆ ಕೇಳಿ ಆಶ್ಚರ್ಯವಾದೀತು, ನಿಮ್ಮದೇ ಬಳುವಳಿ"

"ನನ್ನ ಬಳುವಳಿಯೇ"

"ಹುಂ, ನೀರ್ಕಟ್ಟೆಯ ಸತ್ಯಾಗ್ರಹದಲ್ಲಿ ಸತ್ತನಲ್ಲ-ಮಾನಪ್ಪ ಎಂಬವ-ಅವನ ಹುಡುಗ ಅವನ ಅಜ್ಜ ನನಗೆ ಗೊತ್ತು ತುಂಬ ಕಷ್ಟದ ಜೀವನ ಈ ಮುದಿ ವಯಸ್ಸಿನಲ್ಲಿ ಮಗ ಸತ್ತು, ಮೊಮ್ಮಕ್ಕಳನ್ನು ಸಾಕುವ ಹೊಣೆ ಬಿದ್ದದ್ದನ್ನು ನೋಡಿ ಕರೆದು ತಂದೆ"

"ನಮ್ಮಲ್ಲಿಗೆ ಬಂದಾನೇ ?"

"ನಾನು ಒತ್ತಾಯ ಮಾಡಿ ಕಳುಹಿಸಿದರ ಹೋದಾನೋ ಏನೋ, ಆದರೆ ನನಗೆ ಜನಗಳು ಬೇಕಲ್ಲ"

"ನಿಮಗೇನು ? ಒಬ್ಬರಲ್ಲ-ನಾಲ್ಕು ನಾಲ್ಕು ಮಂದಿ ಕೆಲಸಗಾರ ರಿದ್ದಾರೆ ನನ್ನದು ಬರಿಯ ಗಂಡೂ ಬಿಡಾರ ಅವನ ತಂದೆ ಬಹು ನಂಬಿಕೆಯವ ನೋಡಿ, ಕಳುಹಿಸುವ ಪ್ರಯತ್ನಮಾಡಿ"

ಹೀಗಾಗಿ ಆ ಹುಡುಗನ ವಿಚಾರದಲ್ಲಿ ಸೇತುರಾಯನಿಗೆ ಆಸಕ್ತಿ ಹುಟ್ಟಿದ್ದನ್ನು ನೋಡಿ, ಕಾಂಚನಮಾಲೆ ಅವನನ್ನೊಪ್ಪಿಸಿ ಅಲ್ಲಿಗೆ ಕಳುಹಿಸಿಕೊಟ್ಟಳು ಉದ್ದೇಶಪೂರ್ವಕವಾಗಿ ಕಳುಹಿಸಿಕೊಟ್ಟಳೆಂದರೂ ಸರಿಯೆ ಅಲ್ಲಿಂದ ಸೇತುರಾಯನ ಮನೆಯ ದಿನ ನಿತ್ಯದ ವರದಿಗಳು ಅವಳನ್ನು ಸೇರುತ್ತಿದ್ದುವು ಸೇತುರಾಯನನ್ನು ಹುಡುಗನ ವಿಚಾರದಲ್ಲಿ ಆಸಕ್ತಿ ಹುಟ್ಟಿಸುವುದಕ್ಕೆ ಕಾರಣವಾದ "ಮದುವೆ ಯಂತೂ ಮಾಡಿಕೊಂಡಿಲ್ಲ" ಎಂಬ ಮಾತು ಚಿಗುರೊಡೆಯದೆ ಅಲ್ಲಿಗೇ ನಿಂತಿತು. ಅದನ್ನು ಹೊರಡಿಸಿದವಳು ಅವಳೇ. ಆದರೂ ಅವಳಲ್ಲಿ ಆ

ಆಸಕ್ತಿ ಉಳಿದಿಲ್ಲ ಅವನು ಆ ವಿಷಯವನ್ನು ಕುರಿತು ಮಾತೆತ್ತಿದ ನಾದರೆ ಅದಕ್ಕೆ ಪೂರ್ವದ ಕಾವು, ಉದ್ದೇಶಗಳೆರಡೂ ಇಲ್ಲದಾಗಿ ಮಾತಿಗೆ ಕೃತಕ ರೂಪ ಬಂದು ಬಿಡುತ್ತದೆ ಕಾಂಚನಮಾಲೆ ಅಷ್ಟೇ ಚಲಾಕಿಯಿಂದ, ನುಣುಚುವ ಮಾತುಗಳಿಂದ, ಅವನ್ನು ಕಾಣುತ್ತಿದ್ದಳು ಹೊರಗಿನ ತೋರಿಕೆಗೆ ತನ್ನ ಕನಸು ಮುಗಿದಿಲ್ಲ ಎಂದು ತೋರಿಸಿಕೊಳ್ಳುವ ಉದ್ದೇಶದಿಂದ ಒಮ್ಮೊಮ್ಮೆ "ಡಾರ್ಲಿಂಗ್" ಎಂಬಂತಹ ಸವಿಸಂಬೋಧನೆಗಳನ್ನು ಆಡುತ್ತಿದ್ದಳು

ಆಕೆ ಸೇತುರಾಯನ ಭುಜದ ಮೇಲೆ ಕೈಯಿರಿಸಿ, ಸವಿಯಾಗಿ ಮಾತನಾಡುವುದನ್ನು ಕಂಡರೆ, ಮುದ್ದುವಿಗೆ ತೀರ ಬೇಸರವಾಗುತ್ತದೆ. ಅವಳ ಮೇಲೆ ಅವನಿಗಿರುವ ಗೌರವ ಇವನ ವಿಷಯದಲ್ಲಿ ಹುಟ್ಟು ವಂತಿಲ್ಲ ತನ್ನ ಯಜಮಾನಿಯ ಸಲುವಾಗಿ ಮಾತ್ರ ಅವನು ಅಲ್ಲಿಗೆ ಸೇವೆಗೆ ನಿಂತಿದ್ದಾನೆ ಅಲ್ಲಿಗೆ ಬರುವ ವಿವಿಧ ತೆರನ ಜನಗಳನ್ನು ನೋಡುತ್ತಿರುತ್ತಾನೆ ಅಂಥವರಲ್ಲಿ ಅವರ ಪಕ್ಷದ ರೋಹಿಣಿದೇವಿ ಎಂಬ ಒಬ್ಬಳು ಅಲ್ಲಿಗೆ ಹೆಚ್ಚಾಗಿ ಬರುವವಳು ಸೇತುರಾಯನ ಮೇಲೆ ಆಕೆಗೆ ಹೆಚ್ಚಿನ ಪ್ರಭಾವ ಇದ್ದಂತೆ ಕಾಣುತ್ತಿತ್ತು ಅನುಕೂಲವಂತರ ಮನೆಯ ಆ ತರುಣಿ ಮನೆಗೆ ಬಂದಾಗಲೆಲ್ಲ, ಆತ ಕೆಲಸದ ನೆಪದಿಂದ ಮನೆಯಿಂದ ಹೊರಗೆ ಕಳುಹಿಸುತ್ತಿದ್ದ ಅವಕಾಶಗಳೂ ಉಂಟು ಇದನ್ನು ಆತ ಕಾಂಚನಮಾಲೆಗೆ ತಿಳಿಸಿದವನೇ ಅದರ ಮೇಲೆಯೂ ಆಕೆ ಅವನೊಡನೆ ತೋರುತ್ತಿದ್ದ ಸಲುಗೆ ಅವನಿಗಂತೂ ಇಷ್ಟವಾಗುತ್ತಿರಲಿಲ್ಲ ಅವನ ಬೇಸರದ ಮುಖವನ್ನು ಅರ್ಥಮಾಡಿಕೊಂಡು ಕಾಂಚನಮಾಲೆ–ತಾವೊಂದು ಕಾಲದಲ್ಲಿ ಮದುವೆಯಾಗಬಹುದಾದ ಸಂಬಂಧವೂ ಇದ್ದಿತ್ತು ಆತ ರಾಜಕೀಯಕ್ಕಾಗಿ ಮದುವೆ ಮಾಡಿಕೊಳ್ಳುವವನೆಂದು ತಿಳಿದ ಮೇಲೆ ತನ್ನ ಮನಸ್ಸು ಸಪ್ಪೆಯಾಯಿತೆಂದು ಹೇಳಿದ್ದಳು

ರೋಹಿಣಿ, ಸೇತುವಿನ ಮನೆಯಲ್ಲಿ ಕುಳಿತು, ತಾಸು ತಾಸುಗಳ ತನಕ ಅವನ ಪತ್ರ ವ್ಯವಹಾರಗಳನ್ನು ಟೈಪು ಮಾಡುಕೊಡುತ್ತಿದ್ದಳು, ಗಂಭೀರವಾಣಿಯಿಂದ ಚರ್ಚೆ ನಡೆಸುತ್ತಿದ್ದಳು ಒಂದೆರಡು ಬಾರಿ ಆತನೊಡನೆ "ನೀವು ಕಾಂಚನಮಾಲೆಯ ವಿಚಾರದಲ್ಲಿ ಎಚ್ಚರವಾಗಿರ

ಬೇಕು " ಎಂಬ ಅಸೂಯೆಯು ಉಪದೇಶವನ್ನು ಮಾಡಿದ್ದಳು

* * * *

ಕೆಲವು ದಿನಗಳು ಹೀಗೆಯೇ ಸರಿದುವು ಪ್ರಮುವಾದಿಗಳ ಗುಪ್ತ ಗಾಮಿ ಸಭೆ ನಡೆದು ಅಲ್ಲಿ ಸೇತುರಾಯನ ನವೀನ ಹಂಚಿಕೆಗಳೆಲ್ಲ ಚರ್ಚೆಗೊಳಗಾಗಿ ಸಮ್ಮತಿಗಳಿಸಿದಂತೆ ಕಾಣಿಸುತ್ತದೆ ಕಾಂಚನ ಮಾಲೆ ಅವರ ಪಕ್ಷದ ಮೇಲ್ಮಟ್ಟದ ಸದಸ್ಯೆಯಾಗಿ ಸ್ವೀಕೃತಳಾದಳು ಚುನಾವಣೆಯು ಒಳಿಕವೇ ಅದು ಪ್ರಕಟವಾಗತಕ್ಕದ್ದು ಎಂದು ಗೊತ್ತಾಯಿತು ಸೇತುರಾಯ ತನ್ನ ಪಕ್ಷಕ್ಕೆ ಬಾಹ್ಯ ಸಂಬಂಧವಿಲ್ಲ ಎಂದು ಸಾರಿದ ವಿಚಾರ ವಿಶೇಷ ಚರ್ಚೆಗೆ ಗುರಿಯಾಯಿತು ಅದನ್ನು ಲಾಲಚಂದ ಬಲವಾಗಿ ವಿರೋಧಿಸಿದರೂ ಪ್ರಸಂಗದ ಆವಶ್ಯಕತೆಯಿಂದ ಒಪ್ಪಿಕೊಳ್ಳುಸಂತಾಯಿತು ಸೇತುರಾಯನ ಉಪದೇಶವೇ ಅದಕ್ಕೆ ಕಾರಣ "ನಾಳೆ ದಿನ ಗೊಂಡಾರಣ್ಯದ ಸರಕಾರ ನಮ್ಮ ಕೈವಶವಾಗುವ ಭರವಸೆಯಿದೆ ಅಖಿಲ ಭಾರತದಲ್ಲಿಯೇ ನಮ್ಮ ಪಕ್ಷ ಬಲವಾಗಿ ಸರಕಾರ ನಮ್ಮ ಕೈಗೆ ಬರುವ ತನಕ, ನಾವು ಈ ಧೋರಣೆ ಹಿಡಿಯುವುದರಿಂದ ಕ್ಷೇಮವಿದೆ ಇಲ್ಲವಾದರೆ ಕೇಂದ್ರದಿಂದ ನಮಗೆ ಆತಂಕಗಳು ಬರಬಹುದು ಪ್ರಸಂಗವನ್ನು ಹುಡುಕಿ ಅವರು ಗವರ್ನರ ರಾಜ್ಯ ನಡೆಯಿಸಬಹುದು ಆದುದರಿಂದ ನಮ್ಮ ಹೊರಗಿನ ಸಂಬಂಧಗಳೇನಿದ್ದರೂ ಅವು ಗುಪ್ತವಾಗಿರಬೇಕೇ ಹೊರತು ಪ್ರಕಟವಾಗಿರಕೂಡದು" ಎಂದಿದ್ದ.

ಮುಂದೆ ಅವರು ಇದೇ ಧೋರಣೆಯಿಂದ ಚುನಾವಣೆಯ ಘೋಷಣೆಯನ್ನೂ, ಪ್ರಚಾರ ಕಾರ್ಯವನ್ನೂ ನಡೆಯಿಸತೊಡಗಿದರು. ಆ ಕಾಲದಲ್ಲಿ ಕಾಂಚನಮಾಲೆ ಬೇಕೆಂದೇ ಸೇತುರಾಯನ ಉಪದೇಶ ಸ್ವೀಕರಿಸಿ, ಅವನು ಸೂಚಿಸಿದ ಹಲವು ಅಧಿಕಾರಿಗಳನ್ನು ಚುನಾವಣೆಯ ಕೇಂದ್ರದಲ್ಲಿ ಹಾಕಲೊಪ್ಪಿದಳು ಲಾಲಚಂದ ಉಪಾಯವಾಗಿ ಎಂಥೆಂಥವರು ಆಗಬಹುದೆಂದು ಸೂಚಿಸಿದ ಅಂಥವರನ್ನು ನೇಮಿಸುತ್ತ, ಈಕೆ ತನ್ನ ನಂಬಿಕೆಯೊಬ್ಬಬ್ಬ ಉಪ ಚುನಾವಣಾಧಿಕಾರಿಯನ್ನು ಹಾಕಿದಳು ಇಂಥ ಅಧಿಕಾರಿಗಳು ಏನೆಲ್ಲ ಮಾಡಲು ಒಡುದು ಎಂಬ ಪೂರ್ವಾನುಭವ, ವಾಮನರಾಯನ ಕೃಪೆಯಿಂದ

ಅವಳಿಗುಂಟಾಗಿತ್ತು ಈಗ ಈ ಪಕ್ಷದವರೂ ಅದೇ ದಾರಿ ತುಳಿಯುವು ದಕ್ಕೆ ಸಿದ್ಧರಾಗಿದ್ದಾರೆ ಎಂದು ತಿಳಿಯುವಂತಾಯಿತು. ಅವುಗಳ ಪೂರ್ವ ಸೂಚನೆಗಳನ್ನು ಅವಳು ಮಂತ್ರಿ ರಾಮದಾಸನಿಗೂ ಕೊಡಲು ಮರೆಯಲಿಲ್ಲ

ಚುನಾವಣೆಯ ಗಾಳಿ ಬಿಸಿಯೇರುತ್ತ ಬೀಸ ತೊಡಗಿದಂತೆ, ಶ್ರಮವಾದಿ ಪಕ್ಷದವರು ಅಲ್ಲಿಯ ತನಕ ಹೊಡಿದ ಹೆಬ್ಬಾವಿನ ನಿದ್ರೆ ಯನ್ನು ಮರೆತು, ಒಮ್ಮೆಗೇ ಖಾಸಗಿ ಕಾರ್ಖಾನೆಗಳಲ್ಲಿ, ಜಮೀನು ಗಳಲ್ಲಿ ಮುಷ್ಕರ, ಸತ್ಯಾಗ್ರಹಗಳ ಸೀರಿಕೆಯನ್ನು ಹಾಕಿದರು. ಅವೆಲ್ಲಕ್ಕೂ ಕಿರೀಟಪ್ರಾಯವಾಗುವಂತೆ, ಒಂದು ದಿನ, ಗೊಂಡಾ ರಣ್ಯದ ಆದ್ಯಂತ ಉಪಾಧ್ಯಾಯರು ಸಂಪು ಹೂಡುವ ನಿರ್ಧಾರ ಮಾಡಿದರು. ಈ ಪ್ರಮೇಯದಲ್ಲಿ ಎರಡೆರಡು ವೇಷಗಳನ್ನು ತೊಟ್ಟು ಕುಣಿಯುವ ಕೆಲಸ, ಕಾಂಚನಮಾಲೆಗೆ ಸುಲಭವಾಗಿರಲಿಲ್ಲ ಉಪಾ ಧ್ಯಾಯ ವರ್ಗದವರು ಚುನಾವಣೆಯಲ್ಲಿ ನೌಕರರಾಗಿ ದುಡಿಯಬೇಕು ಅವರು ಸಂಪು ಹೂಡಿದರೆ ಚುನಾವಣೆಯನ್ನೇ ಮುಂದೊತ್ತಬೇಕಾ ದೀತು. ಅವರನ್ನು ಸಂಪಿಗೆ ಪ್ರೇರಿಸಿದವರು ತನ್ನ ನೂತನ ಬಂಧು ಗಳೆಂದು ತಿಳಿಯದಂತೆ ನಟಿಸಬೇಕು ತಿಳಿದೂ ಮೂಕಳಾಗಿ ಕುಳಿತರೆ ಕೇಂದ್ರ ಸರಕಾರ ಈ ವೇಳೆಯಲ್ಲಿ ಕೈಹಾಕಿ ಚುನಾವಣೆ ಯಂತ್ರವನ್ನೇ ನೇರಾಗಿ ನಡೆಯಿಸಬಹುದು ಆದುದರಿಂದ ಆಕೆ ತಾನಾಗಿಯೇ "ಉಪಾಧ್ಯಾಯರು ಅಥವಾ ಯಾವುದೇ ಸರಕಾರಿ ನೌಕರರು ಚುನಾವಣೆ ಮುಗಿಯುವ ತನಕ ತಮ್ಮ ಕೆಲಸದಿಂದ ದೂರವಾಗುವು ದನ್ನು ಅಪರಾಧವೆಂದು ಗಣಿಸಲಾದೀತು" ಎಂದು ಆಜ್ಞೆ ಹೊರಡಿಸಿ ದ್ದಲ್ಲದೆ "ಯಾವ ಪಕ್ಷ ಆರಿಸಿ ಬಂದರೂ ಬಡ ಉಪಾಧ್ಯಾಯರ ವಿಚಾರದಲ್ಲಿ ಸಹಾನುಭೂತಿಯನ್ನು ತೋರಿಸದೆ ಇರಲಾರರು ಈ ತನಕ ನಾಡಿನ ಒಂದೊಂದು ವರ್ಗದ ಜೀವನದ ಕನಿಷ್ಟ ವೇತನ, ಮಿತಿಗಳನ್ನು ನಿರ್ಣಯಿಸಿದಂತೆ ಅವರಿಗೂ ನ್ಯಾಯ ಸಲ್ಲಿಸುತ್ತೇವೆ ಅಂಥ ಕೆಲಸಕ್ಕೆ ನನ್ನ ಸಂಪೂರ್ಣ ಬೆಂಬಲವಿದೆ ಈ ಮಾತಿನಮೇಲೆ ವಿಶ್ವಾಸವಿರಿಸಿ ಅವರು ಸಂಪು ಹೂಡದಿರಲಿ" ಎಂದು ಬೇಡಿಕೊಂಡಳು

"ಹೀಗೇಕೆ ಮಾಡಿದಿರಿ?" ಎಂದು ನೇತುರಾಯ ಕೇಳ

ದಿರುತ್ತಾನೆಯೇ?

"ನಿಮಗೆ ರಾಜ್ಯದ ಘಟನೆ ತಿಳಿದಿದೆ ನಮ್ಮದು ಬಹುಪಕ್ಷೀಯ ಸರಕಾರವಲ್ಲ, ತಾತ್ಕಾಲಿಕ ಅಧಿಕಾರ ರಾಜಪ್ರಮುಖರೇ ಮುಂದಿನ ಸರಕಾರ ರಚನೆಯಾಗುವ ತನಕ ಅಧಿಕಾರ ವಹಿಸಿದರೆ ಏನು ಮಾಡುತ್ತೀರಿ" ಎಂದು ವಾದಿಸಿ ಅವನ ಅತಿ ಉತ್ಸಾಹವನ್ನು ತಣಿಸಿದಳು.

ಇತ್ತ ಜನವಾದಿ ಸಂಗಡದಲ್ಲಿ ಹೊಸ ಬದಲಾವಣೆಗಳಾದುವು ತಿರುಮೂರ್ತಿ ಅವರ ಸಂಗಡದ ಅಧ್ಯಕ್ಷನಾದ ಅವನಿಗೆ ಕಾಂಚನ ಮಾಲೆಯಲ್ಲಿ ಅಪನಂಬಿಕೆಯಿರುವಂತೆ ಶ್ರಮವಾದಿ ಮಂತ್ರಿಗಳಾದ ಲಾಲಚಂದ, ಸುನೀತರಲ್ಲಿ ನಂಬಿಕೆಯಿರಲಿಲ್ಲ ಅವರನ್ನು ಕೂಡಿ ತಮ್ಮ ಪಕ್ಷದವರು ದುಡಿಯುವುದು ಬೇಡವೆಂದು ಪ್ರೇರಿಸಿ ರಾಜೀನಾಮೆಯನ್ನು ಸಲ್ಲಿಸುವಂತೆ ಮಾಡಿದ ಆಗ ಕಾಂಚನಮಾಲೆಯು ತನ್ನ ಅಧಿಕಾರವನ್ನು ಒಪ್ಪಿಸಿಕೊಡಬೇಕಾದ ಪರಿಸ್ಥಿತಿ ಉಂಟಾಯಿತು ಇದನ್ನು ತಡೆಯುವುದಕ್ಕೆ ರಾಮದಾಸ ಮಾಡಿದ ಪ್ರಯತ್ನಗಳು ವ್ಯರ್ಥವಾದವು ಮುಂದೆ ಅವರೆಲ್ಲರು ತಮ್ಮ ಮನಸ್ಸನ್ನು, ಶಕ್ತಿಯನ್ನು ಚುನಾವಣೆಯೊಂದಕ್ಕೆ ಬಳಸಬೇಕಾದ ಕಾಲ ಬಂದೊದಗಿತು

ಚುನಾವಣೆಯ ಹೆಸರುಗಳನ್ನು ಸೂಚಿಸುವ ಕಾಲ ಬಂದಿತು ಬುಡ ಮೇಲಾದ, ಶಿಥಿಲವಾದ ದೇಶವಾದಿ ಸಂಸ್ಥೆಯ ಮರ್ಯಾದೆಯನ್ನು ಉಳಿಸಿಕೊಳ್ಳುವುದಕ್ಕಾಗಿ ಅಖಿಲಭಾರತದ ಮುಂದಾಳುಗಳೆಲ್ಲ ಗೊಂಡಾರಣ್ಯಕ್ಕೆ ಬರತೊಡಗಿದರು ಅವರ ಹಿತೋಪದೇಶ, ಬಲವಂತಗಳಿಂದ ವಾಮನರಾಯ ಮುಂದಾಳುತನ ಬಿಟ್ಟುಕೊಟ್ಟ ಅವನಿಗೆ ಕೇಂದ್ರದ ಉಪಮಂತ್ರಿ ಪಟ್ಟದ ಆಶೆ ತೋರಿಸಿ ಅವನ ಸಹಾಯ, ಕೃಪೆಗಳನ್ನು ಉಳಿಸಿಕೊಡರು ಅವರ ಪಕ್ಷದ ಹಳೆಯ ಪ್ರಸಿದ್ಧ ಹೆಸರುಗಳು ಹಿಂದುಳಿದವು. ಸಾಹುಕಾರ ಶೀನಪ್ಪನವರನ್ನು ಬಿಟ್ಟರೆ ಉಳಿದ ಎಲ್ಲ ಸ್ಪರ್ಧಿಗಳು ಹೊಸಬರೇ ಈ ಹೊಸಬರು ಹೆಸರು ಗಳಿಸಿದವರಲ್ಲವಾದರೂ ಅಪಕೀರ್ತಿಯನ್ನು ಅಂಟಿಸಿಕೊಡವರಲ್ಲ ಎಂಬುದಿಷ್ಟೇ ಸಮಾಧಾನ ಕೆಲವು ಕಡೆ ತಮ್ಮ ಜನ ದುರ್ಲಭವಾಗಿ, ಸ್ವತಂತ್ರರನ್ನು ಬೆಂಬಲಕೊಟ್ಟು ಮುಂದೆ ತಳ್ಳಿದರು ಅರುವತ್ತು ಸ್ಥಾನಗಳಲ್ಲಿ ಬರಿಯ ನಾಲ್ವತ್ತಕ್ಕಷ್ಟೆ ಸ್ಪರ್ಧಾಳುಗಳನ್ನು ನಿಲ್ಲಿಸುವುದಕ್ಕೆ

ಸಾಕುಬೇಕಾಯಿತು

ಸೇತುರಾಯ, ಚುನಾವಣೆಯ ಮೈತ್ರಿಗೆಂದು ಜನವಾದಿಗಳೊಡನೆ ಮಾಡಿದ ಪ್ರಯತ್ನ ಸಫಲವಾಗಲಿಲ್ಲ ಆ ರಾಯಭಾರಕ್ಕಾಗಿ ಆತ ಕಾಂಚನಮಾಲೆಯನ್ನು ಮುಂದೂಡಿದ ಅವಳು ಸಂಧಾನದ ಸೋಗು ಹಾಕಿ, ರಾಮದಾಸನ ಕಿವಿಯಲ್ಲಿ "ಜನ್ಮಕ್ಕೂ ಈ ಸಖ್ಯದ ನಾಟಕದಲ್ಲಿ ಸಿಲುಕಿಕೊಳ್ಳಬೇಡಿ" ಎಂದು ಬೋಧಿಸಿದಳು ಸಖ್ಯ ವಿಫಲವಾದುದಕ್ಕೆ ತಿರುಮೂರ್ತಿಯ ಒರಟುತನ ಕಾರಣನೆಂದು ಸೇತುರಾಯನಿಗೆ ತಿಳಿಸಿದಳು

ತಿರುಮೂರ್ತಿಗೆ ಕಾಂಚನಮಾಲೆಯ ಹೆಸರನ್ನು ಕೇಳಿದರೇ, ಕಣ್ಣಿಂದ ಕೆಂಡ ಸೂಸುತ್ತವೆ ಅವಳ ಯೋಗ್ಯತೆಯನ್ನು ಅಳೆಯಲಾರದ ಒಬ್ಬ ಪ್ರಮಾಣಿಕ ಜೀವಿ ಆತ ಆತಗೆ ರಾಜಕೀಯದಲ್ಲಿ ಜಾಣ್ಮೆ ಸಾಲದು ಏನಿದ್ದರೂ ಎದುರೆದುರಿಗೆ ಬಡಬಡಿಸಬಲ್ಲ ವ್ಯಕ್ತಿ. ಈಚೀಚೆಗೆ ರಾಮದಾಸ ಅವಳ ವಿಷಯದಲ್ಲಿ ಅವನ ಅಭಿಪ್ರಾಯವನ್ನು ಬದಲಿಸಲು ಮಾಡಿದ ಪ್ರಯತ್ನಗಳೆಲ್ಲ ವಿಫಲವಾದುದರಿಂದ, ಅವಳ ವಿಷಯದಲ್ಲಿ ತನಗೆ ತಿಳಿದ ಯಾವ ಸಂಗತಿಯನ್ನೂ ಅವನ ಕಿವಿಗೆ ಹಾಕುತ್ತಿರಲಿಲ್ಲ ಅವನಿಗೂ ಅವಳ ವಿಷಯದಲ್ಲಿ ಗೌರವ, ವಿಸ್ಮಯಗಳೆರಡೂ ಇವೆ ಬಡ ಜನವಾದಿಗಳ ಸಲುವಾಗಿ ಚುನಾವಣೆಯ ವೆಚ್ಚಕ್ಕೆ ಎಷ್ಟೋ ಹಣ ತಂದುಕೊಟ್ಟಿಳು, ಇನ್ನೂ ಕೊಡುತ್ತಿದ್ದಾಳೆ, ಹಲವಾರು ಗುಪ್ತ ಸೂಚನೆಗಳನ್ನು ಕೂಡುತ್ತಿದ್ದಾಳೆ. ಅವಳಷ್ಟು ಶ್ರೀಮಂತಳಲ್ಲ ಎಂಬುದನ್ನು ಆತ ತಿಳಿದವನು "ಇದು ಎಲ್ಲಿಂದ?" ಎಂದು ಕೇಳಿದರೆ "ಕೇಳಬೇಡಿ" ಅನ್ನುತ್ತಾಳೆ ರಾಮದಾಸನ ಊಹೆಯಲ್ಲಿ ಅದಕ್ಕೊಂದೇ ಉತ್ತರ ಸಾಧ್ಯ: 'ರಾಜಪ್ರಮುಖರಿಗೂ ಅವಳಿಗೂ ಇರುವ ಬಂಧುತ್ವ ಶ್ರಮವಾದಿಗಳ ಬೆದರಿಕೆಯಿಂದ ಆತ ಅವಳ ಮೂಲಕ ಹೀಗೆ ಧನ ಸಹಾಯ ಮಾಡುತ್ತಿದ್ದಾನೆ, ಅವರ ಈ ಹೊಸ ನಿಲುವಿಗೆ ಅವನೇ ಕಾರಣನಿರಬೇಕು' ಎಂಬ ಊಹೆ.

ಹಣವಿಲ್ಲದೆ, ಅದನ್ನು ಮಳೆಯಂತೆ ಸುರಿಯದೆ ಚುನಾವಣೆಯ ಆಟ ಕಷ್ಟದ್ದು. ದೇಶವಾದಿಗಳು ಮೊದಲಿನಿಂದಲೂ ಧಾರಾಳವಾ

ಹಣದ ಮಳೆ ಸುರಿಸಿದವರು. ಈ ಬಾರಿ ಹೊರಗಿನಿಂದಲೂ ನೆರವು ತರಿಸಿಕೊಂಡು ಇನ್ನಷ್ಟು ವೆಚ್ಚ ಮಾಡುತ್ತಿದ್ದಾರೆ.

ಸೇತುರಾಯನಾಗಲಿ, ಅವನ ಸಂಗಡವಾಗಲಿ ಎಲ್ಲಿಂದ ಹಣ ದೊರಕಿಸಿಕೊಳ್ಳುತ್ತಿದ್ದಾರೆ ಎಂದು ಎಷ್ಟು ಹೊಂಚು ಹಾಕಿದರೂ ಕಾಂಚನಮಾಲೆಗೆ ಆ ಗುಟ್ಟು ಸಿಗಲಿಲ್ಲ ಚುನಾವಣೆಯಲ್ಲಿ ಆಕೆ ಶ್ರಮ ಗಾರ ಪಕ್ಷದ ಪ್ರತಿನಿಧಿಯಾಗಿ ವಿಕ್ರಮ ನಗರದಲ್ಲಿಯೇ ಸ್ಪರ್ಧಾಳು ವಾದಳು, ಭೀಮನೂರಿನಿಂದ ಸೇತುರಾಯ ನಿಂತ. ಉಳಿದ ಎಲ್ಲಾ ಸ್ಥಾನಗಳಿಗೂ ಅವರ ಸ್ಪರ್ಧಿಗಳು ಇದ್ದೇ ಇದ್ದರು

ಈ ತನಕ ಸಮಾಜದ ಸೇವೆ, ಸಂಸ್ಕೃತಿಯ ಉದ್ಧಾರಕ್ಕೆ ದುಡಿಯುತ್ತೇವೆ ಎಂದಿದ್ದ 'ಗೊಂಡಾರಣ್ಯ ಸಂಸ್ಕೃತಿ ಸೇವಾ ಸಂಘ'ವು ಬಹಿರಂಗವಾಗಿ–ಚುನಾವಣೆಯಲ್ಲಿ ಜನಗಳಿಗೆ ತಮ್ಮ ಕರ್ತವ್ಯ ಬೋಧಿ ಸುವ ನೆಪದಿಂದ "ಬಡವರ ಸಂಗಡಕ್ಕೆ ಓಟು ಕೊಡಿ" ಎನ್ನತೊಡಗಿತು. 'ಯಾವ ಸಂಗಡ ಅದು?' ಎಂದು ಕೇಳಿದರೆ "ಬಡವರಿಗೆ ಅದು ತಿಳಿಯುತ್ತದೆ" ಎಂದೆನ್ನ ತೊಡಗಿದರು ಚುನಾವಣೆಗೆ ವಾರ, ಹತ್ತು ದಿನಗಳಿರುವಾಗ ರಾತ್ರಿ ಹಗಲು ಶ್ರಮವಾದಿಗಳ ಸಲುವಾಗಿ ದುಡಿಯ ತೊಡಗಿದರು ಆದರೂ ಸೇತುರಾಯ ಕಾಂಚನಮಾಲೆಯ ಮುಂದೆಯೇ "ಅವರೆಲ್ಲ ಮತದಾನದ ರೀತಿ ಬೋಧಿಸುತ್ತಿದ್ದಾರೆಯೇ ಹೊರತು ಪಕ್ಷ ವಹಿಸಿ ಕೆಲಸಮಾಡುತ್ತಿದ್ದಿಲ್ಲ" ಎಂದು ಎನ್ನುತ್ತಿದ್ದ

ತಂತಮ್ಮ ಊರು ಮನೆಗಳನ್ನು ಬಿಟ್ಟು, ಪರವೂರುಗಳಲ್ಲಿ ತಮ್ಮ ವೆಚ್ಚದಿಂದ ಇಂಥ ಕೆಲಸ ಮಾಡುತ್ತಿದ್ದಾರಾದರೆ, ದೇಶದ ಸುದೈವ ಎಂದುಕೊಂಡಳು ಕಾಂಚನಮಾಲೆ. ಮೊದಲಿನ ಚುನಾವಣೆಯಲ್ಲಿ ದೇಶವಾದಿ ವಾಮನರಾಯ ಅನೇಕ ಸ್ವಯಂ ಸೇವಕ, ಸೇವಕಿಯರನ್ನು ಕೂಡಿಸಿ, 'ಅನಕ್ಷರಸ್ಥರಿಗೆ ಮತದಾನದ ರೀತಿ ಬೋಧಿಸುತ್ತಿದ್ದೇವೆ'– ಎಂದು ಹೂಡಿದ ನಾಟಕದ ಅನುಕರಣೆ ಇದು ಇಷ್ಟೇ ವ್ಯತ್ಯಾಸ– ಆಗ ನಾಟಕದಲ್ಲಿ ಸಾವಿರ ಜನ ಪಾತ್ರವಹಿಸಿದ್ದರೆ, ಈಗ ಹತ್ತು ಸಾವಿರ ಜನ ವಹಿಸತೊಡಗಿದ್ದಾರೆ. ವಿಕ್ರಮನಗರವೊಂದರಲ್ಲಿಯೇ ಕಾಂಚನ ಮಾಲೆಗಾಗಿ ಇನ್ನೂರು ಮಂದಿಗಿಂತಲೂ ಹೆಚ್ಚು ಜನ ಸೇವಾ ಸಂಘದ ವರು ದುಡಿಯುತ್ತಿದ್ದಾರೆ. ಅವರಿಗೆ ದಿನಕ್ಕೆ ಎಂಟಾಣೆಯಂತೆ ತಿಂಡಿಯ

ವೆಚ್ಚ ಕೊಟ್ಟರೂ ತಿಂಗಳಿಗೆಷ್ಟು ವೆಚ್ಚವಾದೀತು–ಎಂದು ಎಣಿಸುವುದು ಸುಲಭ. ಕೆಲಸಗಾರರಿಗೆ ಅನ್ನ ನೀರನ್ನಾದರೂ ಕೊಡಬೇಕಲ್ಲ, ಅವರಷ್ಟು ಶ್ರೀಮಂತರಾಗಿರುವುದು ಅಸಾಧ್ಯ. ಆದರೆ ಯಾವ ಶ್ರೀಮಂತರ ಹಣದಿಂದ ಈ ನಿ[illegible] ಯಂತ್ರ ಪ್ರಕರಣ ನಡೆಯುತ್ತಿದೆ ಎಂದು ಕಾಂಚನಮಾಲೆಗೂ ತಿಳಿಯದಾಗಿದೆ. ಶ್ರಮಗಾರರ ಸದಸ್ಯತನದ ನಾಲ್ಕೆಂಟಾಣೆ ವಂತಿಗೆಗಳಿಂದ ಇದು ನಡೆಯಲಾರದೆಂದು ಅವಳಿಗೆ ತಿಳಿದಿದೆ.

ಕೊನೆ ಕೊನೆಯ ದಿನಗಳಲ್ಲಿ ನೂರಾರು ಬಾಡಿಗೆ ಸೈಕಲುಗಳ ಮೆರವಣಿಗೆ, ಮೋಟಾರುಕಾರುಗಳ ಮೆರವಣಿಗೆ, ಗುಲಾಲಿ ಬಾವುಟವನ್ನು ಹಿಡಿದು ಓಡಾಡುತ್ತಿದ್ದ ಆ ಪ್ರೀತಿಯ ಸೇವೆಗಳಿಗೆಲ್ಲ ಎಲ್ಲಿನ ಹಣ ಎಂಬುದು ಅವಳಿಗೆ ಸಮಸ್ಯೆಯಾಗಿಯೇ ಉಳಿಯಿತು.

ಚುನಾವಣೆಗೆ ಬರಿಯ ನಾಲ್ಕು ದಿನಗಳಿದ್ದಾಗ, ನಿದ್ದೆಹೋಗಿದ್ದ ಕಾಂಚನಮಾಲೆಯನ್ನು ಮುದ್ದುವಿನ ಫೋನ್ ಕರೆ ಎಚ್ಚರಿಸಿತು. "ಅಮ್ಮಾ, ಅಮ್ಮಾ" ಎಂದ ಅವನು. "ಬೇರೆ ಯಾರೂ ಇಲ್ಲವಲ್ಲ ?" ಎಂದು ಕೇಳಿದ.

"ಇಲ್ಲ, ಏನು ವಿಶೇಷ ?"

"ರಾಯರೂ, ಲಾಲಚಂದರೂ ಈಗಷ್ಟೇ ಹೊರಟು ಹೋದರು–ಭೀಮನೂರಿಗೆಂದು ಕಾಣುತ್ತದೆ"

"ಏನಾದರೂ ವಿಶೇಷವಿದೆಯೇ ?"

"ತುಂಬ ಹಣ ಎಣಿಸುತ್ತಿದ್ದರು, ನೋಟುಗಳ ರಾಶಿ ಕಾಣುತ್ತಿತ್ತು, ಬಾಗಿಲ ಸಂದಿನಿಂದ ಇಣಿಕಿ ನೋಡುತ್ತಿದ್ದೆ–ರಾಯರು ಬಡವರಲ್ಲ"

"ಚುನಾವಣೆಯ ಖರ್ಚಿಗಿರಬಹುದು."

"ಅಷ್ಟು ರೂಪಾಯಿಗಳೇ ? ನೂರು, ಸಾವರ ಎಣಿಸಿದರಲ್ಲ"

"ಅಷ್ಟೂ ಬೇಕಾಗುತ್ತದೆ"

"ಅದಕ್ಕಲ್ಲ ಕರೆದದ್ದು–ಹೋಗುವಾಗ ಅವಸರದಲ್ಲಿ ಒಂದು ಚಿಕ್ಕ ಪುಸ್ತಕ ಬಿಟ್ಟುಹೋದರು. ಏನೇನೋ ಅಂತನೆ ಬರೆದದ್ದು, ತಂದು ಕೊಡಬೇಕೇ ?"

"ಬೇಡ. ಬೆಳಿಗ್ಗೆ ನಾನೇ ಅವರನ್ನು ವಿಚಾರಿಸಿಕೊಂಡು ಬರು

ತ್ತೇನೆ   ಆಗ ಕೊಟ್ಟರೆ ಸಾಕು, ಮಲಗಿಕೋ ”

“ ಈಗಲೇ ಬರಲೇ ? ನನಗೆ ನಿದ್ರೆಯೂ ಬರುವುದಿಲ್ಲ ”

“ ಯಾಕಣ್ಣಾ ನಿನಗೇನು ಚಿಂತೆ ? ”

“ ಅಮ್ಮಾ, ಮನಸ್ಸಿಗೆ ತುಂಬ ಬೇಸರವಾಗಿದೆ–ಊರವರು ನಿಮ್ಮನ್ನು ಬಯ್ಯುವುದನ್ನು ಕೇಳಿ   ನೀವು ಇನ್ನಾದರೂ ಹಿಂದೆಗೆದರೇನು ? ಯಾಕೆ ನಿಮಗೆ ಈ ಕೆಟ್ಟ ಹೆಸರು ?”

ಕಾಂಚನಮಾಲೆ ನಕ್ಕಳು, “ ಚುನಾವಣೆಯೆಂದರೆ ಹಾಗೆಯೇ ಒಳ್ಳೆಯ ಹೆಸರು ಬರುವುದು ಕಷ್ಟ ” ಎಂದು ನಕ್ಕು ವಿರಮಿಸಿದಳು ಮರುದಿನ ಬೇಗನೇ ಎದ್ದು ಸೇತುರಾಯನ ಮನೆಗೆ ಅವಸರಿಸಿ ಹೋದಳು   ಮುದ್ದು ಬಂದು, ಕದವನ್ನು ತೆರೆದು, ಅವಳನ್ನು ಒಳಕ್ಕೆ ಕರೆದುಕೊಂಡು ಹೋಗಿ ತಾನು ತೆಗೆದಿರಿಸಿದ ವಸ್ತುವನ್ನು ತೋರಿಸಿದ. ಅದೊಂದು ಚಿಕ್ಕ ಪುಸ್ತಕ  “ ಇದು ಅವರ ಡೈರಿ ಇರಬೇಕು ” ಎಂದು ಅದನ್ನು ತೆರೆದಳು  ಮುದ್ದು ಅಷ್ಟಕ್ಕೆ “ ಅಲ್ಲಿ, ನಿನ್ನೆ ನೋಟು ಎಣಿಸುತ್ತಿದ್ದರಲ್ಲ, ಅವರ ನಂಬರುಗಳಿರಬಹುದು ” ಎಂದ   ಆಕೆ ಅದನ್ನು ತೆರೆದು ನೋಡಿದಾಗ ಕೆಲವು ಹಾಳೆಗಳಲ್ಲಿ ನೋಟುಗಳ ಅಂಕೆ ಸಂಖ್ಯೆಗಳಂತೆ ಬರೆದುದು ಕಾಣಿಸಿತು.  ಅದನ್ನು ಅಲ್ಲಿಯೇ ಕುಳಿತು, ನಕಲು ತೆಗೆದು, ಪುಸ್ತಕ ಮೊದಲಿದ್ದಲ್ಲಿಯೇ ಇಡುವಂತೆ ಹೇಳಿ, ಅವನ ಬೆನ್ನು ಚಪ್ಪರಿಸಿ ಈಚೆ ಬಂದಳು

ಆತ ದುಃಖದ ಮುಖದಿಂದ ನಾಲ್ಕಾರು ಪತ್ರಿಕೆಗಳ ಹಾಳೆಗಳನ್ನು ಅವಳ ಮುಂದೊಕ್ಕೊಡ್ಡಿ  ‘ ಜನ ನಿಮ್ಮ ವಿಷಯದಲ್ಲಿ ಹೀಗೆ ಬರೆಯುತ್ತಿರುವುದನ್ನು ಕಂಡು ನನಗೆ ದುಃಖವಾಗುತ್ತಿದೆ ” ಎಂದನು.

ಅದನ್ನು ಅವಳು ತೆಗೆದುಕೊಂಡು “ ಮುದ್ದು, ಚುನಾವಣೆ ಎಂದರೆ ಓಕುಳಿ ಸ್ನಾನ,  ಇದೊಂದು ಅಶ್ಲೀಲ ರಂಗ ಪಂಚಮಿ ಎಲ್ಲರೂ ರಾಡಿ ಒಗೆಯುವವರೇ   ನಮ್ಮ ಅಂತರಂಗ ನಮಗೆ ತಿಳಿದಿದ್ದರೆ ಮಾತ್ರ ಬೇಸರಪಡಬೇಕಾಗಿಲ್ಲ ” ಎಂದು ನಗುತ್ತಾ ಹೊರಗೆ ಬಂದಳು

ಕಾರಿನಲ್ಲಿ ಕುಳಿತು ಮನೆಗೆ ಹೊರಟಾಗ ಮುದ್ದು ಕೊಟ್ಟ ಪತ್ರಿಕೆಗಳ ಟೀಕೆಯನ್ನು ಒಂದೊಂದಾಗಿ ಓದ ತೊಡಗಿದಳು.  ಆತ

ಅವಳ ವಿರುದ್ಧವಾಗಿ ಬಂದ ಎಲ್ಲ ಲೇಖನಗಳನ್ನು ಸಂಗ್ರಹಿಸಿ ಕೊಟ್ಟಿದ್ದ. ಅದರೊಲ್ಲೊಂದು ಬರಹ ತಿರುಮೂರ್ತಿಯದು ಅವನ ಪತ್ರಿಕೆಯಲ್ಲಿ ಬಂದುದು "ವಿಕ್ರಮನಗರ ಅರುಣಾಚಲಯ್ಯನವರು ಹುಟ್ಟಿ ಬೆಳೆದ ಊರು, ಗೊಂಡಾರಣ್ಯದ ಕೈದೀವಿಗೆಯಾಗಿದ್ದ ಅವರು, ತಮ್ಮ ಕರ್ತವ್ಯ ಮಾಡ ಮಾಡುತ್ತಾ ಮಡಿದರು ಅವರ ಆತ್ಮಕ್ಕೆ ತೃಪ್ತಿ ಉಂಟಾಗಲು ಜನವಾದಿ ಪಕ್ಷದಿಂದ ಹುರಿಯಾಳಾಗಿ ನಿಂತ ಶ್ರೀ ಗೋವರ್ಧನರಾಯರಿಗೆ ಮತದಾನ ಮಾಡಬೇಕಾದುದು ನಾಗರಿಕ ಧರ್ಮವಲ್ಲವೇ ?" ಎಂದು ಬರೆದಿದ್ದ ಅನಂತರದ ಮಾತುಗಳು ಕಾಂಚನಮಾಲೆಯು ಕುರಿತಾದ ವ್ಯಕ್ತಿ ಟೀಕೆ. "ಅರುಣಾಚಲಯ್ಯನವರ ಕೈಯಲ್ಲಿ ರಾಜಕೀಯದ ಉಪ್ಪನ್ನ ಉಂಡು ಬೆಳೆದ ಈಕೆ, ಅವರು ನೆಟ್ಟು ಬೆಳೆಯಿಸಿದ ಗಿಡಕ್ಕೆ ಕೊಡಲಿ ಹಾಕಲು ಹೊರಟಿದ್ದಾಳೆಂದರೆ ಅಪಮಾನದ ಮಾತು ನಾಡಿಗೆ ಇದಕ್ಕಿಂತ ದೊಡ್ಡ ದ್ರೋಹವಿಲ್ಲ ಕಾಂಚನಮಾಲೆಯ ಸ್ವತಂತ್ರಳಾಗಿ ನಿಂತಿದ್ದರೂ ಅವಳಿಗೆ ಓಟು ಕೊಡ ಬಹುದು ಆದರೆ ಶ್ರಮವಾದಿ ಪಕ್ಷದ ಸ್ಪರ್ಧಿಯಾಗಿ ಕೇಳುತ್ತಿರುವ ಭಿಕ್ಷೆಗೆ ಮೋಸ ಹೋಗಬೇಡಿ. ಅವಳಂತೆ ರಾಜಕೀಯ ಜೀವನದಲ್ಲಿ ಬಣ್ಣ ಬದಲಿಸುವ ಓತಿ ಇನ್ನೊಂದಿಲ್ಲ ಅನುಭವವುಳ್ಳ ಯಾರೂ ಅವಳ ದಾರಿಯನ್ನು ಒಪ್ಪಲಾರರು. ಅಂಥ ವ್ಯಕ್ತಿಗಳಲ್ಲಿ ವಿಶ್ವಾಸವಿಲ್ಲ ವೆಂದು ತೋರಿಸಿ ಕೊಟ್ಟರ ಮಾತ್ರ ಅರುಣಾಚಲಯ್ಯನವರ ಆತ್ಮಕ್ಕೆ ತೃಪ್ತಿಯಾದೀತು" ಎಂದು ಬರೆದಿದ್ದ.

ಓದಿದಳು, ತಿರು ತಿರುಗಿ ಅವೇ ಮಾತುಗಳನ್ನು ಓದಿದಳು. ತಿರುಮೂರ್ತಿಯ ಆ ಮಾತು ನಿಜವಾಗಲಿ ಎಂದೂ ಬಯಸಿದಳು ನಿಜಕ್ಕೂ ಅವಳಿಗೆ ಅರುಣಾಚಲಯ್ಯನವರ ಮರವೆಯಾಗುವಂತಿಲ್ಲ, ತನ್ನ ಜನವಾದಿ ಗೆಳೆಯರ ಮರವೆಯೂ ಆಗುವಂತಿಲ್ಲ. ಅವಳು ಸ್ಪರ್ಧೆಗೆ ನಿಂತುದು–ತನ್ನೊಂದು ಉದ್ದೇಶ ಸಾಧನೆಗೆ, ಹೊರತು ಜನ ವಾದಿಗಳನ್ನು ಸೋಲಿಸುವ ಬಯಕೆಯಿಂದಲ್ಲ

ಆದರೆ ಅವಳಿಗೆ ಈಗೀಗ ಅಂತರಂಗದಲ್ಲಿ ಭಯವೂ ತುಂಬಿದೆ. ತಾನು ಆರಿಸಲಾರದೆ, ತನ್ನ ಪಕ್ಷ ಬಹುಮತದಿಂದ ಗೆದ್ದು ಬಂದರೆ, ಆಗ ತನ್ನನ್ನು ಬಿಟ್ಟು ಸರಕಾರ ರಚನೆಗೊಂಡುದಾದರೆ–ಮುಂದೇನು

ಗತಿ ? ಎಂಬ ಭಯ. ಆದರೂ ಅಂಥ ಪ್ರಚಂಡ ವಿಜಯ ಶ್ರಮವಾದಿ ಗಳಿಗೆ ಬರಲಾರದು ಎಂದಂದು ಕೊಳ್ಳುತ್ತಾಳೆ

ಅಂತೂ ತುಂಬ ಖಿನ್ನಮನಸ್ಸಿನಿಂದ ಮನೆಗೆ ಮರಳಿದಳು, ಅಲ್ಲಿಂದ ತಿರುಗಿ ಎದ್ದು ಹೊರಟಳು ಆ ಸಂಜೆಯೊಳಗಾಗಿ ತಾನು ಮುದ್ದುವಿನಿಂದ ದೊರಕಿಸಿಕೊಂಡ ಅಂಕೆ, ಸಂಖ್ಯೆ ಅಕ್ಷರಗಳ ಅರ್ಥ ವೇನೆಂದು ತಿಳಿಯುವ ಚಪಲದಿಂದ ಹೊರಟಳು ತನ್ನ ಹಿಂದಣ ಅಧಿಕಾರದ ವರ್ಚಸ್ಸು ಸ್ನೇಹಗಳಿಂದ ಒಬ್ಬಿಬ್ಬರು ಅಧಿಕಾರಿಗಳನ್ನು ಭೇಟಿಯಾಗಿ ಅದನ್ನು ತಿಳಿದುಕೊಂಡೂ ಬಂದಳು ಚುನಾವಣೆಯ ಕಾಳಗದಲ್ಲಿ ಆ ಅಂಕೆ ಅಕ್ಷರಗಳು ನೋಟುಗಳಿಗಿಂತ ಅಮೂಲ್ಯ ವಸ್ತು ಗಳಾಗಿದ್ದುವು ಎಂದು ಗೋಚರವಾಯಿತು ಯಾವಾವ ಕೇಂದ್ರಗಳಿಗೆ ಯಾವಾವ ಮತ ಪತ್ರಗಳು ಹೋಗುತ್ತವೆ ಎಂಬ ರಹಸ್ಯವು ಅದರಲ್ಲಿ ಅಡಗಿತ್ತು

# ಅಧ್ಯಾಯ ೧೨

ಗೊಂಡಾರಣ್ಯ, ಮಲೆನಾಡಿನ ಭಾಗವಾದ ಮಾನವತೀ ಕ್ಷೇತ್ರ ದಲ್ಲಿ ಜನವಾದಿ ಸರಕಾರದ ಹಲವಾರು ಯೋಜನೆಗಳು ಯಶಸ್ಸು ಗೊಂಡು, ಅಲ್ಲಿನ ಜನಕ್ಕೆ ವಿಶೇಷ ತೃಪ್ತಿಯನ್ನು ತಂದುಕೊಟ್ಟಿದೆ ಎನ್ನ ಬೇಕು ಇದು ತೀರ ಹಿಂದುಳಿದ ಭಾಗ ಈ ಭಾಗದ ತುತ್ತತುದಿ ಯಲ್ಲಿ ಒಂದು ಸೆರಗಿನಲ್ಲಿ ಕಿಗ್ಗಳ್ಳಿಯಂತಹ ಗ್ರಾಮ ಸಮುದಾಯವಿದೆ. ಅಲ್ಲಿನ ಪಟ್ಟಾದಾರರಾದ ವಾಮದೇವ, ಜಯದೇವಗಳಂಥವರು ತೋರಿದ ಸಹಕಾರದಿಂದ, ದ್ವೇಷ ಬೆಳೆಯಿಸದೆ, ಭೂಸುಧಾರಣೆಯ ಪ್ರಶ್ನೆಗಳು ರೂಪುಗೊಂಡಿದ್ದುವು ಹಿಡುವಳಿಯ ಮಿತಿ, ಲಾವಣಿಯ ಮಿತಿ, ಒಂದು ಸಮ್ಮತವಾದ ನಿಷ್ಕರ್ಷೆಗೆ ಬಂದಿತ್ತು. ಅರುಣಾಚಲಯ್ಯ ನವರು ಮಾಡಿದ ಹೊಸ ಶಾಸನಗಳಿಂದ ವ್ಯಕ್ತಿಯ ಹಿಡುವಳಿಯ ಮಿತಿ ಐವತ್ತು ಎಕರೆಗೆ ಇಳಿಯಿತು ಆದರಿಂದ ಜಮೀನುದಾರರ ಆದಾ

ಯವೂ ಇಳಿಯಿತು. ಜಮೀನ್ದಾರರು ಕಳೆದುಕೊಂಡ ಭೂಮಿಗೆ ಸಾಮಾನ್ಯ ಪರಿಹಾರವಷ್ಟೇ ದೊರೆಯಿತು. ಕಾಲದ ಕರೆಯನ್ನೊಪ್ಪಿ ತಲೆ ಬಾಗಿದ ಪಟ್ಟೆದಾರರಂಥ ಹಲವಾರು ಜನಗಳ ಸಹನೆಯಿಂದಾಗಿ, ಒಕ್ಕಲುಗಳಾಗಿದ್ದವರು ಸ್ವತಂತ್ರ ರೈತರಾಗುವುದಕ್ಕೆ ಹೆಚ್ಚಿನ ಅವಕಾಶ ವಾಯಿತು ಅಲ್ಲದೆ ಮಲೆನಾಡಿನ ವಿಶಾಲ ಬಂಜರು ಭೂಮಿಗಳನ್ನು ಕೃಷಿ ಮಾಡಲು ಹವಣಿಸಿದ ಸಾವಿರಾರು ರೈತರಿಗೆ ಹಂಚಿಕೊಟ್ಟುದ ರಿಂದ, ಅಲ್ಲಿ ಸಾವಿರಾರು ಒಕ್ಕಲು ಮನೆಗಳು, ಹೊಲ ಗದ್ದೆಗಳು ಕಾಣಿಸ ತೊಡಗಿದವು ಇದರ ಜತೆಗೆ ಅಲ್ಲಿಯೂ ಉದ್ಯೋಗಾಭಿ ವೃದ್ಧಿಯ ಕೇಂದ್ರವನ್ನು ತೆರೆದಿದ್ದರು ಬೆಂಕಿಪೆಟ್ಟಿಗೆ ಮೊದಲಾದ ಮರ, ಬಿದಿರುಗಳ ಕೈಗಾರಿಕೆಗಳು ಒಂದೆರಡು ವರ್ಷಗಳಿಂದ ಹಬ್ಬಿ ಕೊಂಡಿವೆ ಅಲ್ಲದೆ ಮಾನವತಿ ಎಂಬ ಬೆಟ್ಟದ ತೊರೆಗೆ, ಚಿಕ್ಕ ಒಡ್ಡು ಕಟ್ಟಿ ವಿದ್ಯುತ್ ಉತ್ಪನ್ನ ಮಾಡಿ ಆದರಿಂದ ಇಲ್ಲಿನ ಕೈಗಾರಿಕೆಗಳಿಗೂ, ಬೇಸಾಯಕ್ಕೂ ಅನುಕೂಲತೆ ಒದಗಿಸಿ ಕೊಟ್ಟಿದ್ದರು ಇಂಥಲ್ಲಿ ರಾಮದಾಸ ಜನವಾದಿ ಪಕ್ಷದ ಸ್ಪರ್ಧಿಯಾಗಿ ನಿಂತುಕೊಂಡ ಅವನಿಗೆ ಪ್ರಬಲ ಇದಿರಾಳಿ, ಶ್ರಮವಾದಿ ಲಾಲಚಂದ

ಅರುಣಾಚಲಯ್ಯನವರ ಪ್ರಯೋಗಗಳು ಪ್ರಯೋಜನ ಕೊಡು ತ್ತಿದ್ದ ಪ್ರದೇಶವಾದುದರಿಂದ ಜನವಾದಿಗಳ ಪರವಾಗಿ ರಾಮದಾಸ್ ಮತಭಿಕ್ಷೆಗೆ ಹೊರಟರೆ, ಅವನ ಇದಿರಾಳಿ "ಇಷ್ಟೆಲ್ಲ ಕೆಲಸ ಶ್ರಮವಾದಿ ಗಳಾದ ನಮ್ಮ ಒತ್ತಾಯದಿಂದ ಆದದ್ದು ಹಿಂದಿನ ಸರಕಾರ ನಿಮಗೆ ನಿಮ್ಮ ಕೈಗಾರಿಕೆಗಳಿಗೆ ವರ್ಷಕ್ಕೆ ಬರಿಯ ಎಂಟು ತಿಂಗಳು ಶಕ್ತಿ ಒದಗಿಸಿ ಕೊಡುತ್ತಿದ್ದರು ನಾವು ಆರಿಸಿ ಬಂದಲ್ಲಿ, ವರ್ಷವೆಲ್ಲ ಶಕ್ತಿ ಒದಗಿಸಿ ಕೊಡುತ್ತೇವೆ ಅಲ್ಲದೆ ಇಲ್ಲಿನ ಪಡು ಭೂಮಿಯನ್ನು ಹಿಂದಿನ ಸರಕಾರದಂತೆ ಶರ್ತ ಹಾಕದೆ ಉಚಿತವಾಗಿ ಕೊಡುತ್ತೇವೆ" ಎಂಬಿವೇ ಮೊದಲಾದ ಧಾರಾಳದ ಮಾತುಗಳನ್ನಾಡತೊಡಗಿದ. ಚುನಾ ವಣೆಯ ಕಾಲದಲ್ಲಿ ಕಾಂಚನಮಾಲೆಯ ಕಣ್ಣು ಈ ಕೇಂದ್ರದ ಮೇಲೆ ನೆಲೆಸಿತ್ತು ಅದು ತೃಪ್ತಿ ಪಡೆದ ನಾಡಾದುದರಿಂದ ಜನವಾದಿಗಳಿಗೆ ಅಲ್ಲಿ ಸೋಲು ಬರಲಾರದೆಂದು ಅವಳು ಎಣಿಸಿದ್ದಳು ಲಾಲಚಂದನ ಅಭ್ಯುದಯ ಅವಳಿಗೆ ಸಹಿಸದ ಮಾತು. ಆತ ನಾಯಕತ್ವಕ್ಕೆ ಹಸಿದ

ಜೀವ ಎಂದು ಬಲ್ಲಳು ಸೇತುರಾಯನಿಗೂ ಆ ಕ್ಷೇತ್ರ ಕಠಿಣದ್ದಾಗಿ ಕಾಣಿಸುತ್ತಿತ್ತು. ಎಲ್ಲೆಲ್ಲಿ ವಿಜಯದ ಆಶೆ ಕಡಮೆಯೋ ಅಲ್ಲೆಲ್ಲ ವಾಮ ಮಾರ್ಗವನ್ನು ಹಿಡಿಯಲು ಆತ ಸಿದ್ಧನಾಗಿದ್ದ ಅಂಥ ಸ್ಥಳಗಳಲ್ಲಿ ಯಾವೆಲ್ಲ ಅಧಿಕಾರಿಗಳು ಅನುಕೂಲರೆಂದು ತಿಳಿದಿದ್ದನೋ ಅವರು ಅಲ್ಲಿಗೆ ಬರುವಂತೆ ಮಾಡಿದ್ದ. ಹಣವನ್ನಂತು ಧಾರಾಳವಾಗಿ ಸುರಿಯ ಬೇಕಿತ್ತು ಜಯದೇವ ವಾಸುದೇವರಂಥ ಪ್ರಭಾವಶಾಲಿ ವ್ಯಕ್ತಿಗಳು ರಾಮದಾಸನ ಸಲುವಾಗಿ ಕೆಲಸ ಮಾಡುತ್ತಿದ್ದರು ಅಲ್ಲಿನ ಮತದ ಪಟ್ಟಿಗಗಳು ಕುಟಿಲತನದಿಂದ ಬಾಯ್ದೆರೆಯದಂತೆ ಎಚ್ಚರ ನೋಡಿ ಕೊಳ್ಳೆಂದು ಕಾಂಚನಮಾಲೆ ರಾಮದಾಸನಿಗೂ ಸೂಚನೆ ಕೊಟ್ಟಿದ್ದಳು

ಚುನಾವಣೆಯ ಕೆಲಸ ಭರದಿಂದ ಸಾಗಿತು ಜನವಾದಿಗಳು ಉತ್ಸಾಹ ತುಂಬಿ ಕೆಲಸ ಮಾಡಬಹುದಾದ ವಾತಾವರಣವನ್ನು ಕಂಡಳು ಇದು ಒಳಗಿಂದೊಳಗೆ ಆಕೆಗೆ ಸಂತೋಷವನ್ನು ಕೊಡು ತ್ತಿತ್ತು ಆದರೆ ಅವಳು ನಿಂತ ವಿಕ್ರಮನಗರದ ಕ್ಷೇತ್ರದಲ್ಲಿ ಅವಳ ಪಾಲಿನ ವಿರೋಧ ತುಂಬ ಹೆಚ್ಚಾಗಿತ್ತು ತಿರುಮೂರ್ತಿ ಗೋವರ್ಧನ ರಾಯನ ಪರವಾಗಿ ಅಲ್ಲಿ ಕೆಲಸಮಾಡುತ್ತಿದ್ದ ದೇಶವಾದಿಗಳಲ್ಲಿ ಸಾಹುಕಾರ ಶೀನಪ್ಪನವರು ಅಲ್ಲಿ ದುಡ್ಡಿನ ಹೊಳೆ ಹರಿಯಿಸುತ್ತಿದ್ದರು ಹೀಗಾಗಿ ತನ್ನ ಪಾಲಿನ ವಿಜಯವನ್ನು ಕುರಿತಾಗಿಯೇ ಅವಳಿಗೆ ಅವಿಶ್ವಾಸ ಮೂಡಿತ್ತು ಆದರೆ ಸೇತುರಾಯ ಮಾತ್ರ "ಎಲ್ಲೆಡೆ ಗಳಲ್ಲಿಯೂ ನಮಗೆ ವಿಜಯ ಸೇಕಡಾ ಅರವತ್ತರ ಪ್ರಾತಿನಿಧ್ಯ ವಾದರೂ ನಮಗೆ ಸಿಗಬೇಕು" ಎನ್ನುತ್ತಿದ್ದ ಅವನ ವಿಶ್ವಾಸವನ್ನು ಕಂಡು ಕಾಂಚನಮಾಲೆಗೆ ಅಂತರಂಗದಲ್ಲಿ ಭಯ, ಬೆರಗುಗಳೆರಡೂ ಆಗಿದ್ದುವು

ಚುನಾವಣೆಯ ದಿನಕಳೆದು, ಮತಗಳ ಎಣಿಕೆಯಾಗ ತೊಡಗಿ ಒಂದೊಂದು ಕೇಂದ್ರದಿಂದಲೂ ಸುದ್ದಿ ಬಂದು ಸೇರತೊಡಗಿದಾಗ, ಅವಳು ಅಧೈರ್ಯಳಾಗಬೇಕಾಯಿತು ವಿಕ್ರಮನಗರದಲ್ಲಿ ಅವಳೇ ಆರಿಸಿ ಬಂದಳು. ಮಾನವತಿ ಕ್ಷೇತ್ರದಲ್ಲಿ ಲಾಲಚಂದ ಆರಿಸಿ ಬರಲಾರ ಎಂದು ಊಹಿಸಿದರೆ–ಬಂದುದು ಅವನೇ, ಸೋತುದು ಅವಳ ಮಿತ್ರ ರಾಮದಾಸ್ ಭೀಮನೂರಿನಿಂದ ಸೇತುರಾಯ ಆರಿಸಿ ಬಂದ.

ಒಟ್ಟಿಗೆ ಅರ್ಧಕ್ಕಿಂತಲೂ ಹೆಚ್ಚು ಮಂದಿ ಶ್ರಮವಾದಿಗಳೇ ಆರಿಸಿ ಬಂದರು ಅಂತಹ ವಿಜಯಕ್ಕೆ ಕಾಂಚನಮಾಲೆಯ ಮನಸ್ಸು ಸಿದ್ಧವಾಗಿರಲಿಲ್ಲ. ಸಾಲದುದಕ್ಕೆ ಜನವಾದಿಗಳಿಗೂ ತುಂಬ ಸೋಲು, ದೇಶವಾದಿಗಳಿಗೂ ತುಂಬ ಸೋಲೇ. ಗೆದ್ದು ಬಂದವರಲ್ಲಿ ಸ್ವತಂತ್ರರೇ ಅಧಿಕ

ಮತ ಗಣನೆಯ ದಿನ ಮಾನನಗರದಲ್ಲಿ ಪಟ್ಟೆದಾರರು, ರಾಮದಾಸರು ಕಾದು ಕುಳಿತಿದ್ದರು ರಾಮದಾಸ್ ಫಲಿತಾಂಶವನ್ನು ನೋಡುತ್ತಾ ನಡುವಿನಲ್ಲಿ ಎದ್ದು ಹೊರಕ್ಕೆ ಬಂದ ಅದು ತೀರ ಎದೆಯೊಡೆಯುವ ಅನುಭವವಾಗಿತ್ತು ಅವನಿಗೆ "ನನಗೆ ಪ್ರಜಾಪ್ರಭುತ್ವದಲ್ಲೇ ವಿಶ್ವಾಸ ಅಳಿಯಿತು ಈ ಐದಾರು ವರ್ಷಗಳಲ್ಲಿ ಈ ಪ್ರಾಂತಕ್ಕಾಗಿ ನಾವು ಸುರಿಸಿದ ಬೆವರು, ಮಾಡಿದ ಕೆಲಸ ಇನ್ನೊಂದು ಕಡೆ ಮಾಡಿರಲಿಲ್ಲ. ನಮ್ಮ ಕೆಲಸ, ಧ್ಯೇಯಗಳನ್ನು ಮೆಚ್ಚಬೇಕಾದವರಿದ್ದರೆ ಅದು ಇವರು ಇವರೇ ಶ್ರಮಗಾರ ಪಕ್ಷದ ಬಾಲ ಹಿಡಿದ ಮೇಲೆ ಈ ನಾಡಿಗೆ ಭವಿಷ್ಯವಿಲ್ಲ" ಎಂದು ತನ್ನ ಸೋಲನ್ನು ನಾಡಿನ ಜನಗಳ ಸೋಲಾಗಿ ತಿಳಿದು, ಮನೆಗೆ ಮರಳಿದ ಅವರ ಜತೆಗೆ ಅಷ್ಟೇ ಕಳೆಗುಂದಿದ ಮುಖದಿಂದ ಜಯದೇವರು ಬಂದರು ಅವರು ದಾರಿಯುದ್ದಕ್ಕೂ "ನೀವೇನೇ ಅನ್ನಿ, ಇಲ್ಲಿ ನ್ಯಾಯ ನಡೆದಿಲ್ಲ ಈ ಪ್ರಾಂತ್ಯದ ಜನಗಳನ್ನು ನಾನು ಬಲ್ಲೆ ಹಿಂದೆ ಹತ್ತೆಂಟು ಮಂದಿ ವಾಮನರಾಯನ ಹಿಂದೆ ಸುಳಿದಾಡಿದವರು ಇಲ್ಲಿ ಇರಬಹುದು ಆದರೆ ಸಾವಿರಾರು ಆದಿವಾಸಿಗಳು, ರೈತರು ಹಣದ ಆಸೆಗಾಗಲೀ ಶ್ರಮವಾದಿಗಳ ಪ್ರಚಾರಕ್ಕಾಗಲೀ ಮೋಸ ಹೋಗಿ ಮತ ಕೊಟ್ಟಿದ್ದಾರೆಂದು ನಾನು ತಿಳಿಯೆ. ಅಂತೂ ವಾಮನರಾಯ ಗೆದ್ದಂತಹ ದಾರಿಯಿಂದಲೇ ಇವರೂ ಗೆದ್ದಿರಬೇಕೆಂದು ನನ್ನ ಅಂತರಂಗ ಹೇಳುತ್ತಿದೆ" ಎಂದರು

"ನನಗೂ ಆ ಭಯವಿತ್ತು, ನಾನೂ ಅಷ್ಟು ಜಾಗ್ರತೆ ವಹಿಸಿದ್ದೆ ನಮ್ಮ ಜನರೂ, ಏಜಂಟರೂ ಸರ್ಪ ಕಾವಲು ಹಾಕಿದ್ದರು ಮೋಸ ಮಾಡುವುದಾದರೂ ಹೇಗೆ?" ಎಂದು ಅವನ ವಾದ ಆ ರಾತ್ರಿಯೇ ಅವರು ಮಾನನಗರವನ್ನು ಬಿಟ್ಟು, ಮುಖ ತಗ್ಗಿಸಿಕೊಂಡು ವಿಕ್ರಮನಗರವನ್ನು ಸೇರಿದರು. ನಡು ರಾತ್ರಿಯ ಮೇಲೆ ನಗರವನ್ನು ಸೇರಿ

ದಾಗ ಒಂದೊಂದಾಗಿ ತಮ್ಮ ಪಕ್ಷದ ಸೋಲಿನ ಕತೆ ಕೇಳಿಸತೊಡಗಿತು. ಮಲಗಿಕೊಂಡರೆ ಅವರಿಗೆ ನಿದ್ದೆ ಬರುವಂತಿಲ್ಲ. ಅರ್ಧ ತೂಕಡಿಕೆ, ಅರ್ಧ ಚಿಂತೆಯಲ್ಲಿ ಸಮಯ ಕಳೆದರು ಬೆಳಗಿನ ಜಾವದ ಹೊತ್ತಿಗೆ ಫೋನ್ ಕರೆ ಅವನನ್ನು ಎಚ್ಚರಗೊಳಿಸಿತು ಆತ ತೀರ ಉದಾಸೀನಭಾವ ದಿಂದ ಕರೆದವರಾರೆಂದು ಕೇಳಿದ

"ರಾಮದಾಸರು ಇಲ್ಲವೇ ?"

"ಇದ್ದೇನಲ್ಲ, ನಾನೇ ಮಾತನಾಡುವುದು" ಮುಖದಲ್ಲಿ ವಿಸ್ಮಯ ಕಾಣಿಸಿತು "ಕಾಂಗ್ರೇಚ್ಯುಲೇಷನ್ಸ್" ಎಂದ

"ನಾನೇ ಬರುತ್ತೇನೆ" ಎಂದು ಫೋನ್ ಧ್ವನಿಸಿತು

ಕಾಲು ತಾಸಿನೊಳಗಾಗಿ ಕಾಂಚನಮಾಲೆ ಆ ಅಪವೇಳೆಯಲ್ಲಿ ಅಲ್ಲಿಗೆ ಧಾವಿಸಿ ಬಂದಳು. ಆತ ಬಾಗಿಲು ತೆರೆದು ಅವಳನ್ನು ಸ್ವಾಗತಿಸಿದ

"ನೀವು ತೀರ ಕಂದಿದ್ದೀರಲ್ಲ ಯಾಕಷ್ಟು ಭಯ ?" ಎಂದಳು ಆಕೆ

"ಭಯವೇನು? ಮತ್ತೊಂದೇನು? ನೀವು ಭವಿಷ್ಯವನ್ನು ತಿಳಿಯ ಬಲ್ಲವರು, ಗೆಲ್ಲುವವರಾರೆಂದು ತಿಳಿದು ಪಕ್ಷ ಬದಲಿಸಿ ಬಿಟ್ಟಿರಿ"

"ದಾಸ್, ಅಂಥ ಮಾತನಾಡಬೇಡಿ. ಹಾಗಿದ್ದಲ್ಲಿ ನಾನಿಲ್ಲಿಗೆ ಬರಬೇಕಾಗಿರಲಿಲ್ಲ ಸತ್ಯ ತಿಳಿದೂ ಅಂಥ ಮಾತನಾಡಬಾರದು"

"ಸತ್ಯ ತಿಳಿಯಲು ಇನ್ನೂ ಸಮಯಬೇಕು"

'ಅದೇ ಗೆಲ್ಲುತ್ತದೆ, ನಾನಲ್ಲ. ನಾನು ಗೆಲ್ಲುವೆನೆಂದು ತಿಳಿ ದಿರಲಿಲ್ಲ."

"ಇರಲಿ, ಏನು ಅವಸರಿಸಿ ಬಂದಿರಿ ? ನೀವು ಕೊಟ್ಟ ಎಚ್ಚರ, ಸಹಾಯ ಎಲ್ಲವೂ ವ್ಯರ್ಥವಾಯಿತೆಂದು ಕೇಳಿ ನಿಮಗೆ ಬೇಸರವಾಗಿರ ಬಹುದು"

"ಬೇಸರವಾಗದೆ ಇದ್ದೀತೇ ? ಬೇಸರವಷ್ಟೇ ಅಲ್ಲ, ಸಿಡಿಲೆರಗಿ ದಂತಾಗಿದೆ ಮಾನ ಜಿಲ್ಲೆಯೊಂದು ಪ್ರಯೋಗಶಾಲೆ ಎಂದು ತಿಳಿದಿದ್ದೆ"

"ಅದೇ ಸೋತಿತಲ್ಲ."

"ಇರಲಿ, ಅಲ್ಲಿ ಹಂಚಿದ ಮತಪತ್ರಗಳು ಯಾವುವು ಎಂದು

ನೆನಪಿದೆಯೇ ?"

"ಓ ಸಿ ಒಂದರಿಂದ ಎಂಭತ್ತು ಸಾವಿರದ ತನಕ"

"ಅಷ್ಟಕ್ಕೆ ಕಾಂಚನಮಾಲೆ ತನ್ನ ಕಿಸೆಯಿಂದ ಒಂದು ಕಾಗದ ವನ್ನು ತೆಗೆದು ಅದರಲ್ಲಿನ ಅಂಕೆಗಳನ್ನು ನೋಡುತ್ತಾ "ಸರಿ, ಇಲ್ಲಿ ನೋಡಿ-ಅವೇ ಅಂಕೆಗಳಿವು"

"ಅಂದರೆ ?"

"ಅಂದರ-ಪೆಟ್ಟಿಗೆಗಳಲ್ಲಿ ರಕ್ಕು ಮತಪತ್ರಗಳು ಬಿದ್ದಿರ ಬಹುದು, ಅಪಹರಣವೂ ಆಗಿರಬಹುದು ಅಂತೂ ಮೊದಲಿಗೆ, ಸಂಬಂಧಪಟ್ಟ ಫಾರ್ಮುಗಳನ್ನು ತರಿಸಿಕೊಳ್ಳಿ ಕೆಲವು ಕ್ಷೇತ್ರಗಳಲ್ಲಿ ನಮ್ಮ ಪಕ್ಷಕ್ಕೆ ಅನುಕೂಲರಾಗದ ಮತದಾರರನ್ನು ಬೆದರಿಸಿ ಮರಳಿ ಕಳಿಸಿದ್ದೂ ಉಂಟು ಸುಳ್ಳು ಪತ್ರಗಳನ್ನು ತುಂಬಿಸಿರಬೇಕೆಂಬ ಸಂಶಯ ಮೊದಲಿಸಿಂದಲೂ ನನಗಿದೆ ನೀವು ಬೇಕಾದರೆ ನೋಡಿ- ದಾಖಲೆಗಳು ಸರಿಯಾಗಿದ್ದರ, ನಿಮ್ಮಲ್ಲಿ ಬಂದ ಮತದಾರರ ಸಂಖ್ಯೆ ಗಿಂತ ಅಧಿಕ ಮತಪತ್ರಗಳು ಸಿಗಲೇಬೇಕು ಅಂತು ಎಲ್ಲಾ ದಾಖಲೆ ಗಳನ್ನು ತರಿಸಿಕೊಂಡು ನನಗೂ ತೋರಿಸಿ, ಅರ್ಜಿಯನ್ನು ತಯಾರಿಸಿ, ನನ್ನಿಂದಾದ ಸಹಾಯ ಮಾಡುತ್ತೇನೆ" ಎಂದು ನುಡಿದು ಅಲ್ಲಿ ಅಧಿ ಕಾರಿಗಳಾಗಿದ್ದವರ ವಿಚಾರ, ರಕ್ಕು ನಡೆದಿರಬಹುದಾದ ದಾರಿಗಳನ್ನು ಸೂಚಿಸಿ, ಬೆಳಕು ಹರಿಯುವ ಮುಂಚೆ ಹೊರಟು ಹೋದಳು

ಮರುದಿನವೆಲ್ಲ ವಿಕ್ರಮನಗರದ ಉದ್ದಕ್ಕೂ, ನಾಡಿನುದ್ದಕ್ಕೂ ಹಾಹಾಕಾರ, ಜಯ ಜಯ ಕಾರಗಳೇ ಮುಖ್ಯ ನಗರಗಳಲ್ಲಿ ಶ್ರಮ ಗಾರರು ತಮ್ಮ ಅಭೂತಪೂರ್ವ ವಿಜಯಕ್ಕಾಗಿ ಸಭೆ, ಮೆರವಣಿಗೆ ಗಳನ್ನು ಜರಗಿಸಿ, "ಭಾರತದಲ್ಲಿ ಪ್ರಥಮ ಶ್ರಮಗಾರ ಸರಕಾರವನ್ನು ರಚಿಸುವ ಭಾಗ್ಯ ಗೊಂಡಾರಣ್ಯದ್ದು" ಎಂದು ಸಾರಿದರು

ಅಂಥ ವೇಳೆಯಲ್ಲಿ ಶ್ರಮಗಾರ ಮುಖಂಡರಲ್ಲಿ ಎಷ್ಟು ಸಂತೋಷವೋ, ಅಷ್ಟೇ ಅಸಮಾಧಾನವವೂ ತೋರಿದೆ. ಕಾಂಚನ ಮಾಲೆಗೆ ಯಾವತ್ತೂ ಸ್ಥಿತಿ ತಿಳಿದಿದೆ. ಸೇತುರಾಯನ ಕೃಪೆಯಿಂದ ಅವಳನ್ನು ಪಕ್ಷದ ಅಧ್ಯಕ್ಷಳನ್ನಾಗಿ ಮಾಡಿದ್ದಾರೆ ಅದರಿಂದ ಲಾಲ ಚಂದನಿಗೆ ವಿಶೇಷವಾದ ಅತೃಪ್ತಿ ಹುಟ್ಟಿದೆ. ಆತ ಅಂಥ ವಿಜಯ

ದೊರಕೀತು ಎಂದು ನೆನೆದವನಲ್ಲ ಅವನು ನೇರಾಗಿ ಸೇತುರಾಯನ ಬಳಿಗೆ ಧಾವಿಸಿ "ಸೇತುರಾವ್, ನಿಮ್ಮದೆಲ್ಲ ಅವಸರವಾಯಿತು ಸಮ್ಮಿಶ್ರ ಸರಕಾರವಾದೀತು ಎಂಬ ಭಯದಿಂದ ನೀವು ಆಕೆಯನ್ನು ಒಲಿಸಿ, ಹೊಸಬಳಾದರೂ ಅಧ್ಯಕ್ಷಳನ್ನಾಗಿ ಮಾಡಿದಿರಿ ಇಷ್ಟುಕಾಲ ಪಂಗಡಕ್ಕೆ ಜೀವ ತೆತ್ತು ದಣಿದವರು ನಾವು ಈಗ ರಾಜಪ್ರಮುಖ ಅವಳನ್ನು ಕರೆಯಿಸಿ ಮಂತ್ರಿ ಮಂಡಳ ಮಾಡಲು ಹೇಳಿದರೆ ನಮಗೆಷ್ಟು ಮರ್ಯಾದೆ ಬಂತು ? ಶ್ರಮಗಾರ ಪಕ್ಷದ ಎಸೆಂಬ್ಲಿ ಸದಸ್ಯರಿಗೆ ನೀವು ಮುಖ್ಯರಾಗಿ ನಿಂತು ಪ್ರಧಾನಿಗಳಾದರೂ ಸರಿಯೇ, ಇಲ್ಲವಾದರೆ ನಾನಾದರೂ ಆಗುತ್ತೇನೆ ಆಕೆಯನ್ನು ನೀವು ಅದಕ್ಕಿಂತ ಮೇಲೆ ಎತ್ತಿ ಹಿಡಿಯುವುದಾದರೆ ನನ್ನ ರಾಜಿನಾಮೆ ತೆಗೆದುಕೊಳ್ಳಿ" ಎಂದು ಬೆದರಿಸಿದ

ಸೇತುರಾಯನಿಗೆ ಲಾಲಚಂದನಂತಹ ಸಹಚರನ ಸ್ನೇಹ, ಪ್ರಭಾವಗಳೆರಡೂ ಅನಿವಾರ್ಯವಾಗಿದ್ದುವು ಅವನನ್ನು ಅಸಂತೋಷ ಗೊಳಿಸಿದರೆ ಪಂಗಡದಲ್ಲಿ ಒಡಕು ಬರಲೂ ಬಹುದು ಇತ್ತ ಅವನ ಯೋಚನೆಗಳು, ಹಂಚಿಕೆಗಳು ಬೇರೆಯೇ ಇವೆ ಆ ದೃಷ್ಟಿಯಿಂದ ಕಾಂಚನಮಾಲೆಯನ್ನು ಪಕ್ಷದ ನಾಯಕಿಯನ್ನಾಗಿ ಮಾಡಿದ್ದಾಗಿದೆ. ತನ್ನ ಸ್ಥಳವನ್ನೇ ಅವಳಿಗೆ ಕೊಟ್ಟುದು ಆದುದರಿಂದ ರಾಜ ಪ್ರಮುಖ ನಿಂದ ಕರೆ ಬರುವುದಿದ್ದರೆ ಅದು ಅವಳಿಗೇನೇ ಹೀಗಾಗಿ ಲಾಲ ಚಂದನ ವಾದಕ್ಕೆ ಪ್ರತಿ ಮಾತನ್ನು ಹೇಳಲಾರದೆ ಸಹನೆಯನ್ನು ಬೋಧಿಸಿ ಕಳುಹಿಸಿ ಕೊಟ್ಟ

ಆದರೆ ಹತ್ತು ದಿನಗಳು ಸರಿದರೂ ರಾಜಭವನದಿಂದ ಯಾವು ದೊಂದು ಕರೆಯೂ ಬಹಿರಂಗವಾಗಿ ಬರಲಿಲ್ಲ ನಾಡಿನುದ್ದಕ್ಕೂ, ಚುನಾವಣೆಯಲ್ಲಿ ತುಂಬ ಅನ್ಯಾಯಗಳು ನಡೆದಿವೆ ಎಂಬ ಕೂಗು ಎದ್ದಿದೆ ಸೋತವರು ಅನೇಕರು ಚುನಾವಣೆಯ ವಿರುದ್ಧ ದಾಖಲೆ ಗಳನ್ನು ಅರಸತೊಡಗಿದ್ದಾರೆ ಅವೆಲ್ಲ ಸಿದ್ಧಾಂತವಾಗುವ ತನಕ ಯಾವ ಭಯವೂ ಇಲ್ಲ ನಿಜ, ಆದರೆ ತಾವು ಗೆದ್ದ ದಾರಿ ನ್ಯಾಯ ಮಾರ್ಗದ್ದೆಂದು ತಿಳಿದೇ ಇದ್ದುದರಿಂದ ಆ ವಿಷಯದಲ್ಲಿ ಸೇತುರಾಯ ನಿಗೆ ಭಯವಿಲ್ಲದೆ ಇಲ್ಲ. ಶ್ರಮಗಾರ ಸರಕಾರದ ವಿಚಾರದಲ್ಲಿ ಕೇಂದ್ರಕ್ಕೆ

ಭರವಸೆಯಾಗಲಿ, ಪ್ರೀತಿಯಾಗಲಿ ಉಳಿದಿಲ್ಲವೆಂಬುದು ಗೊತ್ತು. ಈಗ ಅದರ ಜತೆಗೆ, ತನಗೆ ನೆರವಾದ ವ್ಯಕ್ತಿಗಳನ್ನು ರಕ್ಷಿಸುವ ಹೊಣೆಯೂ ನೇರಿಕೊಂಡಿದೆ ಒಂದೆಡೆ ಲಾಲಚಂದನ ಬೆದರಿಕೆಯೂ ಇದೆ. ಅವರಿಬ್ಬರಲ್ಲಿ ನಡೆದ ಈ ಸಂಭಾಷಣೆಯನ್ನು ಚಾಚೂ ತಪ್ಪದೆ ಮುದ್ದು ತನ್ನ ಯಜಮಾನಿಗೆ ತಿಳಿಸಿದ

ಸೀತಾರಾಯ ಅವಳಲ್ಲಿಗೆ ಮಾತು ಕತೆಗೆ ಬಂದಾಗ, ಇಂಥ ಪ್ರಸ್ತಾವವೇ ಬಂದೀತು ಎಂಬುದನ್ನು ನಿರೀಕ್ಷಿಸಿದ್ದಳು. ಆತ ಬಂದು "ಕಾಂಚನ, ನಿನಗೆ ಇಷ್ಟು ಪ್ರಚಂಡ ಜಯ ಸಿಕ್ಕೀತೆಂದು ಎಣಿಸಿದ್ದೆಯಾ?" ಎಂದು ಹಿಗ್ಗಿನಿಂದ ಕೇಳಿದ

"ನಾನು ಸೋಲಿಗೂ ಸಿದ್ಧಳಾಗಿ ಹೋದವಳು. ನಿಮ್ಮ ಪಕ್ಷವನ್ನು ನೇರಿದ ಬಗ್ಗೆ ಜನಗಳಿಗೆ ನನ್ನ ಮೇಲೆ ಎಂತಹ ತಿರಸ್ಕಾರ ಹುಟ್ಟಿದೆ ಎಂಬುದು ನನಗೆ ಗೊತ್ತು"

"ಆದರೆ ನಮ್ಮ ಜನಗಳು ಜೀವ ಬಿಟ್ಟು ನಿನಗಾಗಿ ಕೆಲಸ ಮಾಡಿದ್ದಾರೆ"

ಕಾಂಚನಮಾಲೆ ನಕ್ಕಳು 'ಅಷ್ಟೆಲ್ಲ ಮಾಡದೆ ಆದೀತೇ? ಅದು ತಿಳಿದೇ ಇದೆ ಮುಖ್ಯವಾಗಿ ಗೆಲ್ಲಬೇಕಾಗಿತ್ತು, ಗೆದ್ದೆವು. ನಮ್ಮ ಗುರಿಯು ನಲುವಾಗಿ ಏನೇನೋ ಮಾಡಬೇಕಾಯಿತು. ಅದು ಅನಿವಾರ್ಯ ಗುರಿಯೇ ಮುಖ್ಯ, ಇಲ್ಲದೆ ಹೋದರೆ ಬರಿಯ ತತ್ವಜ್ಞಾನವನ್ನಿರಿಸಿಕೊಂಡರೆ ರಾಮುದಾಸನ ಗತಿಯಾದೀತು"

"ಈಗಲೇ ಸುದ್ದಿ ಉಂಟು-ಆತ ಮತ್ತು ಕೆಲವರು ಚುನಾವಣೆ ವಿರುದ್ಧ ಅರ್ಜಿಹಾಕುತ್ತಾರೆಂದು"

"ಆತಗೆ ಹುಚ್ಚು, ಸೋತವರಿಗೆ ಆದೊಂದು ಆಶೆ ಇರುತ್ತದೆ, ತಾವು ಸೋತುದುದರಿಂದ ವಂಚನೆ ನಡೆದಿರಲೇಬೇಕೆಂದು ಊಹೆ ನಡೆದರೂ ಅದನ್ನು ಸಾಧಿಸಿ ತೋರಿಸುವುದು ಸಣ್ಣ ಕೆಲಸವಲ್ಲ. ನನಗೆ ಜನವಾದಿಗಳ ಭಯವಿರಲಿಲ್ಲ. ಅವರಲ್ಲಿ ಹಣವಂತರಾರೂ ಇಲ್ಲ. ಎಲ್ಲರಂತೆ ಅವರೂ ನಾಲ್ಕೈದು ವರ್ಷಕಾಲ ದುಡಿದಿದ್ದಾರೆ. ಅಷ್ಟೇ ಅವರ ಭಾಂಡವಳು ಆದರೆ ಈ ಬಾರಿ ಜನಗಳನ್ನು ದಕ್ಷಿಣೆಯಿಂದ ತೊಯ್ಯಿಸಿದವರು ದೇಶವಾದಿಗಳು, ಸ್ವತಂತ್ರರು."

"ಇಲ್ಲ, ನಮಗೂ ತುಂಬ ವೆಚ್ಚವಾಯಿತು ಮಾನ ಜಿಲ್ಲೆಯಲ್ಲಾಗಲಿ, ವಿಕ್ರಮನಗರದಲ್ಲಾಗಲಿ ತುಂಬ ವೆಚ್ಚವಾಯಿತು, ನಾವು ಯಾವುದನ್ನೂ ಅದೃಷ್ಟಕ್ಕೆ ಬಿಡಲಿಲ್ಲ ವೆಚ್ಚದ ವಿಚಾರ ಮಾತನಾಡಿದರೆ ನಿನಗೇನನಿಸುತ್ತದೆಯೋ ಎಂದು ಸುಮ್ಮನಾದೆ ಚುನಾವಣೆಯೆಂಬುದು ಎಂದೂ ಬರಿಗೈಯ್ಯ ಯುದ್ಧವಲ್ಲ ಮತದಾರರು, ಏಜೆಂಟರು, ಪ್ರಚಾರಕರು ಎಲ್ಲರೂ ಸುಲಿಯುವವರೇ ಅವರ ಹೊಟ್ಟೆ ತುಂಬದೆ ಕೆಲಸ ನಡೆಯುವ ಹಾಗೆಯೇ ಇಲ್ಲ ಆದರೆ ಒಮ್ಮೆ ಗೆದ್ದೆವಲ್ಲ, ಮುಂದೆ ಭಯವಿಲ್ಲ"

ಅಷ್ಟರಲ್ಲಿ ಮಾತು ತಿರುಗಿಸಿ ಆತನೆಂದ "ನಮ್ಮ ಲಾಲಚಂದನಿಗೆ ತುಂಬ ಅಸಮಾಧಾನ. ಅವನು ದೊಡ್ಡ ಕೆಲಸಗಾರ, ತುಂಬ ಪ್ರಭಾವಶಾಲಿ, ಅವನನ್ನು ನೋಯಿಸುವುದಕ್ಕೂ ಇಲ್ಲ, ಬಿಡುವುದಕ್ಕೂ ಇಲ್ಲ ಆತನಿಗೆ ಸ್ತ್ರೀಯರು ಪ್ರಧಾನಿಯಾಗುವುದು ಏನೂ ಸಮಾಧಾನವಿಲ್ಲ"

"ಅಂದರೆ ನಾನು ಆಗಬಾರದು–ಎಂದಿಷ್ಟೇ ಅಲ್ಲವೇ ?"

"ಅದು ನಿಜವೇ, ಅವನನ್ನು ನೋಯಿಸಲು ಬರುವಂತಿಲ್ಲ ಪಕ್ಷದಲ್ಲಿ ಅವನಿಗೆ ಸಾಕಷ್ಟು ಬೆಂಬಲವಿದೆ"

"ನಾನು ಅಧ್ಯಕ್ಷಪದಕ್ಕೆ ರಾಜಿನಾಮೆ ಸಲ್ಲಿಸಬೇಕೆಂಬುದು ಮುಖ್ಯ ವಿಷಯವಲ್ಲವೇ ? ಬಹುಮತ ದೊರೆಯುವುದು ಅನುಮಾನ ಕರವೆನಿಸಿದಾಗ ನನ್ನ ಹೆಸರು ಅನುಕೂಲವಿತ್ತು ಈಗ ಹಾಗೆ ಇಲ್ಲವಷ್ಟೆ ?"

"ಹಾಗೆಂದು ಹೇಳಬೇಡ, ನನ್ನ ಅಭಿಪ್ರಾಯ ಬದಲಾಗಿಲ್ಲ ನಾನಾಗಿ ನಿನ್ನನ್ನು ಕರೆದು ಆ ಸ್ಥಾನ ಕೊಡಿಸಿದವನು. ಅದಕ್ಕೂ ತುಂಬ ಆಕ್ಷೇಪವಿತ್ತು ಅವನ ವಾದ ಹೀಗೆ–ಎನೆಂಬ್ಲಿ ಪಕ್ಷದ ಪ್ರಮುಖ ನಾನಾದರೂ ಪ್ರಧಾನಿಯಾಗಬೇಕು. ಇಲ್ಲವಾದರೆ ಅವನೇ ಆಗಬೇಕು ಎಂಬುದು ಅವನ ವಾದ ನನ್ನ ಸ್ವಂತಕ್ಕೆ ಹೇಳುವುದಾದರೆ ಪಕ್ಷ ಮುಂದೆ ಬರುವುದಕ್ಕೆ ನಾನು ಯಾವ ಬೆಲೆಯನ್ನೂ ಕೊಡಬಲ್ಲೆ."

"ನನ್ನ ಆಕ್ಷೇಪವಿಲ್ಲ, ನಾನು ಪಕ್ಷದಿಂದ ಪಕ್ಷಕ್ಕೆ ಹಾರುವ ಬಾವಲಿಯೆಂದು ಮೊದಲೇ ಪ್ರಸಿದ್ಧಿಗೆ ಬಂದಿದ್ದೇನೆ. ನನ್ನ ಸ್ವಾರ್ಥ ಅಷ್ಟು ಹೆಚ್ಚು ಅನ್ನುತ್ತಾರೆ. ಈಗ ಗೆದ್ದ ಮೇಲೆ ನಿಮ್ಮ ಪಕ್ಷಕ್ಕೂ ರಾಜಿನಾಮೆ ಸಲ್ಲಿಸಿದರೆ, ಆ ಸ್ವಾರ್ಥದ ಬಿರುದಾವರೂ ತಪ್ಪೀತಲ್ಲ."

ಸೇತುರಾಯ ಅಂಥ ಉತ್ತರಕ್ಕೆ ಸಿದ್ಧವಾಗಿರಲಿಲ್ಲ. ಅವಳನ್ನು ಗೆದ್ದ ಮರುದಿನವೇ ಹೊರಗಟ್ಟುವ ನೀತಿ ಅವನಿಗೆ ಒಪ್ಪದ್ದು ತನಗಾಗಿ ಅವಳು ತ್ಯಾಗ ಮಾಡಿಯಾಳು–ಎಂದೆಣಿಸಿ ಈ ಮಾತನ್ನೆತ್ತಿದರೆ, ಅವಳ ಪ್ರತ್ಯುತ್ತರ ಅನುಕೂಲವಾಗಲಿಲ್ಲ

ಅದೇ ದಿನ ಕಾಂಚನಮಾಲೆಗೆ ಅರಮನೆಯಿಂದ ಕರೆ ಬಂದಿತು ಆಕೆ ರಾಜಪ್ರಮುಖನೊಡನೆ ಎರಡು ತಾಸುಗಳಿಗೂ ಮಿಕ್ಕಿ ಸಂಭಾಷಣೆ ನಡೆಯಿಸಿದಳು ಅವರೊಳಗೆ ಏನೇನು ಮಾತುಗಳಾದುವೋ ಅದು ತಿಳಿಯದಾದರೂ, ಹೊರಗಿನ ತೋರಿಕೆಗೆ ಆಕೆ, ಮಂತ್ರಿಮಂಡಳ ರಚಿಸುವ ಹೊಣೆ ಹೊತ್ತು ಬಂದುದಾಗಿ ಪತ್ರಿಕೆಗಳ ಸುದ್ದಿಗಾರರಿಗೆ ತಿಳಿಸಿದಳು ಅನಂತರ ಪಕ್ಷದ ಪ್ರಮುಖರನ್ನು ಕರೆಯಿಸಿ "ಈಗ ನಾನು ಪ್ರಧಾನಿಯಾಗುತ್ತೇನೆ ಆದರೆ ಇಂದಿನಿಂದ ಒಂದು ವರ್ಷದೊಳಗೆ ಆರೋಗ್ಯದ ನೆವ ಹೇಳಿಯೋ, ಇನ್ನಾವ ಕಾರಣದಿಂದಲೋ ನನ್ನ ಸ್ಥಾನವನ್ನು, ಪಕ್ಷದವರು ಆರಿಸುವ ಇನ್ನೊಬ್ಬರಿಗೆ ತೆರವು ಮಾಡಿಕೊಡುತ್ತೇನೆ ಈ ಕೆಲಸಕ್ಕೆ ನನಗಿಂತ ಸೇತುರಾಯ ಲಾಲಚಂದರು ಸಮರ್ಥರೆಂಬುದನ್ನು ಬಲ್ಲೆ ನನಗೆ ಅನುಭವ ಇಲ್ಲವೆಂದಲ್ಲ. ಆದರೆ ಪಕ್ಷ ಗೆದ್ದು ಬಂದಾಗ ಅಧ್ಯಕ್ಷಳಾದ ನನ್ನನ್ನೇ ಕಿತ್ತು ಹಾಕಿಡರೆಂಬ ಸುದ್ದಿಗೆ ಅವಕಾಶ ಕೊಡಬಾರದು 'ನನ್ನನ್ನು ಅಧ್ಯಕ್ಷಳನ್ನಾಗಿ ಮಾಡಿ' ಎಂದು ನಾನು ಬೇಡಿದವಳಲ್ಲ ಜನವಾದಿಗಳನ್ನು ನಾನು ಬಿಟ್ಟು ಬಂದುದು ತಪ್ಪು ಎಂಬ ನೋವನ್ನು ನನ್ನ ಮನಸ್ಸಿನಲ್ಲಿ ನೀವು ಹುಟ್ಟಿಸಬಾರದು" ಎಂದು ತನ್ನ ಸ್ಥಾನವನ್ನು ವಿವರಿಸಿ ಹೇಳಿದಳು ಸೇತುರಾಯ ಆ ಮಾತಿಗೆ ಸೈಗುಟ್ಟಿದ, ಲಾಲಚಂದನನ್ನು ಸಮ್ಮನಿರುವಂತೆ ಪ್ರಾರ್ಥಿಸಿದ

ಸರಿ, ಕಾಂಚನಮಾಲೆ ಇನ್ನೊಮ್ಮೆ ಪ್ರಧಾನಿಯಾದಳು ಸೇತುರಾಯ ಬೇಕೆಂದೇ ಮಂತ್ರಿ ಸಂಪುಟದಿಂದ ಹೊರಗೆ ನಿಂತ ಹೊಸ ಮಂತ್ರಿ ಮಂಡಳದಲ್ಲಿ ಲಾಲಚಂದ, ಸುನೀತರಿಬ್ಬರು ಸೇರಿಕೊಂಡರು ಅಲ್ಲಿಂದ ಆಕೆಯೂ, ಅವಳ ಪಂಗಡದ ಯಾವತ್ತು ಜನಗಳು ಎಲ್ಲ ಪ್ರಸಂಗಗಳಲ್ಲೂ "ಜನಪ್ರಿಯ ಸರಕಾರವಾದ ನಾವು" ಎಂಬ ಮಂತ್ರವನ್ನು ಉರುಹಾಕತೊಡಗಿದರು. ಒಮ್ಮೆಗಂತು ಇದಿರಾಳಿಗಳ ಪಕ್ಷ

ದಿಗ್ಮೂಢವಾಯಿತು ದೇಶವಾದಿ ಹಿರಿಯರು ಕಂಗಾಲಾದರು. ತಮ್ಮ ವರನ್ನು ಅಲಕ್ಷಿಸಿಯೇ ತಮಗೆ ಈ ಫಲ ಪ್ರಾಪ್ತಿಯಾಯಿತೆಂದು ಮೊದಲಬಾರಿಗೆ ತೋರಿತು ಗೊಂಡಾರಣ್ಯದಲ್ಲಿ ಶ್ರಮವಾದಿ ಸರಕಾರ ಸ್ಥಾಪನೆಯಾದ ಮರುದಿನದಿಂದಲೇ ನೆರೆಕರೆಯ ಪ್ರಾಂತ್ಯಗಳಿಗೂ, ಪ್ರೋತ್ಸಾಹ ದೊರೆತಂತಾಗಿ, ಅಲ್ಲಿ ಶ್ರಮಗಾರರ ಚಳವಳ, ಹಾವಳಿ ಗಳು ಹೆಚ್ಚಾಗತೊಡಗಿದುವು

ಹಾಗಿದ್ದರೆ ಗೊಂಡಾರಣ್ಯದಲ್ಲಿ ಕ್ಷೇಮವೇ-ಎಂದು ಕೇಳಿದರೆ- ಅಲ್ಲಿಯೂ ಖಾಸಗಿ ಉದ್ಯಮಗಳಲ್ಲಿ ಮುಷ್ಕರಗಳ ನವೀನ ಯುಗ ತೊಡಗಿತು ಸಣ್ಣ, ದೊಡ್ಡ ಉದ್ಯಮಗಳಲ್ಲಿ, ವ್ಯಾಪಾರಗಳಲ್ಲಿ ಎಲ್ಲೆಲ್ಲಿಯೂ ಮುಷ್ಕರ ಹೂಡುವವರೇ ಶ್ರಮಗಾರರ ಬೇಡಿಕೆಗಳು ಕೊಟ್ಟ ಪೂರೈನದಷ್ಟು ಬೆಳೆದುವು ಉದ್ಯೋಗ, ಶ್ರಮಗಳ ಮಂತ್ರಿ ಯಾದ ಲಾಲಚಂದ ನಗುತ್ತ ಕಾಲಕಳೆದ ಸ್ಥಿತಿ ಪ್ರಕೋಪಕ್ಕೆ ಮುಟ್ಟಿ, ಬಂಡವಳಗಾರರು ತನ್ನಲ್ಲಿಗೆ ಬೇಡಿ ಬರಲಿ, ಎಂಬುದು ಅವನ ಬಯಕೆ. ಕಾಂಚನಮಾಲೆ ತನ್ನ ಮೊದಲಿನ ಮಾತುಗಳನ್ನು ನೆನಪಿರಿಸಿ ಕೊಂಡು ನಾಡಿನ ಉಪಾಧ್ಯಾಯ ವೃಂದಕ್ಕೆ ಹೆಚ್ಚಿನ ವೇತನಕೊಡುವ ವ್ಯವಸ್ಥೆ ಮಾಡಿದಳು ಇದೇ ಮೇಲ್ಪಂಕ್ತಿಯೆಂದು ಎಲ್ಲ ಶ್ರಮಗಾರ ವರ್ಗವೂ ಕನಿಷ್ಠ ವೇತನದ ಮಿತಿಗಾಗಿ ಕೂಗಾಡಿದರು ಅವರ ಕೇಳಿಕೆಗಳ ಸಂಖ್ಯೆಯೂ ಏರಿತು ಹಲವು ಗಿರಣಿ, ಕಾರ್ಖಾನೆಗಳು ನಡೆಯದ ಪರಿಸ್ಥಿತಿ ಬಂದಿತು ಈ ಕೇಳಿಕೆಗಳು ನಿರಾಧಾರವಾಗಿರಲಿಲ್ಲ ವಾದರೂ ಅವನ್ನೆಲ್ಲ ಸಲ್ಲಿಸಿದರೆ ಯಾವೊಂದು ಉದ್ಯೋಗವೂ ಲಾಭ ದಾಯಕವಾಗಿ ನಡೆಯುವಂತಿರಲಿಲ್ಲ ಇದರಿಂದ ಬಂಡವಳಗಾರರಲ್ಲಿ ಅನೇಕರು ತಮ್ಮ ಉದ್ಯಮಗಳನ್ನು ಮುಚ್ಚಿದರು ಅಂಥ ಕಾರ್ಖಾನೆ ಗಳನ್ನು ಹೊಕ್ಕು ಯಂತ್ರೋಪಕರಣಗಳನ್ನು ನಷ್ಟಗೊಳಿಸುವ ಬಲಾ ತ್ಕಾರ ನಡೆಯಿತು

ಕಾಯಿದೆ, ಪೋಲೀಸು ಬಲ, ಉದ್ಯಮ ಇವೆಲ್ಲವುಗಳನ್ನು ಇರಿಸಿ ಕೊಂಡ ಲಾಲಚಂದ ಈ ಘರ್ಷಣೆಗಳನ್ನು ತಡೆಯುವ, ಇಲ್ಲವೆ ಬಿಡಿಸುವ ಪ್ರಯತ್ನವನ್ನು ಮಾಡಲಿಲ್ಲ. ಬದಲು "ಮಾಲಕರು, ಶ್ರಮ ಗಾರರು ತಾವಾಗಿಯೇ ಒಂದು ಸಂಧಾನಕ್ಕೆ ಬರಬೇಕು" ಎಂದು

ಕುಳಿತ ಆರು ತಿಂಗಳು ಕಾಲ ಅವಿರತವಾಗಿ, ಒಂದಲ್ಲ ಒಂದು ಕಡೆ, ಈ ತೆರನ ಕೋಲಾಹಲ ನಡೆಯುತ್ತಲೇ ಇತ್ತು. ಶ್ರಮಗಾರ ಪಕ್ಷ ಹಿಂದಿನಿಂದ ಬೆನ್ನು ತಟ್ಟುತ್ತಿದ್ದದ್ದು ತಿಳಿದ ಮಾತು ಬಂಡವಳುಗಾರರು ಆದರಿಂದ ಬೆದರಿದರು. ಕೆಲವರು ಉದ್ಯಮಗಳನ್ನು ಮುಚ್ಚಿದರು; ಕೆಲವರು ಅವನ್ನು ಅನ್ಯ ಪ್ರಾಂತ್ಯಗಳಿಗೆ ಸ್ಥಳಾಂತರಿಸುವ ಯೋಚನೆ ಮಾಡಿದರು. "ಬೇಕಾದರೆ ಸರಕಾರವೇ ಅವನ್ನು ಕೊಂಡು ನಡೆಯಿಸಲಿ, ಇದಕ್ಕೂ ಹೆಚ್ಚಿಗೆ ಸಂಬಳ ಅವರೇ ಕೊಡಲಿ" ಎಂದಂದರು ಲಾಲಚಂದ ಆದೇ ಒಳಿತೆಂದು ಪಕ್ಷದ ಬೆಂಬಲದಿಂದ ಅವಸರದ ಶಾಸನಗಳನ್ನು ಮಾಡಿಸಿ, ಮುಚ್ಚಿದ ಉದ್ಯಮಗಳನ್ನು ಸರಕಾರವು ಸ್ವಾಧೀನಪಡಿಸಿಕೊಳ್ಳುವ ನಿರ್ಣಯ ಮಾಡಿದ

ಆದರೆ ಹಲವಾರು ಉದ್ಯಮಗಳನ್ನು ಹೀಗೆ ಸ್ವಾಧೀನಪಡಿಸಿಕೊಳ್ಳುವ ಕೆಲಸ ಎಣಿಸಿದಷ್ಟು ಸುಲಭವಾಗಿರಲಿಲ್ಲ ಮೂರು ನಾಲ್ಕು ತಿಂಗಳ ಮುಷ್ಕರ ಕಾಲದ ವೇತನವನ್ನು ಬಂಡವಳುಗಾರರು ಕೊಡಲಾರರಾಗಿದ್ದರೆ, ಸರಕಾರವೂ ಕೊಡಲಾರದಾಗಿದ್ದಿತು ಆದರೂ 'ನಾಳೆ ಈ ಕಾರ್ಖಾನೆ ನಿಮ್ಮದಾಗುತ್ತದೆ ನೀವು ಮೊದಲಿನಂತೆಯೆ ದುಡಿದು ಉತ್ಪನ್ನ ಹೆಚ್ಚಿಸಿದರೆ, ತೀವ್ರವೇ ನಿಮ್ಮ ಸ್ಥಿತಿಯನ್ನು ಉತ್ತಮ ಪಡಿಸುತ್ತೇವೆ' ಎಂಬ ಉಪದೇಶವನ್ನು ಮಾಡಿದರು ಉದ್ಯಮಗಳನ್ನು ಒಂದೊಂದಾಗಿ ಸ್ವಾಧೀನಗೊಳಿಸಿಕೊಳ್ಳುವ ಕೆಲಸ ಮೊದಲಿಗೆ-ಸಂಹಾರದ ಪ್ರಶ್ನೆ ಕೊನೆಗೆ ಬಂಡವಳುಗಾರರು ಸುಮ್ಮನೆ ಕುಳಿತಿರಲಾರರು ಕಾಯಿದೆ ಇದೆ ವರಿಷ್ಠ ನ್ಯಾಯಾಲಯವಿದೆ, ಘಟನಾವಳಿಯಿದೆ, ಮೂಲಭೂತ ಹಕ್ಕುಗಳಿವೆ ಪರಿಹಾರದ ವಿಚಾರ, ಅವಸರದ ಶಾಸನಗಳಲ್ಲಿ ತುಂಬಿಕೊಂಡ ನ್ಯೂನತೆಗಳನ್ನು ಕಂಡು ಹಿಡಿದು. ತಮಗಾಗುವ, ತಮಗಾದ ನಷ್ಟದ ಹೊರೆಯನ್ನು ಸರಕಾರದ ಮೇಲೆ ಹೊರಿಸಿ ದಾವೆ ಹೂಡತೊಡಗಿದರು. ವಿಕ್ರಮನಗರದ ಹೈ ಕೋರ್ಟನ್ನು ದಾಟಿ ಮುಂದೂ ಒಂದು ಕೋರ್ಟಿದೆ-ಎಂಬ ತಲೆ ಬೇನೆ ಲಾಲಚಂದಗೆ ಬರತೊಡಗಿತು.

ಹೀಗೆ ಉಪಾಯದಿಂದ ತೊಡಗಿದ ರಾಷ್ಟ್ರೀಕರಣದ ಅವಸರದಲ್ಲಿ ಶ್ರಮಗಾರರ ನೋವು ತಣಿಯಲಿಲ್ಲ ನಷ್ಟವಾದ ದಿನಗಳ ಜತೆಗೆ,

ಹಾಳು ಮಾಡಿದ ಯಂತ್ರೋಪಕರಣಗಳು ತಿರುಗಿ ಸ್ಥಾಪನೆಯಾಗುವ ತನಕ ಅನೇಕರು ಉಪವಾಸವಿರಬೇಕಾಯಿತು. ಸ್ವಾಧೀನಗೊಳಿಸಿ ಗೊಂಡ ಕಾರ್ಖಾನೆಗಳಲ್ಲಿ ಅವುಗಳನ್ನು ನಡೆಯಿಸಲು ಶ್ರಮವಾದಿ ಮುಖಂಡರನ್ನು ನೇಮಿಸಿದರು. ಅದೊಂದು ಗೌರವ ಆಡಳಿತೆದಾರ ವರ್ಗವೇ ಸೃಷ್ಟಿಯಾಯಿತು. ಅವರು ಹೆಮ್ಮೆಯಿಂದ ಬಂದು ಕುಳಿತು, "ಇದನ್ನೇಕೆ ಲಾಭದಾಯಕವಾಗಿ ನಡೆಸಲು ಬರುವುದಿಲ್ಲ, ಭಾಂಡವಳು ಗಾರರ ರಕ್ಕುಗಳನ್ನು ಎರಡು ದಿನಗಳಲ್ಲಿ ಬಯಲಿಗೆಳೆಯುತ್ತೇವೆ" ಎಂದು, ಕೆಲಸಗಾರರನ್ನು ಹುರಿದುಂಬಿಸತೊಡಗಿದರು. ದಿನಗಳು ಸರಿ ದಂತೆ, ಕೆಲಸಗಾರರ ದುಡಿಮೆ ಎಂದಿನಂತೆಯೇ ನೆಲುನಡೆಯ ಲ್ಲಿದ್ದುದು ಕಾಣಿಸಿತು. ಅವರನ್ನು ಒತ್ತಾಯಿಸುವ ಗಳಿಗೆ ಬಂದಾಗ ಅವರ ಜಡ ಪ್ರವೃತ್ತಿ ಪಕ್ಷದ ಅಭಿಮಾನವನ್ನು ಮರೆತು ದಂಗೆಯೇಳ ತೊಡಗಿತು. ಕೊಡುವ ಸಂಬಳಕ್ಕೆ ಇಷ್ಟು ದುಡಿಯಬೇಕೆಂಬ ಬುದ್ಧಿ ಅವರಿಗೂ ಬರಲಿಲ್ಲ.

ಲಾಲಚಂದನಲ್ಲಿ ಸೇಡಿನ ಹಂಬಲವೂ ಸೇರಿತ್ತು. ದಾವೆಗೆ ಹೋದ ಬಂಡವಳುಗಾರರ ಮೇಲೆ ಆತ ಸೇಡನ್ನು ತೀರಿಸಲು ಹೊರಟ. 'ಕಾರ್ಖಾನೆಗಳ ಲೆಕ್ಕಪತ್ರ ಅಪಹರಿಸಿದ್ದಾರೆ, ಸುಳ್ಳಾಗಿರಿಸಿದ್ದಾರೆ' ಎಂಬ ಆರೋಪಗಳನ್ನು ಹೊರಿಸಿ ಕ್ರಿಮಿನಲ್ ದಾವೆಗಳನ್ನು ಹೂಡಿ, ಬಂಧಿಸತೊಡಗಿದ. ಖಾಸಗಿ ಉದ್ಯಮಕ್ಷೇತ್ರಗಳಲ್ಲಿ ಭಯ ಹೆಚ್ಚಾ ದಂತೆ, ಅನೇಕರು ಅಲ್ಲಿಂದ ಓಟಕಿತ್ತರು. ವಕೀಲರುಗಳ ಮುಖಾಂತರ ವ್ಯವಹರಣೆಗಳನ್ನು ಹೂಡಿದರು. ಪರಪ್ರಾಂತದ ಕೋರ್ಟುಗಳಿಗೆ ತಮ್ಮ ದಾವೆಗಳು ವರ್ಗವಾಗಬೇಕೆಂದು ಬೇಡ ತೊಡಗಿದರು. ಇಷ್ಟಿದ್ದರೂ ಲಾಲಚಂದನ ಧೈರ್ಯ ಹೆಚ್ಚಿತು. ತನ್ನ ಐದು ವರ್ಷಗಳೊಳಗಾಗಿ ಯಾವತ್ತು ಉದ್ಯೋಗಗಳನ್ನು ರಾಷ್ಟ್ರೀಕರಣಗೊಳಿಸುತ್ತೇನೆಂದು ಸಾರ ತೊಡಗಿದ. ಶ್ರಮಗಾರರ ಮನಸ್ಸಿಗೆ ಈಯೊಂದು ವಿಪತ್ತಿನ ಕಾಲ ತಪ್ಪಿದರೆ ಮುಂದೆ ಒಳ್ಳೆಯ ದಿನಗಳು ಬರುತ್ತದೆಯೆಂದು ಪ್ರೇರಿಸಿದ.

ತನ್ನ ಪತನ ಇನ್ನೊಂದೇ ದಾರಿಯಿಂದ ಬಂದೀತೆಂದು ಲಾಲ ಚಂದ ಎಣಿಸಿರಲಿಲ್ಲ. ರಾಮದಾಸ ಹೂಡಿದ ಚುನಾವಣೆಯ ಅರ್ಜಿಯು

ತನಿಖಿಗೆ ಕೇಂದ್ರ ಸರಕಾರ ನ್ಯಾಯಾಲಯವನ್ನು ಏರ್ಪಡಿಸಿತು. ಅದಕ್ಕೆ ನೇಮಿತರಾದ ನ್ಯಾಯಾಧೀಶರು ಹೊರ ಪ್ರಾಂತ್ಯಗಳಿಂದ ಬಂದರು. ಇದು ತನ್ನ ಮೇಲಿನ ಅವಿಶ್ವಾಸವೆಂದು ಆತ ತಿಳಿದು ಕೊಂಡರೂ, ಬಹಿರಂಗವಾಗಿ ಏನೂ ಮಾಡುವಂತಿರಲಿಲ್ಲ ಅರ್ಜಿಯ ತನಿಖಿ ನಡೆಯಿತು–ಮತದಾರರನ್ನು ಬೆದರಿಸಿ ಹಿಂದಕ್ಕಟ್ಟಿದರೆಂಬ ರುಜು ವಾತುಗಳು ಬಂದುವು. ಚುನಾವಣೆಯ ಕೇಂದ್ರಗಳಿಂದ ಬಂದ ವರದಿ ಗಳು ಮಾಯವಾಗಿವೆಯೆಂದೂ, ಅವಿಲ್ಲದೆ ಚುನಾವಣೆಯ ಫಲಿತಾಂಶ ಸಾರಿದ್ದರೆಂದೂ, ಅನೇಕ ಪೆಟ್ಟಿಗೆಗಳಲ್ಲಿ ರಕ್ಕು ಮತಪತ್ರಗಳ ಗಣನೆ ನಡೆದಿವೆಯೆಂದೂ ಪ್ರಕಟವಾಯಿತು ಇದರಿಂದ ಚುನಾವಣೆ ರದ್ದು ಗೊಂಡು ಲಾಲಚಂದ ತನ್ನ ಸ್ಥಾನವನ್ನು ಕಳೆದುಕೊಂಡುದಲ್ಲದೆ ಅಪ ಮಾನಿತನೂ ಆದ

ಕಾಂಚನಮಾಲೆಯದೇ ಹೆಚ್ಚಿನ ಪುಣ್ಯ ಅವಳೆದುರಿಗೆ ನಿಂತಿದ್ದ ಗೋವರ್ಧನರಾಯನಾಗಲಿ, ಪ್ಯೈರಿ ಸಾಹುಕಾರ ತೀನಪ್ಪನವರಾಗಲಿ ಹೀಗೆಯೇ ಅರ್ಜಿ ಸಲ್ಲಿಸಿದ್ದರೆ ಅವಳೂ ಅವಮಾನಕ್ಕೆ ಗುರಿಯಾಗ ಬೇಕಿತ್ತು ಅಧೈರ್ಯದಿಂದ ಅವರು ಸುಮ್ಮನೆ ಕುಳಿತಿದ್ದಕ್ಕೆ ಇವಳು ಪಾರಾದಳು ಅದಕ್ಕಾಗಿ ಮಾತ್ರ ಹಿಗ್ಗಿದವಳಲ್ಲ ಅವಳ ಸಲುವಾಗಿ ತಂತ್ರ ನಡೆಯಿಸಿದ ಅಧಿಕಾರಿಗಳು ದೊರತಾಗ ಬೆನ್ನು ಚಪ್ಪರಿಸಿ ಸತ್ಯ ವೇನೆಂದು ತಿಳಿದುಕೊಂಡು, ನಡೆದ ತಂತ್ರವೇನೆಂದು ರಾಮದಾಸನಿಗೆ ತಿಳಿಸಿದ್ದಳು ಇನ್ನೂ ಒಂದೆರಡು ಶ್ರಪವಾದಿ ಸ್ಥಾನಗಳು ಇಂಥ ಅರ್ಜಿಗಳಿಂದಾಗಿ ನಷ್ಟವಾದವು ಲಾಲಚಂದನ ಪತನವೆಂಬುದು ಕಾಂಚನಮಾಲೆಗೆ ಎಷ್ಟೋ ಹಿತವಾಯಿತು ಉಳಿದ ಪಕ್ಷದ ಸದಸ್ಯ ರಾಗಲೀ, ಮಂತ್ರಿಗಳಾಗಲೀ ಅವಳ ಕಾರ್ಯಕ್ಕೆ ವಿಘ್ನ ತರುವಷ್ಟು ಶಕ್ತರಾಗಿರಲಿಲ್ಲ ಹಿಂದಿನಿಂದಲೂ ಜನವಾದಿಗಳು ನಡೆಯಿಸಿಕೊಂಡು ಬಂದ ಲಂಚ ನಿರ್ಮೂಲನ ಶಾಖೆಯಿತ್ತಲ್ಲ ಅಲ್ಲಿ ಅವಳ ವಿಶ್ವಾಸಕ್ಕೆ ಪಾತ್ರರಾದ ಹಲವು ನೌಕರರಿದ್ದರು ಅವರ ಮೂಲಕ ಅವಳು ಹೊಸತಾಗಿ ಹಬ್ಬುತ್ತಿರುವ ನಂಜಿನ ದಾರಿಯಾವುದು–ಎಂಬುದನ್ನು ಸಹ ಕಣ್ಣಿಟ್ಟು ನೋಡ ತೊಡಗಿದಳು

ಇಷ್ಟಿದ್ದರೂ ಆಕೆ ಇಂದು ಕುಳಿತಿರುವುದು ಮುಳ್ಳಿನ ಹಾಸಿಗೆಯ

ಮೇಲೆ, ತಾನಾಗಿ ಕಲ್ಪಿಸಿಕೊಂಡ ಹಾಸಿಗೆಯೆಂದರೂ ಸಲ್ಲುತ್ತದೆ ಅವಳ ಪಕ್ಷದವರು ಎಂದೂ ಜಡಪ್ರವೃತ್ತಿಯವರಲ್ಲ ಅಧಿಕಾರಕ್ಕೆ ಬಂದ ದಿನದಿಂದ ಶಾಸನಗಳ ಬತ್ತಳಿಕೆಯನ್ನೇ ಹೊರ ತೆಗೆದು ಪ್ರಯೋಗಿಸಲು ಹೊರಟವರು ಸೇತುರಾಯನಿಗೂ ಅವುಗಳಲ್ಲಿ ಅಷ್ಟೊಂದು ಉತ್ಸಾಹ ಸಂಗಡದ ಬಲವಂತವೂ ಅದಕ್ಕಿದೆ ಇವುಗಳೆಲ್ಲೆಷ್ಟೋ ಅನಿಷ್ಟವಾದವು ವರ್ಗ ಕಲಹ ಹೆಚ್ಚಿಸಿ, ಕೇವಲ ಒಂದು ಗುಂಪಿನ ಇಷ್ಟ ಸಾಧನೆಗೆ ಹೊರಟ ಅವನ್ನು ಉಪಾಯದಿಂದ ಮುಂದೆ ತಳ್ಳುವ ಆಟ ಅವಳದು ಲಾಲಚಂದ ಹೊರಟು ಹೋದ ಸ್ಥಾನಕ್ಕೆ ಸೇತುರಾಯ ಬಂದುದರಿಂದ ಆ ಕೆಲಸವೂ ಸುಲಭವಾಗಿರಲಿಲ್ಲ ಇತ್ತ ಲಾಲಚಂದ ಸ್ಥಾನ ಕಳೆದುಕೊಂಡರೂ ಸಂಗಡವಲ್ಲಿ ಅಸ್ಪೃಶ್ಯನಲ್ಲ- ಅವನನ್ನು ಇದಿರಿಸುವುದು ಸುಲಭವಲ್ಲ ಅವರ ದೇಶಾಭಿವೃದ್ಧಿಯ ನೀತಿಯನ್ನು ನೇರಾಗಿ ಪ್ರಶ್ನಿಸುವುದಾಗಲಿ, ವಿರೋಧಿಸುವುದಾಗಲಿ ವಿವೇಕವಾಗಿ ಕಾಣಿಸಲಿಲ್ಲ ಅಧಿಕಾರಕ್ಕೆ ಬಂದ ನಾಲ್ಕು ದಿನಗಳಲ್ಲಿ ಆಯವ್ಯಯದ ಯೋಚನೆಯಿಲ್ಲದೆ ಉಪಾಧ್ಯಾಯರ ವೇತನ ಏರಿಸಿದ್ದಾಯಿತು ಎಷ್ಟೋ ಹೊಸ ಹಂಚಿಕೆಗಳನ್ನು ಪ್ರಕಟಿಸಿದ್ದಾಯಿತು ಹಣವನ್ನು ದೊರಕಿಸುವುದು ಕಷ್ಟ. ಕೇಂದ್ರ ಸರಕಾರದಿಂದ ಪೂರ್ವದ ಸಹಾನುಭೂತಿ ದೊರತೀತೆಂಬ ವಿಶ್ವಾಸವಿರಲಿಲ್ಲ ಸಾಲ ಎತ್ತುವ ಧೈರ್ಯವಿಲ್ಲ ಶ್ರೀಮಂತರಾರೂ ಸ್ವೇಚ್ಛೆಯಿಂದ ಸಾಲ ಕೊಡಲು ಮುಂದೆ ಬರಲಾರರು ಉಳಿದ ದಾರಿಯೆಂದರೆ–ಕರ, ತೆರಿಗೆಗಳನ್ನು ಹೆಚ್ಚಿಸುವುದು. ಅದು ಬರಿಯ ಶ್ರೀಮಂತರ ಮೇಲೆ ಬೀಳುತ್ತದೆಂದು ಹೇಳುವಂತಿಲ್ಲ ಹೀಗಾಗಿ ಅಂಥ ತೆರಿಗೆ ಹೆಚ್ಚಳದ ಸೂಚನೆ ಬರುತ್ತಲೇ ಎಲ್ಲ ಮೂಲೆಗಳಿಂದಲೂ ಪ್ರತಿಭಟ ಕೇಳಿಸಿತು

ಆಕೆ ಪ್ರಧಾನಿಯಾಗಿ, ತನ್ನ ಉಳಿದ ಮಂತ್ರಿಗಳ ಚಟುವಟಿಕೆಯ ಮೇಲೆ ಕಣ್ಣಿರಿಸಿಕೊಂಡಿದ್ದಳಾದರೂ ಆ ಕಣ್ಣು ಹಾಯದಂಥ ಕಾವುಗಳನೇಕವಿದ್ದುವೆಂದು ಅವಳಿಗೆ ತಿಳಿದು ಬರುವಾಗ ಆರೆಂಟು ತಿಂಗಳು ಕಳೆದಿತ್ತು. ರಾಮದಾಸ ಚುನಾವಣೆಯ ನ್ಯಾಯವನ್ನು ಗೆದ್ದು, ಒಂದು ದಿನ ಭೀಮನೂರಿನಲ್ಲಿ ಅವಳನ್ನು ರಹಸ್ಯವಾಗಿ ಭೇಟಿಯಾದ ಕುಶಲದ ಮಾತುಗಳಾದ ಬಳಿಕ ಆತ "ನಿಮ್ಮ ಹೊಸ ಧೋರಣೆ

ನನಗಂತೂ ತಿಳಿಯದಾಗಿದೆ. ಈ ರೀತಿ ನೀವು ರಾಷ್ಟ್ರೀಕರಣ ಆವೇಶ ತೊಡಗಿದರೆ, ಪರಿಹಾರ ಕೊಡಬೇಡವೇ? ಅದಕ್ಕೆಲ್ಲಿಂದ ಹಣ ?" ಎಂದು ದಲ್ಲದೆ "ನೀವೇ ನಟ್ಟು ಬೆಳೆಯಿಸಿದ ತೋಟದಲ್ಲಿ ಆಡುಗಳು ಬಂದು ಮೇಯ ತೊಡಗಿವೆ" ಎಂದು ಪೀಠಿಕೆ ಹಾಕಿದಳು

"ಏನದು ?"

"ಎರಡೆರಡು ಮುಖ್ಯ ಸಂಗತಿಗಳು ನನ್ನ ಗಮನಕ್ಕೆ ಬಂದಿವೆ. ಒಂದು ಕೇಳಿದ ಸುದ್ದಿ, ಇನ್ನೊಂದು ಅನುಭವಕ್ಕೆ ಬಂದದ್ದು"

"ಏನದು ?"

"ಇಲ್ಲಿ ನೋಡಿ, ಅಧಿಕಾರಕ್ಕೆ ಬಂದ ಮೂರು ತಿಂಗಳೊಳಗೆ ಶಾಲೆಯ ಪಠ್ಯಕ್ರಮ ಬದಲಾಗಿದೆ. ಇದಕ್ಕೆಲ್ಲ ಪೂರ್ವ ತಯಾರಿ ನಡೆದಿರಬೇಕು ಹೊಸತಾಗಿ ಹೊರಿಸಿದ ಈ ಪುಸ್ತಕಗಳನ್ನು ನೋಡಿ" ಎಂದು ಕೆಲವನ್ನು ಅವಳ ಕೈ ಮೇಲೆ ಇರಿಸಿ, ತೆರೆತೆರೆದು ತೋರಿಸಿದ. ಭಾರತದ ಇತಿಹಾಸವನ್ನು ವರ್ಗ ಕಲಹದ ಅಧ್ಯಾಯವಾಗಿ ಚಿತ್ರಿಸಿದ ಬಗೆ, ವರ್ಗದ್ವೇಷ ಸಾರುವ ಮಾತುಗಳು, ಪಕ್ಷದ ಧ್ಯೇಯಕ್ಕಾಗಿ ಎಳೆಯ ಮನಸ್ಸುಗಳನ್ನು ತಿರುಗಿಸಲು ಬರೆದ-ನುಡಿಗಳನ್ನು ತೋರಿಸಿ ಕೊಟ್ಟ. ಆ ವಿಷಯದಲ್ಲಿ ಪತ್ರಿಕೆಗಳಲ್ಲಿ ಬಂದ ಟೀಕೆಗಳನ್ನು ಅವಳ ಮುಂದಕ್ಕೆ ಇರಿಸಿದ "ಮಕ್ಕಳ ಮನಸ್ಸನ್ನು ಹೀಗೆ ವಿರೂಪಗೊಳಿಸುವ ಚರಿತ್ರೆಯಿಂದ, ದ್ವೇಷಪೂರಿತ ನುಡಿಗಳಿಂದ, ಕೆಡಿಸುವುದು ಏನು ನ್ಯಾಯ?" ಎಂದು ಕೇಳಿದ ಅವಳ ಮುಖ ಖಿನ್ನವಾಯಿತು "ಇರಲಿ, ಮತ್ತೇನು ?" ಎಂದು ಕೇಳಿದಳು

"ಮಾನಜಿಲ್ಲೆಯಲ್ಲಿ ತೊಡಗಿರುವ ಉದ್ಯಮ, ಕೈಗಾರಿಕೆಗಳಿಗೆ ಈಗೀಗ ವಿದ್ಯುತ್ತಿನ ಪೂರೈಕೆ ಮಾಡುತ್ತಿಲ್ಲ. ಅಲ್ಲಿನ ವ್ಯವಸ್ಥೆ ತಲೆ ಕೆಳಗಾಗಿ ಜನಗಳಿಗೆ, ಉದ್ಯಮಗಳಿಗೆ ಬೇಕಾದ ಸಾಮಾನು, ಸರಂಜಾಮು ತಕ್ಕ ಕಾಲದಲ್ಲಿ ಒದಗದೆ ನಿರಾಶೆ ಬಂದಿದೆ. ಅಂತೂ ವಿದ್ಯುತ್ತನ್ನು ಕೊಡದೆ, ಭೀಮನೂರಿಗೆ ಅದನ್ನು ತಿರುಗಿಸಿ, ಮಾನ ಜಿಲ್ಲೆಯ ಕೈಗಾರಿಕೆಗಳನ್ನು ಹಾಳು ಮಾಡುತ್ತಿದ್ದಾರೆ. ಅಲ್ಲಿನ ಜನ ಗಳಿಗೆ ಹೊಸ ಸರಕಾರದ ರುಚಿ ತಿಳಿದಂತಾಗಿದೆ. ಇಷ್ಟೊಂದು ಕಷ್ಟ ಪಟ್ಟು ಸಾಧಿಸಿದುದು 'ಕುಂಬಾರಗೆ ವರ್ಷ, ದೊಣ್ಣೆಗೆ ನಿಮಿಷ'

ವಾಯಿತು.

"ಯೋಚಿಸಬೇಡಿ ಜನಗಳಿಗೂ ಶ್ರಮಗಾರ ಪಕ್ಷದ ಗುಣ ತಿಳಿಯಬೇಕು ಬರಿಯ ಆಕಾಶ ಪುರಾಣ ಕೇಳಿ ಕುಣಿದಾಡಿದವರಿಗೆ, ಈ ಬೃಹದ್ರಥದ ಗಾಲಿಯು ಜನಗಳನ್ನು ನುಚ್ಚುನುರಿ ಮಾಡುವ ಬಗೆ ತಿಳಿಯಲಿ ಕಷ್ಟಪಟ್ಟರೂ ಪ್ರತ್ಯಕ್ಷ ಅನುಭವ ಒಳ್ಳೆಯದಲ್ಲವೇ ?"

"ಅದಕ್ಕೇ ಸುಮ್ಮನೆ ಕುಳಿತಿದ್ದೀರಾ ?"

"ಇಲ್ಲಿಲ್ಲ, ಈ ಸಂಗತಿ ನನಗ ತಿಳಿದಿರಲಿಲ್ಲ ನನಗೆ ನನ್ನ ಕೆಲಸದ ಮೇಲೆ ಮಮತೆಯಿಲ್ಲವೇ ? ನಾನು ನಟ್ಟುದು ಹಾಳಾಗಬಾರ, ದೆಂಬ ಬುದ್ಧಿಯಿಲ್ಲವೇ ?" ಎಂದೆಂದು ಆತನಿಗೆ ಸಮಾಧಾನ ಹೇಳಿ ಕಳುಹಿಸಿದಳು ಅನಂತರ ಬೇಕೆಂದೇ ಮಾನ ಜಿಲ್ಲೆಯ ಸಂಚಾರಕ್ರಮ ವನ್ನು ಕೈಕೊಂಡಳು ರಾಮದಾಸ ಕೊಟ್ಟ ದೂರುಗಳೆಲ್ಲ ಸತ್ಯ ವಾಗಿದ್ದುವು. ಅಷ್ಟೊಂದು ಅಲ್ಪಾವಧಿಯಲ್ಲಿ ಅಲ್ಲಿನ ಗ್ರಾಮೋದ್ಯೋಗ ಕೇಂದ್ರಗಳು ತಟಸ್ಥ ಅವಸ್ಥೆಗೆ ಬಂದಿದ್ದುವು ಉತ್ಪನ್ನಕ್ಕೆ ತಡೆ ಬಂದಿದೆ ಕಚ್ಚಾವಸ್ತುಗಳ ಪೂರೈಕೆ ನಿಂತಿದೆ ಮಾಡಿದ ಸರಕುಗಳು ಕದಲದೆ ನಿಂತಿವೆ ಹೊಸ ಅಧಿಕಾರಿಗಳು ಬಂದು ಏನೆಲ್ಲ ಆಟವಾಡು ತ್ತಿದ್ದಾರೆ ಮೊದಲಿನ ನೌಕರರಾರೂ ಇಲ್ಲ ಸಾಲದುದಕ್ಕೆ 'ಇಲ್ಲಿಯ ಒಡವೆಗಳಿಗೆ ಗಿರಾಕಿಯೇ ಇಲ್ಲ, ಇಲ್ಲಿ ಶಕ್ತಿಯ ಪೂರೈಕೆ ಅನವಶ್ಯಕ' ಎಂದು ತೋರಿಸಿ, ಅದನ್ನು ಕಡಿದು, ಭೀಮನೂರಿನಲ್ಲಿ ರಾಷ್ಟ್ರೀಕರಣ ಗೊಂಡ ಕಾರ್ಖಾನೆಗಳಿಗೆ ತಿರುಗಿಸಿದ್ದಾರೆ

ಆಕೆಗೆ, ತಾನು ಪ್ರವೇಶಿಸಿದ ಈ ವಿಷವೃತ್ತದಲ್ಲಿ ನಂಜೇರುವ ಬಗೆಯು ಎಷ್ಟು ತೀವ್ರವೆಂಬುದರ ಅರಿವಾಯಿತು ರಾಷ್ಟ್ರಸ್ವಾಮ್ಯಕ್ಕೆ ಪ್ರಾಶಸ್ತ್ಯ ಬರಲು ಖಾಸಗಿ ಪ್ರಯತ್ನಗಳನ್ನು ಮುರಿದು, ಅವು ನಿಷ್ಪ್ರ ಯೋಜಕವೆಂದು ತೋರಿಸುವುದಕ್ಕೆ, ತನ್ನ ಪ್ರಯತ್ನವನ್ನೇ ಬಲಿ ಕೊಟ್ಟುದನ್ನು ನೋಡಿ ಆಶ್ಚರ್ಯವಾಯಿತು. ವಿಕ್ರಮನಗರವನ್ನು ಸೇರಿದವಳೇ ಉದ್ಯಮ ಮಂತ್ರಿಯನ್ನು ಕರೆಯಿಸಿಕೊಂಡಳು, "ಏಕೆ ಹಾಗೆ ಮಾಡಿದಿರಿ ? ಹಿಂದೆ ಮೂರು ವರ್ಷಗಳ ಕಾಲ ಪ್ರಯೋಜನ ಕಾರಿಯಾಗಿ, ಲಾಭದಾಯಕವಾಗಿ ನಡೆದ ಉದ್ಯಮಗಳು ಈಗ ಅವ್ಯ ವಸ್ಥೆಗೆ ಗುರಿಯಾಗಲು ಕಾರಣವೇನು ? ಮೊದಲಿದ್ದ ಅನುಭವಸ್ಥ

ನೌಕರರನ್ನು ವರ್ಗಮಾಡಿ ಅಲ್ಲಿಗೆ ಹೊಸಬರನ್ನು, ಅನನುಭವಿಕರನ್ನು ತಂದಿಟ್ಟ ಕಾರಣವೇನು ?" ಎಂದು ಕೇಳಿದಾಗ, ಪ್ರತಿಯೊಂದಕ್ಕೂ ಲಾಲಚಂದ, ಸೇತುರಾಯ ಹೆಸರುಗಳು ಮುಂದಾದುವು. ಆಕೆ ವ್ಯಥೆಯಿಂದ "ಆ ಉದ್ಯಮಗಳು ನನ್ನ ಶ್ರಮದಿಂದ, ಬೆವರಿಂದ ಬೆಳೆಯಿಸಿದ ಪ್ರಯತ್ನಗಳು. ಜನ ಈ ಪ್ರಯತ್ನವನ್ನು ಮೆಚ್ಚಿ ಮುಂದುವರಿಯುತ್ತಿದ್ದಾಗಲೇ, ನೀವಾಗಿ ಅದನ್ನು ಮುರಿಯುವುದೆಂದರೇನು ? ಸಾಲದುದಕ್ಕೆ ಅಲ್ಲಿಗೆ ವಿದ್ಯುತ್ತನ್ನು ಒದಗಿಸದೆ ಇತರ ಕಡೆಗಳಿಗೆ ತಿರುಗಿಸಿದ್ದು ತೀರ ತಪ್ಪು. ಅದನ್ನು ತಿರುಗಿ ಒದಗಿಸಿಕೊಡಿ" ಎಂದಳು.

"ಅಲ್ಲಿನ ಉತ್ಪನ್ನ ಕೊಳ್ಳುವವರಿಲ್ಲ."

"ನಿಜ, ಸಕಾಲದಲ್ಲಿ ಸಾಮಗ್ರಿಗಳನ್ನು ಒದಗಿಸಿ ಕೊಡದಿದ್ದರೆ, ಉತ್ಪನ್ನದ ನಯ, ನಾಜೂಕು ನೋಡದೆ ತೆಗೆದುಕೊಂಡರೆ, ಹಾಗಾದೀತು. ನಾನು ಅಲ್ಲಿಂದಲೇ ಮರಳಿದವಳು. ನಿಮ್ಮಿಂದ ಮಾರುವುದು ಆಗದಿದ್ದರೆ ಅಲ್ಲಿನ ಜನ 'ಸಹಕಾರ ಸಂಸ್ಥೆಗಳ ಮೂಲಕವೋ ತಾವಾಗಿಯೋ ಮಾರಲು ಸಿದ್ಧರಿದ್ದೇವೆ. ತಮಗೆ ವಿದ್ಯುತ್ತು ಕೊಟ್ಟರೆ ಸಾಕು. ಸರಕಾರ ಮಾರಾಟದ ವಿಚಾರದಲ್ಲಿ ಕೈ ಹಾಕಬೇಕಾಗಿಲ್ಲ' ಎನ್ನುತ್ತಾರೆ. ಅಷ್ಟನ್ನಾದರೂ ಮಾಡಿ."

ಸರಿ, ಅವಳ ಪ್ರತಿಯೊಂದು ನುಡಿಯೂ ಸೇತುರಾಯನ ಕಿವಿಯನ್ನು ಸೇರಿತು. ಆತ ಅವಳೊಡನೆ ಚರ್ಚೆಗೆ ಬಂದು ನಿಂತ. "ನೀವು ಪ್ರತಿಷ್ಠೆಗಾಗಿ ಒದ್ದಾಡುತ್ತೀರಾ–ನಿಮ್ಮ ಕಾಲದಲ್ಲಿ ತೊಡಗಿದ ಉದ್ಯಮಗಳೆಂದು. ನಮ್ಮ ಪಕ್ಷದ ನೀತಿ ಸಾರ್ವತ್ರಿಕ ರಾಷ್ಟ್ರೀಕರಣವಲ್ಲವೇ ?" ಎಂದು ವಾದಿಸಿದ.

"ಸರಿಯೆ. ಆದರೆ ಅವಸರದಿಂದ ಹೀಗೆ ಮಾಡಿ ಜನರ ಮನಸ್ಸನ್ನು ಒಲಿಸಿದರೆ, ನಾಳೆ ಅವರ ಬೆಂಬಲ ನಿಮಗೆ ಬೇಡವೇ ? ಮಾನ ಜಿಲ್ಲೆಯವರು ನಮ್ಮ ಪಂಗಡಕ್ಕೆ ಎಷ್ಟು ಬೆಂಬಲ ಕೊಟ್ಟರೆಂದು ನೀವು ಮರೆತಂತಿದೆ. ಅಲ್ಲದೆ ನಾಳೆ ಅಲ್ಲಿ ಉಪಚುನಾವಣೆ ನಡೆಯಬೇಕೆಂಬುದನ್ನೂ ಮರೆತಿರಿ."

ಸೇತುರಾಯ ಉದ್ವಿಗ್ನನಾದ: "ಅವರ ಬೆಂಬಲವೇನೆಂದು ನನಗೆ ತಿಳಿದದ್ದೇ. ನಮ್ಮ ಪಕ್ಷಕ್ಕೆ ಕಡು ವೈರಿಗಳಿದ್ದರೆ ಅದು ಅಲ್ಲಿನ ಜನ.

ಆ ಒಂದು ಜಿಲ್ಲೆಯನ್ನು ನಾವು ಮಣಿಸದಿದ್ದರೆ ನಮಗೆ ಉಳಿಗಾಲವಿಲ್ಲ" ಎಂದ ಆ ದಿನದ ಅವರ ಚರ್ಚೆ ತುಂಬ ಕಾವಿನಿಂದಲೇ ನಡೆಯಿತು ಕಾಂಚನಮಾಲೆ-ತತ್ವ, ರಾಜತಂತ್ರಗಳ ದೃಷ್ಟಿಯಿಂದ ವಾದಿಸುತ್ತ ಹೋದಳೇ ಹೊರತು, ತನ್ನ ಅಂತರಂಗದ ಸೋವನ್ನು ಇಷ್ಟಿಷ್ಟೂ ತೋರಿಸಲಿಲ್ಲ ಮುಂದೆ ಅವನ ಮನಸ್ಸನ್ನು ತಣಿಸುವುದಕ್ಕಾಗಿ, ಹೊಸ ಪರ್ಯಕ್ರಮಗಳನ್ನು ಕುರಿತು ಹೊಗಳಿ ಮಾತನಾಡಿದಳು "ಅದಾದರೆ ಸರಿಯಾದ ದಾರಿ, ಎಳೆಯರ ಮನಸ್ಸನ್ನು ನಾವು ಆರಂಭದಿಂದ ಹೀಗೆ ತಿದ್ದಬೇಕು ಡೆಮೋಕ್ರೆಸಿ ಮೂರ್ಖ ಕತ್ತೆಯಿದ್ದಂತೆ, ಉಪಕಾರ ಮಾಡಿದ ಯಜಮಾನನಿಗೂ ಅದು ಒಂದು ದಿನ ಲತ್ತೆ ಕೊಟ್ಟೀತು" ಎಂದು, ಅಂತರಂಗವನ್ನು ಬಚ್ಚಿಟ್ಟು ಹಾಸ್ಯ, ಹೊಗಳಿಕೆಯ ಮಾತುಗಳಿಂದ ಕಳುಹಿಸಿಕೊಟ್ಟಳು

ಈ ಪ್ರಸಂಗವು ನಡೆದ ಒಂದು ತಿಂಗಳೊಳಗಾಗಿ ಮಾನವತಿ ಶಕ್ತ್ಯುತ್ಪನ್ನ ಕೇಂದ್ರದಲ್ಲಿ ಮುಖ್ಯ ಉನ್ಮೇಷಕ [Generator] ಉರಿದು ಹಾಳಾಯಿತೆಂಬ ಸುದ್ದಿ ಬಂದಿತು ಮಾನಜಿಲ್ಲೆಯ ಗ್ರಾಮೋದ್ಯೋಗಗಳಿಗೆ ವಿಶೇಷ ಪ್ರೋತ್ಸಾಹ ಕೊಡುವ ಸಲುವಾಗಿಯೇ ಜನವಾದಿಗಳು ನಿರ್ಮಿಸಿದ ಈ ಉತ್ಪನ್ನಕೇಂದ್ರವು ಹಾಳಾಯಿತೆಂದು ಕೇಳಿದಾಗ ಕಾಂಚನಮಾಲೆಗೆ ಅದರ ಕಾರಣ ಹೊಳೆಯದೆ ಹೋಗಲಿಲ್ಲ ಅವಘಡದ ತನಿಖೆಗೆ ಏರ್ಪಾಟು ಮಾಡಿದಳು ಯಂತ್ರ ದುರಸ್ತಿಗೆ ಆಜ್ಞೆ ಹೊರಡಿಸಿದಳು ಆದುದೇನೆಂದು ತಾನೇ ತಿಳಿದುಕೊಳ್ಳುವ ಕುತೂಹಲವಾದರೂ, ಎಲ್ಲವನ್ನು ವಿದ್ಯುತ್ ಇಲಾಖೆಗೆ ಆಜ್ಞೆ ಕೊಟ್ಟು ಸುಮ್ಮನಾದಳು ಇದು ಮಾನಜಿಲ್ಲೆಯವರ ಮೇಲೆ ಹೊತ್ತ ಸೇಡೆಂದು ಅವಳಿಗೆ ಖಚಿತವಾಯಿತು ಹೊಸ ಸಾಮಗ್ರಿಗಳು ಬಂದು, ನಷ್ಟವಾದ ಯಂತ್ರ ಸರಿಗೊಳ್ಳುವುದಕ್ಕೆ ಒಂದೆರಡು ವರ್ಷಗಳೇ ಬೇಕು. ತನ್ನ ಸಂಕಟವನ್ನು ತಡೆಯಲಾರದುದಕ್ಕೆ "ಅಲ್ಲಿನ ರಾಷ್ಟ್ರೀಯ ಸಂಪತ್ತನ್ನು ಕಾಯಲು ಅಸಮರ್ಥನಾದ ಮುಖ್ಯ ಎಂಜಿನಿಯರನ್ನು ಕೆಲಸದಿಂದ ನಿವೃತ್ತಿಗೊಳಿಸಿ" ಎಂದು ಸಂಬಂಧಿಸಿದ ಮಂತ್ರಿಗೆ ತಿಳಿಸಿದಳು ಆತ, ವಿಚಾರಣೆ ನಡೆಸಿದಂತೆ ನಟಿಸಿ, ಅದರಲ್ಲಿ-ಅಧಿಕಾರಿಯ ದೋಷವಿಲ್ಲವೆಂದೂ, ಮೂಲ ಯಂತ್ರ ನಿರ್ಮಾಣಕರ ಅಜಾಗ್ರತೆಯೇ ಕಾರಣ

ವೆಂದು ತನ್ನ ವರದಿಯನ್ನು ಒಪ್ಪಿಸಿದ.

ಕಾಂಚನಮಾಲೆಗೆ ಮನಸ್ಸು ಒಮ್ಮೊಂದೊಮ್ಮೆ ಉರಿಯ ತೊಡಗಿತು. ಅಧಿಕಾರಕ್ಕೆ ಬಂದ ಒಂದು ವರ್ಷದೊಳಗಾಗಿಯೇ ಈ ಪಕ್ಷದವರ ಮೇಲೆ ತನಗಿದ್ದ ಅನುಮಾನಗಳೆಲ್ಲ ಸ್ಥಿರಪಟ್ಟುವು ಇನ್ನೂ ಈ ಪ್ರಯೋಗ ಮುಂದುವರಿದರೆ ಗೊಂಡಾರಣ್ಯಕ್ಕೆ ಕೆಡುಗಾಲ ಖಂಡಿತವೆನಿಸಿತು. ಈ ಹಿರಿಯ ಗಾಣ, ಅಧಿಕಾರಕ್ಕೆ ಬಂದ ಒಂದು ವರ್ಷದೊಳಗೆ ಎಷ್ಟು ವಿಚಿತ್ರ ರೀತಿಯಿಂದ ಕೆಲಸಮಾಡಿತೆಂದು ಮನಗಂಡ ಮೇಲೆ ಉಳಿದುದೇನು ? ಅದನ್ನು ಜನಕ್ಕೆ ತಿಳಿಯುವಂತೆ ಹೇಳುವ ದಿನ ಎಂದು ಬಂದೀತು ? ತಾನು ಎಂದು ಅದರಿಂದ ಮುಕ್ತಳಾದೇನು ?-ಎಂಬ ನಿರೀಕ್ಷೆಯನ್ನು ತಾಳಿದಳು

* * * *

ಶ್ರಮಗಾರ ಪಕ್ಷದ ವಾರ್ಷಿಕ ಅಧಿವೇಶನ, ಇನ್ನೇನು, ಕೆಲವೇ ದಿಣಗಳಲ್ಲಿ ಕೂಡುವುದಿದೆ ಆ ವೇಳೆಗೆ ತಾನು ತನ್ನ ಅಧ್ಯಕ್ಷ ಪದವಿಯಿಂದ ಮುಕ್ತಳಾಗಬಹುದು, ಆಗಲೇ ಬೇಕು ಎಂದುಕೊಂಡಳು ಅವಳು ಅವಳಿಗಿಂತ ಆತುರದಿಂದ ಅದನ್ನೇ ಬಯಸುತ್ತಿದ್ದವರು ಸೇತುರಾಯ, ಅವನ ಮಿತ್ರರು ಸಮಯ ಒದಗಿದೊಡನೆ ತಾನಾಗಿ ಪ್ರಧಾನಿಪಟ್ಟ, ಅಧ್ಯಕ್ಷ ಪದವಿ ಬಿಟ್ಟುಕೊಡುವೆನೆಂದು ಆಕೆ ಸೇತುರಾಯನಿಗೆ ತಿಳಿಸಿದ್ದಳಾದರೂ ಅವನಿಗೆ ಆ ವಿಷಯದಲ್ಲಿ ನಂಬಿಕೆ ಸಾಲದು "ಅವಳು ಸದಾ ಚಂಚಲೆ, ಇಷ್ಟೊಂದು ಶಕ್ತಳಾಗಿದ್ದರೂ ತಮ್ಮ ಧ್ಯೇಯ ಮತ್ತು ಅದರ ಸಾಧನೆಗಳ ವಿಚಾರದಲ್ಲಿ ಇನ್ನೂ ಚಾಂಚಲ್ಯ ಒಡೆದು ಕಾಣಿಸುತ್ತಿದೆ ಅವಳಿಂದ ಆಗಬೇಕಾದ ಕಾರ್ಯಗಳೆಲ್ಲ ಆದುವು, ಜನವಾದಿಗಳ ಶಕ್ತಿ ಕುಗ್ಗಿತು. ದೇಶವಾದಿಗಳ ಶಕ್ತಿ ಮುರಿಯಿತು, ಅಧಿಕಾರದಲ್ಲಿ ತಮ್ಮ ಬೇರು ಊರಿತು ಇನ್ನು ಅವಳನ್ನು ಹಿಂದಕ್ಕಿರಿಸಿ ತಾನು ಮುಂದೆ ಬರುವಕಾಲ ಒದಗಿದೆ" ಎಂದು ಸೇತುರಾಯನಿಗನಿಸುತ್ತಿದೆ

ಮಾನಜಿಲ್ಲೆಯ ಜನಗಳ ಕಣ್ಣನ್ನು ಕುಕ್ಕುವುದಕ್ಕೆ, ಎಂಬಂತೆ ಶ್ರಮಗಾರ ಪಕ್ಷದ ವಾರ್ಷಿಕ ಅಧಿವೇಶನವನ್ನು ಮಾನ ನಗರದಲ್ಲಿಯೇ ಗೊತ್ತುಮಾಡಿದ್ದಾರೆ. ಮಾನವತಿ ನದಿಯ ಚಿಕ್ಕ ನೀರ್ಕಟ್ಟೆಗೆ ತಾಗಿ

ಒಂದು ಸುಂದರ ವಿಸ್ತರಣವಿದೆ. ವಿಸ್ತರಣದ ಒಂದು ತುದಿಯಲ್ಲಿ ಚಿಕ್ಕ ಬಯಲಿದೆ, ಅಲ್ಲಿ ಭವ್ಯ ಚಪ್ಪರವನ್ನು ಹಾಕಿ ಅದನ್ನು ನಡೆಯಿಸು ವವರಿದ್ದರು. ಆ ಸ್ಥಳವು ಬಹಿರಂಗ ಅಧಿವೇಶನಕ್ಕೂ, ಪ್ರಮುಖ ಕಾರ್ಯಕರ್ತರ ಕೂಟಕ್ಕೂ ಅನುಕೂಲವಾಗಿತ್ತು ಸಮ್ಮೇಳನದ ದಿನವೇ ಪ್ರಧಾನಿಯೂ, ಪಕ್ಷದ ಅಧ್ಯಕ್ಷಳೂ ಆದ ಕಾಂಚನಮಾಲೆ ಅಲ್ಲಿಗೆ ಹೋಗುವವಳು ಅವಳಿಗೂ, ಸಂಗಡದ ಇತರ ಎಲ್ಲ ನಾಯಕರಿಗೂ ಅಭೂತಪೂರ್ವ ಸ್ವಾಗತದ ಏರ್ಪಾಟಾಗಿತ್ತು ಪತ್ರಕರ್ತರುಗಳಿಗೆಲ್ಲ ಆಮಂತ್ರಣ ಹೋಗಿತ್ತು. ಆದರೆ ಅಂಥವರಿಗೆ ಬಹಿರಂಗ ಸಮ್ಮೇಳ ನಕ್ಕಷ್ಟೆ ಪ್ರವೇಶ ಅದಕ್ಕಿಂತ ಮುಂಚೆ ಪಕ್ಷದ ಕೆಲಸಗಾರರ ಸಭೆ ನಡೆದು, ಹೊಸ ಅಧ್ಯಕ್ಷರ ಆಯ್ಕೆ ನಡೆಯಬೇಕು. ಈ ಬಾರಿ ಆ ಪದವಿ ಸರ್ವಸಮ್ಮತಿಯಿಂದ ಸೇತುರಾಯನಿಗೆ ಸಲ್ಲಬಹುದು ನಾಳಿನ ಪ್ರಧಾನಿ ಪಟ್ಟವೂ ಅವನಿಗೇನೆ ಕಾಂಚನಮಾಲೆಯು ಆಡಳಿತೆಯ ಕಾರ್ಯಗಳ ದೆಸೆಯಿಂದ, ತನ್ನ ಇತರ ಸಂಚಾರಗಳನ್ನು ಮುಗಿಸಿ ಕೊಂಡು – ಈ ಕಾರ್ಯಕರ್ತರ ಸಭೆಗೆ ವೇಳೆಗೆ ಸರಿಯಾಗಿ ಬರುವವಳು.

ಸಮ್ಮೇಳನಕ್ಕೆ ಕೆಲವು ದಿನಗಳ ಮುಂಚೆ ಮುದ್ದು, ಸೇತುರಾಯ ನೊಡನೆ ವೇತನಕ್ಕಾಗಿ ಜಗಳ ಹೂಡಿ, ತಿರುಗಿ ಕಾಂಚನಮಾಲೆಯ ಮನೆಯನ್ನು ಸೇರಿದ್ದ ಸಮ್ಮೇಳನಕ್ಕೆ ಒಂದೆರಡು ದಿನಗಳಿಗೆ ಮುಂಚಿತ ವಾಗಿ ಆಕೆ ರಾಜಪ್ರಮುಖನ ಭೇಟಿ ತೆಗೆದುಕೊಂಡು ಕೆಲವೊಂದು ಮುಖ್ಯ ವಿಷಯಗಳನ್ನು ತಿಳಿಸಿ, ತನ್ನ ಆತುರ, ಭಯಗಳನ್ನು ಅವನ ತಲೆಯಲ್ಲಿ ತುಂಬಿಸಿ ಬಂದಿದ್ದಳು. ಅದಕ್ಕೆ ಆತ "ನೀನು ಅವಸರ ಮಾಡಿ ಬೇಕೆಂದೇ ಅವರ ಪಕ್ಷ ಸೇರಿ, ದೇಶದ ಸ್ಥಿತಿಯನ್ನು ಬಿಕ್ಕಟ್ಟಿಗೆ ತಂದಂತಾಗಲಿಲ್ಲವೇ ?" ಎಂದು ಕೇಳಿದಾಗ "ಅದೂ ನಿಜ, ನಾನು ತಂದ ಬಿಕ್ಕಟ್ಟನ್ನು ನಾನೇ ಪರಿಹರಿಸಿ ಕೊಟ್ಟರಾಯಿತಲ್ಲ" ಎಂದು ಹೇಳಿ, ನಕ್ಕು, ಅಲ್ಲಿಂದ ಹೊರಟಿದ್ದಳು ಆ ಮಾತಿನ ಅರ್ಥ ಅವನಿ ಗಂತೂ ಆಗಲಿಲ್ಲ.

ಸಮ್ಮೇಳನಕ್ಕೆ ಹೊರಡುವ ಮುಂಚಿನ ದಿನ ಆಕೆ ಮಾಡಿದ ಇನ್ನೊಂದು ಕೆಲಸವೆಂದರೆ, ರಾಮುದಾಸನ ಮನೆಗೆ ಹೋಗಿ, ಮಧ್ಯ

ರಾತ್ರಿಯಲ್ಲಿ ಅವನನ್ನು ಎಚ್ಚರಿಸಿ, ಸಂಭಾಷಣೆಗೆ ತೊಡಗಿದುದು ರಾಮದಾಸ ತನ್ನ ಚಿಂತೆಗಳನ್ನು, ಅವಳಿಂದಾಗಿ ಉಂಟಾದ ವಿಕಟ ಪರಿಸ್ಥಿತಿಯನ್ನು ಮುಚ್ಚುಮರೆಯಿಲ್ಲದೆ ಚರ್ಚಿಸಿದ ಅವಳು ಅದಕ್ಕೆ ನಗುತ್ತ "ಯಾಕೆ ಚಿಂತಿಸುತ್ತೀರಿ? ಒಂದು ವರ್ಷ ಕಾದಿರಂತೆ ಇನ್ನು ಕಾಯಬೇಕಾದುದು ಒಂದೆರಡು ದಿನ ಮಾತ್ರ" ಎಂದಳು

"ಅಷ್ಟರಲ್ಲಿ ಏನಾಗುತ್ತದೆ? ಈ ಒಂದು ವರ್ಷದ ಅನುಭವವೇ ಸಾಕು ಗೊಂಡಾರಣ್ಯ ಗೂಂಡಾರಾಜ್ಯವಾಗುವುದಷ್ಟೇ ಉಳಿದಿದೆ ಅದರ ಹೊಣೆ ನಿಮ್ಮದು"

"ನನಗೆ ತಿಳಿದಿದೆ ನಾನು ನನ್ನ ಗುರು ಕಾಣಿಕೆ ಕೊಟ್ಟ ಮೇಲೆ ನೀವಂಥ ಮಾತನ್ನು ಹೇಳಲಾರಿರಿ ನಾಳೆ ನಾನು ನನ್ನ ಅಧ್ಯಕ್ಷ ಪದವಿ ಬಿಡುವವಳು"

"ಅದನ್ನೂ ಕೇಳಿದ್ದೇನೆ, ಆಶ್ಚರ್ಯವಿಲ್ಲ ಯಾವ ಪಕ್ಷದಲ್ಲೂ ನೀವು ಪ್ರಯೋಗ ಮಾತ್ರಕ್ಕೆ ಸಿಲ್ಲುವವರು ಆದರೇನು? ನಿಮ್ಮನ್ನು ಮೀರಿಸಬಲ್ಲ ಮಹಾನುಭಾವರ ಕೈಯಲ್ಲಿ ದೇಶವನ್ನು ಒಪ್ಪಿಸಿದಿರಿ. ಇನ್ನು ಮುಂದೆ ಚುನಾವಣೆಯೂ ಬೇಡ, ಏನೂ ಬೇಡ. ಇವರಿರುವ ತನಕ ನನಗೆ ಮರುಚುನಾವಣೆಯ ಹಂಬಲ, ಧೈರ್ಯ ಎರಡೂ ಕಳೆದಿದೆ"

"ರಾಮದಾಸ್, ಇನತ್ತು ನೀವು ನನ್ನನ್ನು ನಂಬಲಾರಿರಿ, ನಾಳ ನಂಬುತ್ತೀರಿ ಅಷ್ಟು ಹೇಳುವುದಕ್ಕೇನೇ ಬಂದೆ"

"ಅಮ್ಮಾ, ನಿಮ್ಮನ್ನು ತಿಳಿಯುವ ಬುದ್ಧಿ ನನಗೆ ಸಾಲದು, ನಾನು ಹೆಡ್ಡ, ಈ ಗೊಂಡಾರಣ್ಯಕ್ಕಾಗಿ ಅಳುತ್ತಿದ್ದೇನೆ"

"ಅಷ್ಟಿದ್ದರೆ ಸಾಕು ನಾನು ಬೆಳಗ್ಗೆಯೇ ಮಾನ ನಗರಕ್ಕೆ ಹೊರಡಬೇಕು, ನಾಳೆ ನಮ್ಮ ಸಮ್ಮೇಳನವಿದೆ ನಡುವೆ ನಿಮ್ಮನ್ನು ನೋಡುವುದಕ್ಕೆ ಬಂದೆ–ಇದೊಂದು ಕಾಗದವಿದೆ ಅದನ್ನೊಡೆಯದೆ ನಾಳೆ ರಾತ್ರೆ ಅದನ್ನು ನೀವು ತಿರುಮೂರ್ತಿಯವರಿಗೆ ಕೊಡಬೇಕು ಇದು ನಾನು ಅವರಲ್ಲಿ ಕೇಳುವ ಕ್ಷಮೆಯ ಪತ್ರ ಅದರ ಮುಂಚೆ ಕೊಡಬಾರದು, ಒಡೆಯಬಾರದು ನಾಳೆ ರಾತ್ರಿ ಎಂಟು ಗಂಟೆಯ ಮೇಲೆ ಕೊಡಿ. ಅವರು ಅದನ್ನು ಪ್ರಕಟಿಸಲಿ."

"ಏನದು ?"

"ಇಪ್ಪತ್ತನಾಲ್ಕು ತಾಸು, ಅಷ್ಟೂ ಇಲ್ಲ ಇಪ್ಪತ್ತೇ ತಾಸು ಕಾಯುವ ತಾಳ್ಮೆ ಇಲ್ಲವೇ ? ನನ್ನ ಹುಚ್ಚು ರೀತಿಗಳನ್ನು ಕಂಡು ಐದು ವರ್ಷಗಳ ಕಾಲವೇ ಸಹಿಸಿದರಂತೆ" ಎಂದು ಮುಪ್ರೆಯೊತ್ತಿದ ಆ ಪತ್ರವನ್ನು ಅವನ ಕೈಗೆ ಕೊಟ್ಟು, ಹುಚ್ಚಿಯಂತೆ ಅವನನ್ನು ತಬ್ಬಿಕೊಂಡು ಹೊರಟಳು ಕಣ್ಣಿಂದ ಒಂದು ಹನಿ ನೀರು ಉದುರಿತು. ಹೊರಡುತ್ತಾ "ಅದು ನನ್ನ ಉಯಿಲು, ರಾಜಕೀಯ ಉಯಿಲು ಅದರ ರಹಸ್ಯವನ್ನು ನಾಳಿನ ತನಕ ಕಾಯಬೇಕು ನಾಳೆಯಿಂದ ನಾನು ಈ ದೇಶದ ಹಿತಕ್ಕಾಗಿ ರಾಜಕೀಯಕ್ಕೇ ತಿಲಾಂಜಲಿ ಕೊಡುತ್ತೇನೆ" ಎಂದು ಹೇಳಿ ಅವಸರಿಸಿ ಹೊರಟು ಹೋದಳು

ಒಂದು ಕ್ಷಣಕ್ಕೆ ರಾಮದಾಸ ತಬ್ಬಿಬ್ಬಾಗಿ ನಿಂತ ಆ ಪತ್ರ, ವಿಚಿತ್ರ ಧ್ವನಿ, ಕಣ್ಣಲ್ಲಿ ಮಿಂಚಿದ ಕಂಬನಿ—ಇವೊಂದರ ಅರ್ಥವೂ ಆಗಲಿಲ್ಲ ಹೋಗಿ ಮಲಗಿಕೊಂಡರೆ ಅವನಿಗೆ ನಿದ್ದೆಯೂ ಬರಲೊಲ್ಲದು ರಾತ್ರಿಯೆಲ್ಲ ಕಳೆದು, ಹಗಲು ಬಂದ ಮೇಲೆ ಅದು ಮುಗಿಯುವುದಕ್ಕೆ ಎಷ್ಟು ಸಮಯಬೇಕು ಎಂದು ಆತ ಚಡಪಡಿಸಿದ . ತಿರುಮೂರ್ತಿಗೆ ತಾನು ಬರುವ ಸುದ್ದಿಯನ್ನು ಮುಂದಾಗಿ ತಿಳಿಸಿ, ಗಳಿಗೆಯನ್ನು ಕಾದು, ಅವನ ಮನೆಯನ್ನು ಸೇರುವಾಗ ದಿನವೇ ಯುಗವಾಗಿತ್ತು ಎಂಟು ಗಂಟೆಗೆ ಸಮನಾಗಿ ಹೋದ, ಅಲ್ಲಿದ್ದ ಇತರರು ಚದರುವತನಕ ಕಾದು, ಅನಂತರ ಮಾತು ತೊಡಗಿದ

ತಿರುಮೂರ್ತಿಯು ತೆಗೆದ ಬಾಯಿಗೆ 'ನಮ್ಮ ಕಾಂಚನಮೃಗದ ಮಹಾ ಸಮ್ಮೇಳನ ಇಂದಲ್ಲವೇ ? ನಾನು ವರದಿಗಾರರನ್ನು ಕಳುಹಿಸಿಲ್ಲ ವಾರ್ತಾ ಸಂಸ್ಥೆಯವರು ಕೊಡುವ ಸುದ್ದಿ ನನಗೆ ಸಾಕು ಅಲ್ಲೇನಾಗುತ್ತದೆ ಎಂಬುದು ಗೊತ್ತಿದೆ, ಪ್ರಕಟಿಸುವ ಆತುರವೂ ನನಗಿಲ್ಲ. ಅಂತೂ ಅವಳೊಬ್ಬಳು ದೇಶ ಮುಳುಗಿಸುವುದಕ್ಕೆ ಎಲ್ಲಿಂದ ಸಾರಥಿಯಾಗಿ ಬಂದಳೋ ! ಅರುಣಾಚಲಯ್ಯನವರು ನನ್ನ ಮಾತುಗಳನ್ನು ಕೇಳದೆ ಅವಳಿಗೆ ಆಶ್ರಯ ಕೊಟ್ಟ ದಿನವೇ, ಇಂಥ ಒಂದು ಕಾಲ ಬರುವುದಿದೆ ಎಂದು ತಿಳಿದಿದ್ದೆ ಒಂದು ಕ್ಷಣಕ್ಕೂ ಅವಳನ್ನು ನಾವು

ಆಗ ರಾಮದಾಸ "ಘಂಟೆ ಎಂಟು ಕಳೆದಿರಬೇಕು ಇದು ನಿನ್ನೆ ರಾತ್ರಿ ಅವಳೇ ನನ್ನಲ್ಲಿಗೆ ಬಂದು ನಿಮಗೆ ಕೊಡುವಂತೆ ಕೊಟ್ಟ ಕಾಗದ ಏನೋ ಕ್ಷಮಾಯಾಚನೆಯ ಪತ್ರವಂತ ಅವಳಿನ್ನು ರಾಜಕೀಯ ವನ್ನು ತ್ಯಜಿಸುತ್ತಾಳಂತೆ ಅದಕ್ಕಾಗಿ ಬಂದೆ, ಎಂಟು ಘಂಟೆಯ ಬಳಿಕವೇ ಕೊಡಬೇಕು ಎಂದಿದ್ದಳು

"ನನ್ನಲ್ಲಿ ಕ್ಷಮೆ ಕೇಳುವುದೇನು ಬಂತು? ನಾನೆಷ್ಟರವನು? ಅವಳಿಗೆ ನನ್ನಲ್ಲಿರುವ ಅಭಿಮಾನವೂ ಅಷ್ಟೇನೇ ಅರುಣಾಚಲಯ್ಯ ನವರು ಇರುವ ತನಕ ಅವಳೊಂದು ಹಿಡಿತದಲ್ಲಿದ್ದಳು. ಸೇತುವಿನ ಬಲೆಗೆಬಿದ್ದ ಮೇಲೆ ಅವಳ ನಿಜವಾದ ಸ್ವಭಾವ ಬಯಲಾಯಿತು"

'ತಿರುಮೂರ್ತಿಯವರೇ, ನಿಮ್ಮದೆಲ್ಲ ಅವಸರದ ತೀರ್ಮಾನ. ಅವಳು ಸಾಮಾನ್ಯ ಹೆಂಗಸಲ್ಲ, ನೀವೆಣಿಸುವಷ್ಟು ಕೆಟ್ಟವಳೂ ಅಲ್ಲ ಅವಳಿಗೆ ನಮ್ಮ ಪಕ್ಷದಲ್ಲಿನ ಅಭಿಮಾನವೂ ಹೋಗಿಲ್ಲ. ನಾನು ನಿಮಗೆ ತಿಳಿಸದ ಸಂಗತಿಗಳುಂಟು. ಇನ್ನು ತಿಳಿಸಬಹುದೆಂದು ಕಾಣುತ್ತದೆ- ನಮ್ಮ ಚುನಾವಣೆಯ ಕಾಲದಲ್ಲಿ ನಮ್ಮ ಪಕ್ಷಕ್ಕೆ ಐವತ್ತು ಸಾವಿರಕ್ಕಿಂತ ಹೆಚ್ಚಾಗಿ ನಗದು ಹಣವನ್ನು ತಂದು ಕೊಟ್ಟಳು ನಾನು ನಿಮಗೆ ಬೇರೆಯೇ ಹತ್ತು ಜನರ ಹೆಸರು ಹೇಳಿದೆ, ಅದು ಅವಳು ಕೊಟ್ಟ ಹಣ ಎನ್ನಲಿಲ್ಲ ಲಾಲಚಂದನ ವಿಚಾರದಲ್ಲಿ—ಇಂಥಿಂಥ ಆಟ ನಡದೀತು ಎಂದು ಅವಳೇ ಎಚ್ಚರಿಸಿದ್ದಳು ಚುನಾವಣೆ ಕಳೆದ ಮೇಲೆ ಅರ್ಜಿಗೆ ಬೇಕಾದ ಬೆಂಬಲ, ಸಲಹೆ ಕೊಟ್ಟವಳು ಅವಳೇ ಅವಳ ಮನಸ್ಸಿನಲ್ಲಿ ಹುದುಗಿದ ರಹಸ್ಯ ನಮಗೆ ತಿಳಿಸುವುದಿಲ್ಲ. ಅಷ್ಟೇ ಹೊರತು ನಮ್ಮ ಮೇಲೆ ಅವಳಿಗೆ ಎಂದೂ ಸ್ನೇಹ ಕಳೆದಿಲ್ಲ ನೀವು ಇಷ್ಟೆಲ್ಲ ಅವಳ ಮೇಲೆ ಆಡುತ್ತಿದ್ದೀರಿ ಬಯ್ದು ಬರೆದಿದ್ದೀರಿ, ನಿಮ್ಮನ್ನು ಕುರಿತು ಅವಳು ಒಂದಾದರೂ ಕೆಟ್ಟ ಮಾತು ಆಡಿಲ್ಲ. 'ನಾಳೆ ಅವರಿಗೇ ತಿಳಿಯುತ್ತದೆ' ಎಂದಿದ್ದಳು."

ಆ ಮಾತುಗಳನ್ನು ಕೇಳಿ ತಿರುಮೂರ್ತಿಗೆ ಸೋಜಿಗವಾಯಿತು "ಅಷ್ಟೆಲ್ಲ ಹಣ ಕೊಟ್ಟಳಾದರೆ ನೀವೇಕೆ ನನಗೆ ಹೇಳಲಿಲ್ಲ?" ಎಂದು ಕೇಳಿದ

"ಹೇಳಬಾರದೆಂದಿದ್ದಳು ನಾನು ಹೇಳುವುದಿಲ್ಲವೆಂದು ಮಾತು

ಕೊಟ್ಟಿದ್ದೆ ಇಂದೇಸೋ ತೋರಿ ನಿನಗೆ ಹೇಳಬೇಕೆನಿಸಿತು, ಹೇಳಿದೆ ಆಗಕು ನಿಜವಾಗಿಯೂ ಒಂದು ಹುಲಿ. ಏನು ಮಾಡುವುದಕ್ಕೂ ಹೆದರದ ಜೀವ ಇಂದು ಅಂಥವೇ ಏನನ್ನಾದರೂ ಮಾಡುತ್ತಾಳೆ ಎಂಬ ಸಿರೀಕ್ಷೆಯ ಭಯುಗಳು ನನಗೆ ಅವಳ ಆಳ ನನಗೆ ತಿಳಿಯದು"

"ಅವಳು ಹುಲಿಯೋ, ರಕ್ಕಸಿಯೋ-ಎಂಬುದು ನನಗೂ ಅನುಮಾನ" ಎಂದು ಆ ಲಕೋಟೆಯನ್ನು ಒಡೆದು ಇಬ್ಬರೂ ಆ ಪತ್ರವನ್ನು ನೋಡ ತೊಡಗಿದರು ಅದರಲ್ಲಿ ವಿಸರ ವಿವರವಾಗಿ ಆಕೆ ತನ್ನ ನಡತೆಯನ್ನು ಸಮರ್ಥಿಸಿ ಬರೆದಿದ್ದಳು 'ಅರುಣಾಚಲಯ್ಯ ನವರನ್ನು ಕೊಲೆ ಮಾಡಿದ ಪಾತಕಿಗಳ ಸಂಹಾರಕ್ಕೆ ಹೊರಟವಳು ನಾನು ಅದರ ಸತ್ಯವು ಇನ್ನು ತಾನು, ತಾಸೇರಿಷುಗಳಲ್ಲಿಯೇ ನಿನಗೆ ತಿಳಿದೀತು ಪ್ರೀತಿಯ ಬಂಧುಗಳೇ, ನಿನಗೆ ಕೊನೆಯ ವಂದನೆಗಳು ಈ ಪತ್ರ ತಲಪುವಾಗ ನಾನು ರಾಜಕೀಯವನ್ನು ಮಾತ್ರವಲ್ಲ ಇಹ ವನ್ನು ಬಿಟ್ಟಿರುತ್ತೇನೆ' ಎಂದು ಬರೆದಿತ್ತು

ಇಬ್ಬರೂ ಕಣ್ದೆರೆದು ಚಕಿತರಾಗಿ, ಒಬ್ಬರೊಬ್ಬರ ಮುಖ ನೋಡಿ ದರು-'ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆಯೋ? ಏನುಕತೆ?' ಎಂದು ಗಾಬರಿಗೊಂಡರು ಫೋನ್ ಹಿಡಿದು ಅವಳ ಅಣ್ಣ ಡಾ ನಾಗರ ನೊಡನೆ ಅವಳೆಲ್ಲಿದ್ದಾಳೆಂದು ತಿಳಿದೂ ಕೇಳಿದರು 'ಸಮ್ಮೇಳನದಲ್ಲಿರ ಬೇಕೆ'ಂಬ ಉತ್ತರ ಬಂದಿತು ಕೆಳಗಿನ ಕಾಯಿಯಲ್ಲಿ ಟೆಲಿಪ್ರಿಂಟರ್ ಒಂದೇ ಸಮನ ಬಡಿದುಕೊಳ್ಳುತ್ತಿತ್ತು ತಿರುವನಂತಪುರಯ ಪತ್ರಿಕೆಯ ಕಚೇರಿಗೆ ಸಮ್ಮೇಳನದ ವರದಿ ಬರುತ್ತಲಿತ್ತು. ಅಲ್ಲಿಗೆ ಧಾವಿಸಿ ಅಚ್ಚಾದ ಕಾಗದಗಳನ್ನು ಹರಿದು ಅವಳ ಭಾಷಣದ ಮಾತುಗಳನ್ನು ಓದ ತೊಡಗಿದರು ಕಾಂಚನಮಾಲೆ ತನ್ನ ಹೃದಯವನ್ನೇ ತೆರೆದು ಆವೇಶಪೂರ್ಣ ಮಾತ್ರವಲ್ಲ, ದ್ವೇಷಪೂರ್ಣವಾದ ಭಾಷಣ ಮಾಡಿ ದಂತಿತ್ತು. ಬಹಿರಂಗ ಸಮ್ಮೇಳನದಲ್ಲಿ ನಿಂತು ತನ್ನ ಅಧ್ಯಕ್ಷಪದವನ್ನು ಬಿಟ್ಟು ಕೊಡುತ್ತಾ, ಶ್ರಮವಾದಿಗಳ ಒಂದೊಂದು ಅಪರಾಧವನ್ನೂ, ವಾಮಮಾರ್ಗವನ್ನೂ ಬಯಲಿಗೆಳೆಯುತ್ತಿದ್ದಳು 'ಅರುಣಾಚಲಯ್ಯ ನವರನ್ನು ಕೊಂದವರು ನೀವೇ" ಎಂದಿದ್ದಳು. ಆತುರ ಹೆಚ್ಚಿ ವರದಿಯ ಮುಂದಿನ ಅಂಶ ನೋಡುತ್ತಿದ್ದಾಗಲೇ ಟೆಲಿಪ್ರಿಂಟರ್ ಅರ್ಧ

ದಲ್ಲಿ ನಿಂತಿತು

ಲೈನು ನಿಂತುದೇಕೆಂದು ಆಶ್ಚರ್ಯವಾಯಿತು, ಕಾರಣ ತಿಳಿಯ ಲಿಲ್ಲ "ಏನೋ ಅನಾಹುತವಾಗಿದೆ ಇಂಥ ಭಾಷಣ ಮಾಡುವಾಗ ಯಾರಾದರೂ ಗುಂಡಿಟ್ಟು ಕೊಂದರೂ ಆಶ್ಚರ್ಯವಿಲ್ಲ" ಎಂಬ ಭೀತಿ ತಲೆದೋರಿತು. ಅಲ್ಲಿಂದ ಮುನಸ್ಸು ತಡೆಯದೆ ಮೋಟಾರಿನಲ್ಲಿ ಕುಳಿತು ಕೊಂಡು ಮಾನನಗರಕ್ಕೆ ಧಾವಿಸುವ ಯೋಚನೆಯನ್ನು ಮಾಡಿದರು ಅಲ್ಲಿಗೆ ನೂರೈವತ್ತು ಮೈಲುಗಳ ದೂರವಿದೆ ಐದು ತಾಸುಗಳ ದಾರಿ ಆದರೂ ಕತ್ತಲೆನ್ನದೆ ಹೊರಟರು ದಾರಿಯಲ್ಲಿ ಗಾಡಿಯೂ ಕೆಟ್ಟಿತು ಆತುರ, ಭಯ ಹೆಚ್ಚಿತು ಗಾಡಿ ಸರಿಪಡಿಸಿಕೊಂಡು ಮಾನನಗರ ವನ್ನು ಸಮೀಪಿಸುವಾಗ ಬೆಳಕು ಹರಿದಿತ್ತು ದಾರಿಯಲ್ಲೇ ಅಪ ಘಾತವೊಂದರ ಸುದ್ದಿ ಕೇಳ ಸಿಕ್ಕಿತು 'ಸ್ಫೋಟನವಾಯಿತು ಎನ್ನು ತ್ತಾರೆ.' 'ಭೂಕಂಪವಾಯಿತು ಎನ್ನುತ್ತಾರೆ' 'ನೆರೆ ಬಂದಿದೆ ಎನ್ನು ತ್ತಾರೆ' 'ಮಾನನಗರದ ಒಂದು ಭಾಗ ಮುಳುಗಿದೆ' ಎನ್ನುತ್ತಾರೆ. ಅಂತೂ ಸ್ಥಳವನ್ನು ಸಾಕಷ್ಟು ಸಮೀಪಿಸಿದಾಗ ಸುದ್ದಿ ನಿಜವೆಂದೂ, ರಾತ್ರಿ ಎಂಟು ಗಂಟೆಯ ವೇಳೆಗೆ ಸಿಡಿಲು ಬಡಿದಂತಾಗಿ ಮಾನನಗರದ ವಿಸ್ತರಣದ ಮೇಲಿದ್ದ ಪುಟ್ಟ ನೀರ್ಕಟ್ಟೆಯೊಂದು ಒಡೆಯಿತೆಂದೂ, ವಿಸ್ತರಣದ ಭಾಗ, ಸಮ್ಮೇಳನ ಭಾಗಗಳನ್ನೆಲ್ಲ ಮುಳುಗಿಸಿತೆಂದೂ, ಸುದ್ದಿ ದೊರೆಯಿತು. ಸುದ್ದಿ ಹೇಳಬಹುದಾದ ನಾನೂರು ಐನೂರು ಮಂದಿ ನೀರು ಪಾಲಾದುದಂತು ನಿಜ ಹೆಚ್ಚಿನವರು ಯಾರು ಏನು ಎಂಬುದೆಲ್ಲ ತಿಳಿದೇ ಇತ್ತು

ಮುಂದುವರಿಯುವ ಧೈರ್ಯವಾಗಲಿಲ್ಲ ಮನಸ್ಸು ತಬ್ಬಿಬ್ಬಾಗಿ ಹೋದಷ್ಟೇ ಆತುರದಿಂದ ಊರಿಗೆ ಮರಳಿ ಬಂದರು ಹೋಗದಿದ್ದರೂ ಒಳಿತಾಗುತ್ತಿತ್ತೇ ಎಂದೆನಿಸಿತು ಡಾ ನಾಗರನನ್ನು ಮನೆಗೆ ಕರಯಿಸಿ ಕೊಂಡು ಆಕೆಯ ಪತ್ರವನ್ನು ತೋರಿಸಿದರು ಅಂತೂ 'ಹೇಳಿದಂತೆ ಮಾಡಿದಳು' ಎಂಬ ಬೆರಗು, ಅಭಿಮಾನ, ದುಃಖಗಳಲ್ಲಿ ಮುಳುಗಿದರು ಕ್ರಮೇಣ ಸಮ್ಮೇಳನ ನಾಶಮಾಡುವುದಕ್ಕಾಗಿ ಯಾರೋ ನೀರ್ಕಟ್ಟೆ ಯನ್ನು ಸಿಡಿಮದ್ದಿನಿಂದ ಒಡೆದರೆಂಬ ಸುದ್ದಿಯೂ, ಅದು ಸಿಡಿಲಿನ ಬಡಿತದಿಂದ ಒಡೆಯಿತೆಂಬ ಇನ್ನೊಂದು ಸುದ್ದಿಯೂ ಹುಟ್ಟಿಕೊಂಡಿತು.

ರಿನ ಪ್ರವಾಹದಲ್ಲಿ ನೂರಾರು ಎಂದಿಯ ಶವಗಳು ತೇಲಿ ಬಂದು ಿರಕಿದುವಾಗಲೂ, ಕಾಂಚನಮಾಲೆಯ ಕಳೇಬರ ಮಾತ್ರ ಯಾರಿಗೂ ಾಣಿಸಲಿಲ್ಲವೆನ್ನುತ್ತಾರ ನೂರು ದಿನಗಳ ಮೇಲೆ ಕಾಂಚನಮಾಲೆ ್ಲಿಗೆ ಹೋಗಿದ್ದ ಮುದ್ದು, ಅವಳ ಆದೇಶದಂತೆ ರಾಮುದಾಸನನ್ನು ೇಟಿಯಾಗಿ, ತನಗೆ ತಿಳಿದ ಕೆಲವು ಸಂಗತಿಗಳನ್ನು ಹೇಳಿದ ತಾನು ಆ ೇಳೆಯಲ್ಲಿ ಸೀರ್ಕಟ್ಟೆಯ ಮೇಲಿನ ಗುಡ್ಡದ ಬಂಗಲೆಯಲ್ಲಿ ಕಾದು ಕುಳಿತಿದ್ದನೆಂದೂ, ಒಂದು ಮಾತು ಅವರಿಬ್ಬರಿಗೆ ತಿಳಿಸಬೇಕೆಂದು ುಂಚಿತವಾಗಿಯೆ ಕಾಂಚನಮಾಲೆ ಹೇಳಿದ್ದಳೆಂದೂ, ಕಂಬನಿಯನ್ನು ಾಸಿ ವಿವರಿಸಿದ

"ಏನು ಮಾತದು ?

"ನನಗೆ ಅರ್ಥವಾಗಲಿಲ್ಲ ಇಷ್ಟೇ ಅಂದರು–'ಇನ್ನು ಗೊಂಡಾ ್ಯವನ್ನು ಬದುಕಿಸುವ ಕೆಲಸ ನಿಮ್ಮದು ಎನ್ನು'–ಎಂದರು."

ಮುದ್ದು ತನ್ನ ಒಡತಿಯನ್ನು ಸ್ಮರಿಸಿ ಅಲ್ಲೇ ಮಗುವಿನಂತೆ ಅಳ ಡಗಿದ ರಾಮುದಾಸ ತಿರುಮೂರ್ತಿಯರಿಬ್ಬರೂ ಅವನ ಜತೆಗೆ, ವೀರಕನ್ನೆಯನ್ನು ನೆನೆದು ಶ್ರದ್ಧಾಂಜಲಿಯನ್ನರ್ಪಿಸಿದರು.



# ಈವರೆಗಿನ ಕೈಹೊತ್ತಿಗೆಗಳು

| | | |
|---|---|---|
| ೧. | *ಗೃಹಲಕ್ಷ್ಮಿ | ನ. ಕೃ |
| ೨. | *ಮಲ್ಲಿ | ದೇವುಡು |
| ೩. | *ವಿಮೋಚನೆ | ನಿರಂಜನ |
| ೪. | *ಪರದೇಶಿ | ಕುಲಕರ್ಣಿ ಬಿಂದುಮಾಧವ |
| ೫. | *ಸ್ವರ್ಣರೇಖೆ | ವೀರಕೇಸರಿ |
| ೬. | *ಅಪಸ್ವರ | ತ್ರಿವೇಣಿ |
| ೭. | *ರಾಯರು ಕಂಡ ರಂಗು | ಬೆಳ್ಳಿ ರಾಮಚಂದ್ರರಾವ್ |
| ೮. | *ರುಕ್ಮಿಣಿ ... | ಅ. ನ. ಕೃ |
| ೯. | *ವಜ್ರದುಂಗುರ | ನಾ ರಾಜಣ್ಣ |
| ೧೦. | *ಕೇದಿಗೆ ವನ | ತ ರಾ ಸು |
| ೧೧. | *ಸಮಾಜ ಗರ್ಭದಲ್ಲಿ | ಸಿ ಬಿ. ಚಂದ್ರಶೇಖರ್ |
| ೧೨. | ತೀರಿದ ಆಸೆ | ಸೇವ ನಮಿರಾಜಮಲ್ಲ |
| ೧೩. | ಪ್ರಕೃತಿ .. | ಶ್ರೀರಂಗ |
| ೧೪. | ಹೊಲ-ಮನೆ | ಶ್ರೀಕೃಷ್ಣ ಪಾಟೀಲ |
| ೧೫. | ದೇವದಾಸಿ-ಎಚ್ಚಮನಾಯಕ | ದಿವಂಗತ ಕೆ ಹಿರಣ್ಣಯ್ಯ |
| ೧೬. | ರಾಣೀ ಅಜ್ಞಾತಾ ... | ನವಗಿರಿನಂದ |
| ೧೭. | ಬಯಕೆಯ ಬೆಲೆ | ಎಚ್ಚೆಸ್ಕೆ |
| ೧೮. | ರಂಗಮ್ಮನ ವಠಾರ | ನಿರಂಜನ |
| ೧೯. | ಗೊಂಡಾರಣ್ಯ | ಶಿವರಾಮ ಕಾರಂತ |

## ಅಚ್ಚಿನಲ್ಲಿ

ಶ್ರೇಯಾಂಸ ... ಮಿರ್ಜಿ ಅಣ್ಣಾರಾಯ

## ಮುಂಬರುವ ಕೈಹೊತ್ತಿಗೆಗಳು

ತಾಯಿ ಮಕ್ಕಳು — ಅ. ನ ಕೃ

ನಾಟ್ಯಸರಸ್ವತಿ ಶಾಂತಲಾದೇವಿ — ಅ ನ

---